ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೭

ಪ್ರಧಾನ ಸಂಪಾದಕ

ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಯಶೋಧರ ಚರಿತೆ

(ಎರಡನೆಯ ಮುದ್ರಣ)



ಸಂಪಾದಕ

ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ.

ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೪೩

# ಅರಿಕೆ

## (ಮೊದಲನೆಯ ಮುದ್ರಣಕ್ಕೆ ಬರೆದದ್ದು)

ಕೈಗೊಂಡ ಕೆಲಸದಲ್ಲಿ ನನಗೆ ಅನುವಾದ ಹಿರಿಯರ, ಕಿರಿಯರ ನೆರವನ್ನು ನೆನೆಯುವುದಕ್ಕೆ ಅಲ್ಲದಿದ್ದರೆ ಈ ಅರಿಕೆಯನ್ನು ಬರೆಯ ಬೇಕಾಗಿಯೇ ಇರಲಿಲ್ಲ.

ಗ್ರಂಥದ ವಿಷಯವಾಗಿ, ಕವಿಯ ವಿಷಯವಾಗಿ, ಅವನ ಇತರ ಕೃತಿಗಳ ವಿಷಯವಾಗಿ ಹೇಳಬೇಕೆಂದು ತೋರಿದ್ದನ್ನು ಪೀಠಿಕೆಯಲ್ಲಿ ಹೇಳಿದೆ. ಯಶೋಧರ ಚರಿತೆಯಲ್ಲಿ ಒಂದು ಬಗೆಯ ಪ್ರಣಯಕಥೆ ನಿರೂಪಣೆಯಾಗಿದ್ದರೂ ಅದು ಧರ್ಮಬೋಧೆಗಾಗಿ ಬರೆದ ಗ್ರಂಥ. ಯಶೋಧರನ ಆತ್ಮಪರಿಣತಿಯನ್ನು ಕುರಿತು ಹೇಳುವುದು ಕವಿಯ ಮುಖ್ಯ ಆಶಯ; ಅಮೃತಮತಿಯ ಪ್ರಣಯದ್ರೋಹದ ಪ್ರಕರಣ ಪ್ರಾಸಂಗಿಕ, ಇಲ್ಲವೆ ಗೌಣ. ಹೀಗಲ್ಲವೆ, ಗ್ರಂಥವನ್ನು ಪ್ರಣಯ ಕಾವ್ಯ ವೆಂದು ಮಾತ್ರ ಬಗೆಯುವುದಾದರೆ ಅಮೃತಮತಿಯ ದ್ರೋಹವನ್ನು ಚಿತ್ರಿಸುವಲ್ಲಿ ಕವಿ ಆ ಹೆಣ್ಣಿಗೆ ಅನ್ಯಾಯ ಮಾಡಿರುವನೆಂದೇ ಹೇಳ ಬೇಕಾದೀತು. ಕಾಮಕ್ಕೆ ಕಣ್ಣಿಲ್ಲವೆಂಬುದು ನಿಜವಿರಬಹುದು; ಆದರೂ ಅಮೃತಮತಿಯಂಥ ರಾಣಿ ಗಂಡ ಯಶೋಧರನಂಥ ಸುಂದರರಾಜನನ್ನು ಬಿಟ್ಟು ಜಾರ ಅಷ್ಟವಂಕನಂಥ ಕೀಳ ಕುರೂಪಿಯನ್ನು ಅಳುಪಿ ಬಯಸಿ ದಳು ಎಂದು ನಿರೂಪಿಸಿದರೆ, ಅದು ಪ್ರಣಯದ ಸಹಜವ್ಯಾಪಾರದ ಪ್ರತಿಪಾದನೆಗಿಂತ ಅಸ್ವಾಭಾವಿಕ ಕಾಮವಿಕಾರದ ವಿಪರೀತ ಪ್ರತಿ ಪಾದನೆಯೆಂದು ತೋರೀತು. ಬೇರೊಂದು ಬಗೆಯ ಕಾಮಪ್ರವೃತ್ತಿಯ ನಿದರ್ಶನಕ್ಕಾಗಿಯೂ ಪ್ರಣಯ ಕಥೆಯನ್ನು ಚಿತ್ರಿಸುವಲ್ಲಿ ಜನ್ನನ ಜಾಣ್ಮೆ ಯನ್ನು ತೋರಿಸುವುದಕ್ಕಾಗಿಯೂ ಅವನ ಅನಂತನಾಥ ಪುರಾಣದಲ್ಲಿಯ ಚಂಡಶಾಸನ ಕಥಾಭಾಗವನ್ನು ಸಂಗ್ರಹಿಸಿ ಇದರೊಡನೆ ಕೊಟ್ಟಿದೆ.

ಯಶೋಧರ ಚರಿತೆಯ ಗ್ರಂಥ ಆಕಾರದಲ್ಲಿ ಸಣ್ಣದು; ಅಲ್ಲದೆ ಬೇರೆಯ ದೃಷ್ಟಿಯಿಂದಲೂ ಬಿಡಬೇಕಾದಂಥ ಪದ್ಯಗಳು ಅದರಲ್ಲಿ ತೀರ ಕಡಮೆ. ಇದರಿಂದ ಸಂಗ್ರಹದ ಕೆಲಸ ಕೊಂಚ ಕಷ್ಟವೇ ಆಯಿತೆನ್ನ ಬೇಕು. ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇಡಿಯ ಗ್ರಂಥವನ್ನು ಓದ ಬಯಸಬಹುದಾದ ಮಿಕ್ಕವರಿಗೂ ಉಪಯುಕ್ತವಾಗಿರಲೆಂದು ಸಂಗ್ರಹ

ದಲ್ಲ ಬಿಟ್ಟಿರುವ ಭಾಗವನ್ನು ಅನುಬಂಧವಾಗಿ ಸೇರಿಸಿದೆ. ಜೈನರಲ್ಲಿ ಅಹಿಂಸಾಧರ್ಮಬೋಧಕವಾದ ಈ ಯಶೋಧರ ವೃತ್ತಾಂತದ ಪ್ರಶಸ್ತಿ, ಪ್ರಸಾರಗಳು ಎಷ್ಟು ಎಂಬುದನ್ನು ತಿಳಿಸುವುದಕ್ಕಾಗಿ ಜೀವದಯಾಷ್ಟಮಿಯ ನೋಂಪಿಯ ಕಥೆಯನ್ನು ಅನುಬಂಧದಲ್ಲಿ ಕೊಟ್ಟಿದೆ. ಒಂದೇ ಓಲೆಯ ಪ್ರತಿಯಿಂದ ಈ ನೋಂಪಿಯ ಕಥೆಯನ್ನು ಸಂಪಾದಿಸಬೇಕಾಗಿ ಬಂದದ್ದರಿಂದಲೂ ಸಂಧಿಕಾಲದ ಗ್ರಂಥಗಳಲ್ಲಿ (ಇಲ್ಲವೆ, ಲಿಪಿಕಾರರ ಕೈಯಲ್ಲಿ) ಹಳಗನ್ನಡ ಹೊಸಗನ್ನಡ ಮೊದಲಾದ ಹಲಬಗೆಯ ಬೆರಕೆಯ ಪ್ರಯೋಗಗಳು ಹೇಗೆ ಕಾಣಬರುತ್ತವೆ ಎಂಬುದನ್ನು ತೋರಿಸುವುದಕ್ಕಾಗಿಯೂ ಗ್ರಂಥಪಾಠವನ್ನು ಬಲುಮಟ್ಟಿಗೆ ಮೂಲಪ್ರತಿಯಲ್ಲಿ ಇರುವಂತೆಯೇ ಕೊಟ್ಟಿದೆ.

ಯಶೋಧರ ಚರಿತೆಯ ಗ್ರಂಥಪಾಠವನ್ನು ಮೂರು ಓಲೆಯ ಪ್ರತಿಗಳಿಂದಲೂ ಎರಡು ಅಚ್ಚಿನ ಪ್ರತಿಗಳಿಂದಲೂ ಸಿದ್ಧಮಾಡಿದೆ. ಓಲೆಯ ಪ್ರತಿಗಳಲ್ಲಿ ಎರಡು ಕೀರ್ತಿಶೇಷರಾದ ಮಂ. ಆ. ರಾಮಾನುಜ ಅಯ್ಯಂಗಾರರೂ ನೋಡಿದ್ದು **ಗ, ಚ** ಎಂದು ಸಂಕೇತಿಸಿರುವ ಪ್ರತಿಗಳು. ಮೂರನೆಯದು ಸ್ವಾದಿಯ ಜೈನ ಮಠದಲ್ಲಿಯದು. ಇದನ್ನು **ಸ** ಎಂದು ಸಂಕೇತಿಸಿದೆ. **ಗ** ಮತ್ತು **ಸ** ಪ್ರತಿಗಳು ಹೆಚ್ಚು ಹೋಲಿಕೆಯುಳ್ಳವೂ ಹಳೆಯವೂ ತಕ್ಕಮಟ್ಟಿಗೆ ಶುದ್ಧವೂ ಆಧುವು. ಗ್ರಂಥಪಾಠದಲ್ಲಿ ಆದಷ್ಟುಮಟ್ಟಿಗೆ ಈ ಎರಡು ಪ್ರತಿಗಳನ್ನು ಅನುಸರಿಸಿದೆ. **ಗ** ಪ್ರತಿಯನ್ನು ಶಾಲಿವಾಹನಶಕ ೧೪೪೭ನೆಯ ಕ್ರೋಧನ ಸಂವತ್ಸರದ ಫಾಲ್ಗುಣ ಶುದ್ಧ ಬಿದಿಗೆ ಗುರುವಾರದಲ್ಲಿ ಶ್ರೀ ಲಲಿತಕೀರ್ತಿ ಭಟ್ಟಾರಕ ದೇವರ ಶಿಷ್ಯರಾದ ವರ್ಧಮಾನ ಅಣ್ಣಗಳು ಬರೆದ(ಲಿಪಿಮಾಡಿದ)ರೆಂದು ಅದರ ಕೊನೆಯಲ್ಲಿ ಹೇಳಿದೆ. ಅಚ್ಚಿನ ಪ್ರತಿಗಳು (೧) ಶ್ರೀಮಾನ್ ಪದ್ಮರಾಜ ಪಂಡಿತರಿಂದ ಸಂಪಾದಿತವಾದ್ದು **(ಕ)**, (೨) ಶ್ರೀಮಾನ್ ಮಂ. ಆ. ರಾಮಾನುಜ ಅಯ್ಯಂಗಾರರಿಂದ ಸಂಪಾದಿತವಾಗಿ ಕರ್ಣಾಟಕ ಕಾವ್ಯ ಕಲಾನಿಧಿ ಗ್ರಂಥಮಾಲೆಯಲ್ಲಿ ಪ್ರಕಟವಾದ್ದು **(ರಾ)**. ಹೆಚ್ಚಾಗಿ ವಿದ್ಯಾರ್ಥಿಗಳನ್ನೇ ಗುರಿಯಾಗಿಟ್ಟುಕೊಂಡು ಸಂಗ್ರಹವನ್ನು ಸಿದ್ಧಮಾಡಿರುವುದರಿಂದ ಅರ್ಥ ವ್ಯತ್ಯಾಸವಾಗಲಿ ಸಂದೇಹವಾಗಲಿ ಇದ್ದ ಹೊರತು ವೃಥಾ ಪಾಠಾಂತರಗಳನ್ನು ಕೊಡುವ ಗೋಜಿಗೆ ಹೋಗಿಲ್ಲ.

ಇನ್ನು ಉಳಿದಿರುವುದು ನೆರವು ನೆನವು. ಈ ಕೆಲಸವನ್ನು ನಾನು ಕೈಗೊಳ್ಳುವುದಕ್ಕೂ ಈಗ ಆಗಿರುವಷ್ಟುಮಟ್ಟಿಗಾದರೂ ನೆರವೇರಿಸಿರುವುದಕ್ಕೂ ನನ್ನ ಪೂಜ್ಯ ಗುರುಗಳಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ವಾತ್ಸಲ್ಯ ಮಮತೆಗಳೂ ಸಹಾಯ ಸಹಕಾರಗಳೂ ಮುಖ್ಯ ಕಾರಣಗಳು. ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರು ದಯವಿಟ್ಟು ಹಸ್ತಪ್ರತಿಯನ್ನು ಓದಿ ಅಲ್ಲಲ್ಲಿ ತಕ್ಕ ಸಲಹೆಗಳನ್ನು ಕೊಟ್ಟು ಉಪಕಾರ ಮಾಡಿದ್ದಾರೆ. ನನ್ನ ಹಿರಿಯರೂ ಮೆಚ್ಚಿನ ಕೆಳೆಯರೂ ಆದ ಶ್ರೀಮಾನ್ ವಿ. ಸೀತಾರಾಮಯ್ಯನವರೂ ನನ್ನ ಒಡನೋದಿಗಳೂ ಒಲವಿನ ಕೆಳೆಯರೂ ಆದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರೂ ನನ್ನ ಈ ಕೆಲಸದಲ್ಲಿ ಉದ್ದಕ್ಕೂ ನೆರವಾಗಿದ್ದಾರೆ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ರಾಳ್ಲಪಲ್ಲಿ ಅನಂತಕೃಷ್ಣಶರ್ಮರವರು 'ಜಸಹರ ಚರಿಉ'ವನ್ನು ನನಗೆ ಓದಿ ಅರ್ಥ ಹೇಳಿ ಮಾಡಿರುವ ಸಹಾಯ ಅಮೂಲ್ಯವಾದ್ದು. ಯಶೋಧರ ಚರಿತೆಯ ಗ, ಚ ಪ್ರತಿಗಳನ್ನೂ ಅನಂತನಾಥ ಪುರಾಣದ ಓಲೆಯ ಪ್ರತಿಯನ್ನೂ ಆಯಾ ಒಡೆಯರಿಂದ ನನಗೆ ಸಂಪಾದಿಸಿ ಕೊಟ್ಟಿರುವ ಉಪಕಾರ ನನ್ನ ಮಿತ್ರರಾದ ಶ್ರೀಮಾನ್ ಎನ್. ಅನಂತರಂಗಾಚಾರ್ಯರದು. ಸ್ವಾದಿಯ ಜೈನಮಠದ ಶ್ರೀ ಶ್ರೀ ಸ್ವಾಮಿಗಳವರು ಯಶೋಧರ ಚರಿತೆಯ ಸ ಪ್ರತಿಯನ್ನೂ ನೋಂಪಿಯ ಕಥೆಗಳ ಓಲೆಯ ಪ್ರತಿಯನ್ನೂ ದಯಪಾಲಿಸಿ ಅನುಗ್ರಹಿಸಿದ್ದಾರೆ. ಈ ಎಲ್ಲ ಮಹನೀಯರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ಅಂತೆಯೆ, ಬಿ. ಬಿ. ಡಿ. ಪವರ್ ಪ್ರೆಸ್ಸಿನವರಿಗೂ ನನ್ನ ವಂದನೆಗಳು ಸಲ್ಲಬೇಕಾಗಿವೆ.

## ಎರಡನೆಯ ಮುದ್ರಣ

ಪಾಠದಲ್ಲಿ ಒಂದೆರಡೂ ಮಿಕ್ಕೆಡೆ ಒಂದೆರಡೂ ಮಾಡಿರುವ ಮಾರ್ಪಾಟನ್ನು ಬಿಟ್ಟರೆ ಇದು ಮೊದಲ ಮುದ್ರಣದ ಪುನರ್ಮುದ್ರಣ.

ಬೆಂಗಳೂರು,
೨೮-೧೦-೧೯೪೩

ಕೆ. ವಿ. ರಾಘವಾಚಾರ್

# ಗ್ರಂಥಋಣ

೧ Winternitz : History of Indian Literature.

೨ A. A. Macdonell : Sanskrit Literature.

೩ A. B. Keith : History of Sanskrit Literature.

೪ ಜಸಹರ ಚರಿಉ (ಅಪಭ್ರಂಶ). ಶ್ರೀಮಾನ್ ಪಿ. ಎಲ್. ವೈದ್ಯ ಅವರಿಂದ ಸಂಪಾದಿತವಾದ್ದು.

೫ ಯಶಸ್ತಿಲಕ ಚಂಪು (ಸಂಸ್ಕೃತ). ಮಹಾಮಹೋಪಾಧ್ಯಾಯ ಪಂಡಿತ ಶಿವದತ್ತರಿಂದ ಸಂಪಾದಿತವಾದ್ದು.

೬ ವಾದಿರಾಜನ ಯಶೋಧರ ಕಾವ್ಯ (ಸಂಸ್ಕೃತ)

೭ ಯಶೋದರ ಕಾವಿಯಂ (ತಮಿಳು): ಶ್ರೀಮಾನ್ ಪಂಡಿತ ಟಿ. ಆರ್. ವೆಂಕಟರಾಮ ಅಯ್ಯಂಗಾರರಿಂದ ಸಂಪಾದಿತವಾದ್ದು.

೮ ಪದುಮನಾಭನ ಯಶೋಧರರಾಯ ಚರಿತೆ ಅಥವಾ ಜೀವದಯಾಷ್ಟಮಿ ಕಥೆ (ಕನ್ನಡ): (ಮೈಸೂರು ಪ್ರಾಚ್ಯ ಕೋಶಾಗಾರದಲ್ಲಿಯ ಹಸ್ತಪ್ರತಿ).

೯ ಚಂದಣವರ್ಣಿಯ ಯಶೋಧರ ಕಥೆ ಅಥವಾ ಜೀವದಯಾಷ್ಟಮಿ ಕಥೆ (ಕನ್ನಡ): (ಸ್ವಾದಿ ಜೈನಮಠದಲ್ಲಿಯ ಓಲೆಯ ಪ್ರತಿ).

೧೦ ಮೈಸೂರಿನ ಶಾಸನಗಳು

೧೧ ಕನ್ನಡ ಕವಿಚರಿತೆ: ಮಹಾಮಹೋಪಾಧ್ಯಾಯ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್‌ಬಹದ್ದೂರ್ ರಾ. ನರಸಿಂಹಾಚಾರ್ಯರದು.

೧೨ ಬೇರೆ ಕೆಲವು ಬರಹಗಳು.

# ಒಳಪಿಡಿ

# ಜನ್ನ

**ಕರ್ತೃ :** ಯಶೋಧರಚರಿತೆಯನ್ನು ಬರೆದು ಹೆಸರಾದ ಕವಿ ಜನ್ನ ಹಿರಿಯ ಜೈನ ಕವಿಗಳ ಸಂಪ್ರದಾಯವನ್ನು ಪಾಲಿಸಿ ತೀರ್ಥಂಕರ ಚರಿತ್ರೆಯೊಂದನ್ನೂ ಬರೆದಿದ್ದಾನೆ. ಅದು ಹದಿನಾಲ್ಕನೆಯ ತೀರ್ಥಂಕರನಾದ ಅನಂತ ಜಿನನ್ನನ್ನು ಕುರಿತ 'ಅನಂತನಾಥ ಪುರಾಣ.' ಅಲ್ಲದೆ, ಕಾಮಶಾಸ್ತ್ರವನ್ನು ಕುರಿತ 'ಅನುಭವ ಮುಕುರ' ಎಂಬ ಲಘುಕೃತಿಯೊಂದೂ ಜನ್ನ ಕರ್ತೃಕವೆಂದು ತೋರುತ್ತದೆ. ಕ್ರಿ. ಶ. ೧೧೯೧ ರಲ್ಲಿ ಹುಟ್ಟಿದ ಚೆನ್ನರಾಯಪಟ್ಟಣದ (೧೭೯ನೆಯ) ಶಾಸನವೂ, ೧೧೯೭ರಲ್ಲಿ ಹುಟ್ಟಿದ ತರಿಕೆರೆಯ (೪೫ನೆಯ) ಶಾಸನವೂ ಜನ್ನ ಬರೆದುವೆಂದು ಆ ಶಾಸನಗಳಿಂದಲೇ ತಿಳಿಯುತ್ತದೆ. ಕ್ರಿ.ಶ. ೧೨೦೫ರಲ್ಲಿ ಹುಟ್ಟಿದ ತರಿಕೆರೆಯ (೪೨ನೆಯ) ಶಾಸನವೂ, ೧೨೦೮ರಲ್ಲಿ ಹುಟ್ಟಿದ ತರಿಕೆರೆಯ (೬೮ನೆಯ) ಶಾಸನವೂ ಜನ್ನ ಬರೆದುವೇ ಇರಬಹುದು. ಆ ಕಾಲದ ಶಾಸನಗಳನ್ನೆಲ್ಲ ಶೋಧಿಸಿದರೆ ಜನ್ನನವು ಇನ್ನೂ ಕೆಲವು ಸಿಕ್ಕಬಹುದೇನೊ. ಕವಿ ತನ್ನ ಕೃತಿಗಳಲ್ಲಿ ಪ್ರಾಸಕ್ಕೆ ಹೊಂದಿದಂತೆ, ಮುದ್ದಿಗೆ ಮೆಚ್ಚಿದಂತೆ ತನ್ನನ್ನು ಜನ್ನ, ಜನ್ನಿಗ, ಜನ್ನಯ್ಯ, ಜನ್ನಮಯ್ಯ, ಜಾನಕಿ, ಜನ್ನಮರಸ, ಜನಾರ್ದನದೇವ ಎಂಬ ಹೆಸರುಗಳಿಂದ ಕರೆದುಕೊಂಡಿದ್ದಾನೆ.

ಕವಿಯ ಕಾಲ, ದೇಶ, ಮನೆತನ, ವಿದ್ಯಾಭ್ಯಾಸ, ರಾಜಾಶ್ರಯ ಮೊದಲಾದುವನ್ನು ಕುರಿತು ಅವನ ಕೃತಿಗಳಿಂದಲೆ ದೊರೆಯುವ ಹಲವು ಅಂಶಗಳನ್ನು ಇಲ್ಲಿ ಸಂಗ್ರಹಿಸಬಹುದು.

**ಕಾಲ :** ಅನಂತನಾಥ ಜಿನನು ಹುಟ್ಟಿದ ಆಷಾಢ ಕೃಷ್ಣ ತ್ರಯೋದಶೀ ರೇವತೀ ನಕ್ಷತ್ರ ಶಿವಯೋಗದಲ್ಲೆ ತಾನೂ ಹುಟ್ಟಿದ್ದಾಗಿ ಜನ್ನ ಹೇಳಿಕೊಂಡಿದ್ದಾನೆ. ಯಾವ ವರ್ಷವೆಂದು ಮಾತ್ರ ಹೇಳಿಲ್ಲ. ಕವಿ ಹುಟ್ಟಿದ ವರ್ಷವಾಗಲಿ ಸತ್ತ ವರ್ಷವಾಗಲಿ ನಮಗೆ ತಿಳಿಯದು. ಅವನ ಕೃತಿಗಳು ಬೆಳಕು ಕಂಡ ವರ್ಷಗಳು ಮಾತ್ರ ಅವುಗಳಿಂದಲೆ ತಿಳಿಯುಬರುತ್ತವೆ. ಶಾಸನಗಳ ವರ್ಷಗಳನ್ನು ಮೇಲೆ ಕೊಟ್ಟಿದೆ. 'ಯಶೋಧರ

ಚರಿತೆ'ಯನ್ನು ಕ್ರಿ.ಶ. ೧೨೦೯ ರಲ್ಲಿಯೂ 'ಅನಂತನಾಥ ಪುರಾಣ' ವನ್ನು ಕ್ರಿ.ಶ. ೧೨೩೦ರಲ್ಲಿಯೂ ಪ್ರಕಟಿಸಿದ್ದಾಗಿ ಆಯಾ ಗ್ರಂಥಗಳ ಕೊನೆಯ ಪದ್ಯಗಳಿಂದ ತಿಳಿಯುತ್ತದೆ. ಹೀಗೆ, ಕವಿಯ ಕಾಲ ಹನ್ನೆರಡನೆಯ ಶತಮಾನದ ಕೊನೆಯರ್ಧದಲ್ಲಿ ಮೊದಲಾಗಿ ಹದಿಮೂರನೆಯ ಶತಮಾನದ ಮೊದಲರ್ಧದಲ್ಲಿ ಮುಗಿಯುತ್ತದೆ.

**ದೇಶ :** ಜನ್ನ ಹುಟ್ಟಿದ್ದು, ಬೆಳೆದದ್ದು, ನೆಲಸಿದ್ದು ಎಲ್ಲಿ ಎಂಬುದು ಅವನ ಕೃತಿಗಳಿಂದ ತಿಳಿಯಲಾಗುವುದಿಲ್ಲ. ಜನ್ನನ ತಂದೆ ಕವಿಸುಮನೋಬಾಣನು ಹೊಯ್ಸಳ ನಾರಸಿಂಹನಲ್ಲಿ ಕಟಕೋಪಾಧ್ಯಾಯನಾಗಿದ್ದನು. ಜನ್ನನು ಬಲ್ಲಾಳನಿಂದ ಕವಿಚಕ್ರವರ್ತಿ ಬಿರುದು ಪಡೆದನು. ಬಲ್ಲಾಳನ ಮಗ ನರಸಿಂಹನಲ್ಲಿ ಕವಿ, ದಂಡಾಧೀಶ, ಮಂತ್ರಿ ಆಗಿದ್ದನು. ಕವಿಯ ಶಾಸನಗಳೆಲ್ಲ ಚೆನ್ನರಾಯಪಟ್ಟಣ ಮತ್ತು ತರಿಕೆರೆಯ ಸುತ್ತಲಲ್ಲಿ ಸಿಕ್ಕಿವೆ. ಈ ಕಾರಣಗಳಿಂದ ಜನ್ನ ದೋರಸಮುದ್ರ (ಹಳೆಯಬೀಡು) ಪ್ರಾಂತದವನೆಂದು ಹೇಳಬಹುದು.

**ಹುಟ್ಟು, ಮನೆತನ :** ಜನ್ನ ಕಮ್ಮೆ ವಂಶದ ಕಾಶ್ಯಪ ಗೋತ್ರದ ಒಂದು ಹಿರಿಯ ಮನೆತನದವನು. ಅವನ ತಂದೆ ಕವಿಸುಮನೋಬಾಣನೆಂಬ ಬಿರುದಿನ ಶಂಕರ. ದೊಡ್ಡ ವಿದ್ವಾಂಸನೂ ಕವಿಯೂ ಆಗಿದ್ದ ಈ ಶಂಕರನು ಹೊಯ್ಸಳ ನಾರಸಿಂಹನಲ್ಲಿ (ಕ್ರಿ.ಶ. ೧೧೪೧–೭೩) ಕಟಕೋಪಾಧ್ಯಾಯನಾಗಿದ್ದನು. ಜನ್ನನ ತಾಯ ಹೆಸರು ಗಂಗೆ ಅಥವಾ ಗಂಗಾದೇವಿ. 'ರಾಯದಂಡಾಧಿನಾಥಕೃತಾಂತಂ ಪೆಸರ್ವೆತ್ತ ಚಾಕಣನಪತ್ಯಂ ರೇಚಯಂ ಪೆತ್ತ ಕುಲಸ್ತ್ರೀ' ಸುಶೀಲೆ ಲಕುಮಾದೇವಿ ಜನ್ನನ ಹೆಂಡತಿ. 'ಸೂಕ್ತಿಸುಧಾರ್ಣವ'ವನ್ನು ಬರೆದು ಪ್ರಸಿದ್ಧನಾಗಿರುವ ಮಲ್ಲಿಕಾರ್ಜುನನಿಗೆ ಜನ್ನನ ಸೋದರಿಯನ್ನು ಕೊಟ್ಟಿತ್ತು. ಈ ಮಲ್ಲಿಕಾರ್ಜುನನ ಮಗನಾದ 'ಶಬ್ದಮಣಿದರ್ಪಣ'ದ ಕೇಶಿರಾಜ ಜನ್ನನ ಸೋದರಳಿಯ. ಹೀಗೆ, ಜನ್ನನ ಮನೆತನದವರೇ ಅಲ್ಲದೆ ಅವರ ಬೀಗಬಳಗದವರು ಕೂಡ ದೊಡ್ಡ ಪದವಿಯವರೂ ಪಂಡಿತರೂ ಕವಿಗಳೂ ಆಗಿದ್ದರು. ಜನ್ನನ ಸ್ವಾಭಾವಿಕ ಪ್ರತಿಭೆಯೂ ಕವಿತಾಶಕ್ತಿಯೂ ಹೊಮ್ಮಿ ಅರಳುವುದಕ್ಕೆ ಈ ವಿದ್ವತ್ಪೂರ್ಣವಾದ ವಾತಾವರಣ ಬಹಳ ನೆರವಾಗಿರಬೇಕು. ನಂಟರಲ್ಲಿ ಹಲವರು ಸಮಾಜದಲ್ಲೂ ರಾಜಾಸ್ಥಾನ

ದಲ್ಲೂ ಗಣ್ಯರಾಗಿದ್ದದ್ದರಿಂದ ಕವಿ ಸುಲಭವಾಗಿ ರಾಜಾಶ್ರಯ ಪಡೆಯು ವುದಕ್ಕೂ ಅನುಕೂಲವಾಗಿರಬಹುದು.

**ಕಲ್ಕೆ** : ಬೀಜ ಹಸನಿರಬಹುದು ; ನೆಲ ಫಲವತ್ತಿರಬಹುದು. ಆದರೆ, ಸರಿಯಾಗಿ ಉತ್ತು, ಹೊತ್ತುಹೊತ್ತಿಗೆ ನೀರೆರೆದು, ಗೊಬ್ಬರ ಹಾಕಿ ಸಾಗುವಾಡದಿದ್ದರೆ ಬೆಳೆ ಹೊರವಾಗಲಾರದು, ಹುಲುಸಾಗ ಲಾರದು. ದೈವದತ್ತ ಪ್ರತಿಭೆಯಾದರೂ ಅನುಕೂಲ ವಾತಾವರಣವೂ ಸಕಾಲ ಕೃಷಿಯೂ ಇಲ್ಲದಿದ್ದರೆ ತನ್ನ ಸಂಪೂರ್ಣ ಕಳೆಯಿಂದ ಬೆಳಗ ಲಾರದು. ಯಾದವ ಕಟಕಾಚಾರ್ಯನಾಗಿದ್ದ ತನ್ನ ತಂದೆಯಿಂದಲೆ ಜನ್ನನಿಗೆ ಎಳವೆಯಲ್ಲಿ ತಕ್ಕಷ್ಟು ಕಲ್ಕೆ ನಡೆದಿತ್ತೆಂದು ಎಣಿಸಬಹುದು. ತನ್ನ ಉಪಾಧ್ಯಾಯನೆಂದು ಸ್ಮರಿಸಿರುವ 'ಜಗದೇಕನಲ್ಲಿ ಕಟಕೋಪಾ ಧ್ಯಾಯನ್, ಇದಾನೀಂತನ ಶರ್ವವರ್ಮನ್' ಆದ ಪ್ರಸಿದ್ಧ ನಾಗವರ್ಮ ನಲ್ಲಿ ಜನ್ನನ ಪ್ರೌಢವ್ಯಾಸಂಗ ನಡೆದಿರಬೇಕು. ಜನ್ನ ಹಿರಿಯ ಜಿನ ಭಕ್ತ, ಸ್ವಧರ್ಮದಲ್ಲಿ ಶ್ರದ್ಧಾಳು. ಅವನ ಪಾರಮಾರ್ಥಿಕ ವಿದ್ಯೆಗೆ ಗುರುಗಳು 'ಕಾಣೂರ್‌ಗಣದ ಚಿಂತಾಮಣಿ'ಗಳಾದ 'ಗಂಡವಿಮುಕ್ತರ್' ಶ್ರೀರಾಮಚಂದ್ರದೇವ ಮುನೀಂದ್ರರು. ಅವರು ಪ್ರಸಿದ್ಧ ಮಾಧವ ಚಂದ್ರಮುನಿಗಳ 'ಪ್ರೇಮದ ಶಿಷ್ಯಾಗ್ರೇಸರರು.' 'ಅನಂತನಾಥ ಪುರಾಣ'ದಲ್ಲಿ ಈ ರಾಮಚಂದ್ರದೇವ ಮುನಿಗಳ ಸ್ತುತಿ ಬೇಕಾದಷ್ಟಿದೆ. 'ಯಶೋಧರ ಚರಿತೆ'ಯಲ್ಲಿ ಇವರ ವಿಷಯವಾಗಿ ಇರುವುದು ಒಂದು ಕಂದ ಮಾತ್ರ. ಅದೂ 'ಅನಂತನಾಥ ಪುರಾಣ'ದಲ್ಲಿಯೂ ಇದೆ.

**ರಾಜಾಶ್ರಯ** : ನಮಗೆ ದೊರೆತಿರುವ ಜನ್ನನ ಮೊತ್ತಮೊದಲ ನೆಯ ಬರಹ ಚನ್ನರಾಯಪಟ್ಟಣದ ದಂಡಿಗನಹಳ್ಳಿ ಹೋಬಳಿ ಆನೆಕೆರೆ ಗ್ರಾಮದಲ್ಲಿ ಸಿಕ್ಕಿದ ತಾಮ್ರಶಾಸನ (ಕ್ರಿ.ಶ. ೧೧೯೧). ಇದು 'ಹೊಯ್ಸಳ ವೀರಬಲ್ಲಾಳದೇವನ 'ಪಾದಪದ್ಮೋಪಜೀವಿ'ಯೂ 'ದಕ್ಷಿಣಚಕ್ರ ವಲ್ಲಭ ಸಭಾರತ್ನಪ್ರದೀಪ'ನೂ 'ಮಂತ್ರಿ ಮಂಡಲಿಕ ದಂಡಾಧೀಶ'ನೂ 'ಸಕಲಬುಧಜನ ಮರುದ್‌ಭೂಜ'ನೂ ಆದ ಶ್ರೀಕರಣದ ಹೆಗ್ಗಡೆ ಮಾಚಣನು [1]ಆನೆಗನ ಕೆರೆಯನ್ನು ಅಗ್ರಹಾರವಾಗಿ ಬಿಟ್ಟದ್ದನ್ನು ಹೇಳುವ

1 ಇವನಿಗೆ ಮಾಚಯ್ಯ, ಮಾಚಿರಾಜ, ಮಾಚದೇವ, ಮೊದಲಾದ ಹೆಸರುಗಳಿವೆ.

ಶಾಸನ. ಇದರಲ್ಲಿ ವೀರಬಲ್ಲಾಳನ ವಂಶವರ್ಣನೆಯೂ ಮಾಚಣನ ವಂಶವರ್ಣನೆಯೂ ನಿರರ್ಗಳವಾಗಿ ಹರಿಯುವುದರಿಂದ ಕವಿಗೆ ತನ್ನ ದೊರೆಯಾದ ಬಲ್ಲಾಳನಲ್ಲಿ ಭಕ್ತಿ ಅಭಿಮಾನ ಇದ್ದುವೆಂದೂ, ಮಾಚಿ ರಾಜನ ಮೈತ್ರಿ ವಿಶ್ವಾಸಗಳೂ ಆಶ್ರಯ ಪ್ರೋತ್ಸಾಹಗಳೂ ದೊರೆತಿದ್ದು ವೆಂದೂ ಹೇಳಬಹುದು. ಆದರೂ, ಆ ಹೊತ್ತಿಗೆ ಅವನು ಇನ್ನೂ ಆಸ್ಥಾನಕವಿಯಾಗಿದ್ದಂತಾಗಲಿ ಹೇಳಿಕೊಳ್ಳಲು ಸಾಕಷ್ಟು ಪ್ರತಿಷ್ಠೆಗಳಿಸಿ ದ್ದಂತಾಗಲಿ ತೋರುವುದಿಲ್ಲ. ಆ ಶಾಸನದ ಕೊನೆಯಲ್ಲಿ 'ಜನ್ನಯ್ಯನ ಕವಿತೆ' ಎಂಬ ಸಪ್ಪೆಯ ಬರಹ ಮಾತ್ರವಿದೆ. ಅಂತೂ, ಆ ಶಾಸನ ಜನ್ನನಿಗೆ ರಾಜಾಶ್ರಯ ಸಂಪಾದನೆಯ ಮಾರ್ಗವನ್ನು ತೆರೆಯಿತೆಂದಾ ದರೂ ಹೇಳಬಹುದು. ನಮಗೆ ದೊರೆಯುವ ಜನ್ನನ ಎರಡನೆಯ ಬರಹ ತರಿಕೆರೆಯ ಅಮೃತಾಪುರದ ಅಮೃತೇಶ್ವರ ದೇವಾಲಯದಲ್ಲಿಯ, ವೀರಬಲ್ಲಾಳನ ದಂಡನಾಯಕನಾದ ಅಮಿತನು ತಾನೇ ಪ್ರತಿಷ್ಠೆಮಾಡಿ ಸಿದ ಅಮೃತೇಶ್ವರ ದೇವರ ಅಂಗಭೋಗಾದಿಗಳಿಗೆ ಬಿಟ್ಟ ದತ್ತಿಯ ವಿಷಯವನ್ನು ಹೇಳುವ ಶಾಸನ (ಕ್ರಿ.ಶ. ೧೧೯೬). ಇದರಲ್ಲಿ ಬಲ್ಲಾಳನ ಕುಲವರ್ಣನೆ ಇನ್ನೂ ಉಜ್ವಲವಾಗಿದೆ. 'ಯಾದವೇಶ್ವರ ಸಭಾರತ್ನ ಪ್ರದೀಪ'ನೂ 'ಯಾದವ ಕಟಕ ರತ್ನಾಭರಣ'ನೂ 'ಶ್ರೀ ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ರಾಜ್ಯಾಭ್ಯುದಯಕಾರಣ'ನೂ 'ಚತುರ್ಥ ಕುಳ ಕುಮುದಿನೀ ಶರಚ್ಚಂದ್ರ ಚಂದ್ರಿಕೋಪಮ'ನೂ 'ಮಂತ್ರಿ ಮಂಡ ಳಿಕ ದಂಡಾಧೀಶ'ನೂ 'ದಂಡನಾಥ ಚೂಡಾಮಣಿ'ಯೂ ಆದ ಅಮಿತನ ಮಹಿಮೆಯ ವರ್ಣನೆ ತುಂಬಿದೆ. ಈ ಶಾಸನ ಬರೆಯುವ ಹೊತ್ತಿಗೆ ಜನ್ನನ ಮೇಲೆ ಕೊಂಚಮಟ್ಟಿಗಾದರೂ ರಾಜ ಕಟಾಕ್ಷ ಬಿದ್ದಿರಬೇಕು ; ವಿದ್ವಜ್ಜನ ಪ್ರಶಂಸೆಯೂ ದೊರೆತಿರಬೇಕು. ಅಮಿತನ ಸಹಾಯದಿಂದ ಜನ್ನ ರಾಜಾಸ್ಥಾನ ಗೌರವ ಸಂಪಾದನೆಯ ಮಾರ್ಗ ದಲ್ಲಿ ಮತ್ತೊಂದು ಹೆಜ್ಜೆಯನ್ನು ಇಟ್ಟನೆನ್ನಬಹುದು. ಇನ್ನೂ ಆಸ್ಥಾನ ಕವಿಯಾಗಿದ್ದಂತೆ ತೋರುವುದಿಲ್ಲ. ಆದರೆ, ಈಗಾಗಲೆ ಜನ್ನ 'ಉದ್ದಂಡ ಕವಿಭಾಳನೇತ್ರ' ನೂ 'ಸುಕವಿಮಿತ್ರ' ನೂ ಆದ ಜನ್ನಯ್ಯನಾಗಿದ್ದಾನೆ. ಕ್ರಮೇಣ, ಈ ಶಾಸನಗಳ ಕವಿತೆಯ ಬಲದಿಂದಲೂ, ಯಾದವ ಕಟಕಾಚಾರ್ಯನಾದ ತನ್ನ ತಂದೆಯ ಬಲದಿಂದಲೂ, ಜನನಾಥ

ಜಗದೇಕನಲ್ಲಿ ಕಟಕೋಪಾಧ್ಯಾಯನೂ ಅಭಿನವ ಶರ್ವವರ್ಮನೆಂಬ ಬಿರುದಿನವನೂ ತನ್ನ ಉಪಾಧ್ಯಾಯನೂ ಆದ ಪ್ರಸಿದ್ಧ ನಾಗವರ್ಮನ ಬಲದಿಂದಲೂ, ಮಾಚಿದೇವ ಅಮಿತದಂಡನಾಥರ ಬಲದಿಂದಲೂ ಜನ್ನನು ಹೊಯ್ಸಳ ವೀರಬಲ್ಲಾಳನಲ್ಲಿ ಆಸ್ಥಾನ ಕವಿಯಾದನು. 'ಯಶೋಧರ ಚರಿತೆ'ಯನ್ನು ಬರೆಯುವ ಹೊತ್ತಿಗೆ (ಕ್ರಿ.ಶ. ೧೨೦೯) ಜನ್ನನು ಬಲ್ಲಾಳ 'ನೃಪನ ಸಭೆಯೊಳಖಿಳಕಳಾನಿಪುಣರ ನಟ್ಟನಡುವೆ ಬೊಟ್ಟೆತ್ತಿ ಗೆಲಲ್ ತಾನೆ ಚತುರ್ವಿಧ ಪಂಡಿತ'ನಾಗಿದ್ದನು. ಆದರೆ ಇನ್ನೂ 'ಕವಿಚಕ್ರವರ್ತಿ'ಯಾಗಿದ್ದಂತೆ ತೋರುವುದಿಲ್ಲ. 'ಯಶೋಧರ ಚರಿತೆ'ಯ ಅವತಾರಾಂತದ ಗದ್ಯದಲ್ಲಿ ಎಲ್ಲಿಯೂ ಜನ್ನ ತನ್ನನ್ನು 'ಕವಿಚಕ್ರವರ್ತಿ' ಎಂದು ಕರೆದುಕೊಂಡಿಲ್ಲ. 'ಅನಂತನಾಥಪುರಾಣ'ದ ಅಂಕಿತ ಗದ್ಯದಲ್ಲಿ 'ಕವಿ ಚಕ್ರವರ್ತಿ ಬಿರುದ' ಎಂದು ಹೇಳಿಕೊಂಡಿದ್ದಾನೆ. 'ಯಶೋಧರ ಚರಿತೆ'ಯನ್ನು ಓದಿಸಿ ಕೇಳಿ ಬಲ್ಲಾಳನು 'ಕವಿಚಕ್ರವರ್ತಿ' ಬಿರುದನ್ನು ಕೊಟ್ಟಿದ್ದರೂ ಇರಬಹುದು. 'ಕನ್ನರ ನಾದರರಿಂ ಕುಡೆ ಪೊನ್ನಂ, ಮನಮೊಸೆದು ತೈಲಪಂ ಕುಡೆ ರನ್ನಂ। ಮನ್ನಿಸಿ ಬಲ್ಲಾಳಂ ಕುಡೆ ಜನ್ನಂ ಕವಿಚಕ್ರವರ್ತಿ ವೆಸರಂ ಪಡೆದರ್' ಎಂಬ ಪದ್ಯ 'ಯಶೋಧರ ಚರಿತೆ' ಯಲ್ಲಿ ಇದ್ದರೂ, ಅದನ್ನು ಜನ್ನನೇ ಬರೆದನೋ ಇಲ್ಲವೋ, ಅವನೇ ಬರೆದಿದ್ದರೂ ಯಾವಾಗ ಬರೆದನೋ ಏನೋ ಎಂಬ ಸಂಶಯಕ್ಕೆ ಎಡೆಯಿದೆ. ಏಕೆಂದರೆ ಆ ಕಂದ ಎರಡು ಪ್ರತಿಗಳಲ್ಲಿಲ್ಲ; ಒಂದರಲ್ಲಿ ಮಾತ್ರವಿದೆ. ಅಲ್ಲದೆ ಕಂದದಲ್ಲಿ ತನ್ನ ಬಿರುದನ್ನು ಹೇಳಿಕೊಂಡವನು ಅಂಕಿತ ಗದ್ಯದಲ್ಲಿ ಏಕೆ ಬಿಡಬೇಕು? ಕವಿ ತನ್ನ ಪ್ರತಿಷ್ಠೆಯನ್ನು ಮಿಗಿಲಾಗಿ ಹೇಳಿಕೊಂಡಿರುವ 'ಅನಂತನಾಥ ಪುರಾಣ'ದಲ್ಲಿಯೂ ಈ ವಿಷಯದ ಇಡಿಯ ಪದ್ಯ ಯಾವುದೂ ಇಲ್ಲ. ಗಿರಿದುರ್ಗಮಲ್ಲ ವೀರಬಲ್ಲಾಳನ ಆಸ್ಥಾನದಲ್ಲಿ ಜನ್ನ 'ಚತುರ್ವಿಧಪಂಡಿತ'ನೂ 'ಕವಿರಾಜಶೇಖರ'ನೂ ಮಾತ್ರ ಆಗಿದ್ದನು. ಬಲ್ಲಾಳನ ಮಗ ನರಸಿಂಹನು ಪಟ್ಟಕ್ಕೆ ಬರುವ ಹೊತ್ತಿಗೆ ಜನ್ನನ ಮಹಿಮೆ ಪ್ರತಾಪಗಳು ನಾನಾ ಮುಖವಾಗಿ ಹರಡಿ ಬೆಳಗಿ ಅವನ ಆಸ್ಥಾನದಲ್ಲಿ ಕವಿ ಮಾತ್ರ ವಲ್ಲದೆ ಮಂತ್ರಿಯೂ ದಂಡಾಧೀಶನೂ ಆದನು: 'ನರಸಿಂಹನ ಚೋಳ ಕುಲೋದ್ಧರಣನ ಸರ್ವಜ್ಞ ಭೂಪನೋಲಗದೊಳ್ ನಿಂ।ದಿರೆ ದಂಡಾಧೀಶಂ, ಕುಳ್ಳಿರೆ ಮಂತ್ರಿ, ತೊಡಂಕೆ ಕವಿ ಜನಾರ್ದನದೇವಂ.'

**ಕವಿಯ ಬಿರುದುಗಳು** : ಜನ್ನನಿಗೆ ವೀರಬಲ್ಲಾಳನು ಕೊಟ್ಟ (ಉಭಯ) ಕವಿಚಕ್ರವರ್ತಿ ಎಂಬ ಬಿರುದಿನ ಜತೆಗೆ 'ನಾಙ್ಪ್ರಭು' ಎಂಬ ಬಿರುದೂ ಇತ್ತು. ಇವಲ್ಲದೆ, ಹಲವರು ಹಲವಾರು ಸಂದರ್ಭಗಳಲ್ಲಿ ಕೊಟ್ಟಿರಬಹುದಾದ, ಒಮ್ಮೊಮ್ಮೆ ಪ್ರಾಸ ಛಂದಸ್ಸು ಬಂಧ ಗಾಂಭೀರ್ಯ ಗಳಿಗಾಗಿ ಕವಿ ಮೆಚ್ಚಿನಿಂದಲೋ ಕೆಚ್ಚಿನಿಂದಲೋ ತಾನೇ (?) ಕೊಟ್ಟು ಕೊಂಡಿರಬಹುದಾದ ಬಿರುದುಗಳು, ಹಲವಿವೆ : ಸಾಹಿತ್ಯ ರತ್ನಾಕರ, ಕವಿವೃಂದಾರಕ ವಾಸವ, ಕವಿಕಲ್ಪಲತಾ ಮಂದಾರ, ರಾಜವಿದ್ವತ್ಸಭಾ ಕಳಹಂಸ, ಕವಿಭಾಳಲೋಚನ, ಕವಿಭಾಳೇಕ್ಷಣ, ಉದ್ದಂಡ ಕವಿಭಾಳ ನೇತ್ರ, ಸುಕವಿಜನಮಿತ್ರ, ವಿನೇಯಜನಮುಖತಿಲಕ ಮೊದಲಾದುವು.

**ಕವಿಪ್ರತಿಷ್ಠೆ** : ಕುಲಬಲ, ರೂಪಬಲ, ವಿದ್ಯಾಬಲ, ಧನಬಲ, ಗುರುಬಲ, ರಾಜಬಲ—ಎಲ್ಲವೂ ಜನ್ನನಿಗೆ ಇದ್ದುವು. ಲೌಕಿಕ ಪಾರ ಮಾರ್ಥಿಕಗಳೆರಡರಲ್ಲಿಯೂ ಅವನು ಸೌಭಾಗ್ಯಶಾಲಿ ಎನ್ನಬಹುದು. ಅವನ ಬಾಳಿನಲ್ಲಿ ಯಾವೊಂದು ಕೊರತೆಯೂ ಇದ್ದಂತೆ ಕಾಣುವುದಿಲ್ಲ. 'ಭೋಗರೂಪವಿಳಾಸೋದಯದಿಂದೆ' ಸಂದ ಜನ್ನಮರಸನ್, 'ಅನ್ಯರ ಲೇಸನಲ್ಲದೆನಗಿಂತಂತೆಂದು ಮಾತಾಡಲೊಲ್ಲದ ಸತ್ವನ್', 'ಚದುರನಿಧಿ, ಚಲದ ನೆಲೆ, ಚಾಗದ ಸಾಗರಂ ಅಣ್ಮಿನಾಗರಂ, ಪೆಂಪಿನ ಸಂಪದಂ, ಆಯದಾಯು—ಆರೆಂಬುದೊ, ಜನ್ನನ್ ಕಮ್ಮೆಗುಲದ ತೊಡವಿನ ರನ್ನನ್' ಎಂದು ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಅಲ್ಲದೆ 'ಚತುರನ್, ನೀಱನ್, ಉದಾರನ್, ಉಜ್ವಲಯಶನ್, ಸೌಭಾಗ್ಯ ಸಂಪನ್ನನ್, ಊರ್ಜಿತ ಪುಣ್ಯೋದಯನ್ ಈ ಜನಾರ್ದನ ದೇವನ್.' ಲಕ್ಷ್ಮೀಸರಸ್ವತಿಯರ ಕಲಹ ಜನ್ನನಲ್ಲಿ ಮನೆಮಾಡಲಿಲ್ಲ. ಕವಿ ಹಲವು ದಾನ ಧರ್ಮಗಳನ್ನು ಮಾಡಿದ್ದಾನೆ. 'ಪೊಸಚೈತ್ಯಂ ಗಂಡರಾದಿತ್ಯನ ಪೊಟಲೊಳ್ ಅನಂತಂಗೆ ಚೆಲ್ವಪ್ಪಿನಂ ಮಾಡಿಸಿ' ತನ್ನ ಧರ್ಮ ಶ್ರದ್ಧೆ ಯನ್ನು ಬೆಳಗಿ 'ಜೈನಮಂದಿರ ನಿರ್ಮಾಣ ಧನ'ನಾಗಿದ್ದಾನೆ. 'ಜಗ ದೊಳ್ ತಾನಿತ್ತ ಕಯ್ಯೆಲ್ಲದೆ, ಒಡ್ಡಿದ ಕಯ್ಯೆಲ್ಲದ ಪೆಂಪು'[1] ಎಂದು ಜನ್ನ

---

1 ಇದು ಲೋಕೋತ್ತಮಮಪ್ಪ ವಿದ್ಯೆ ಜಗದೊಳ್ ತಾನಿತ್ತ ಕಯ್ಯೆಲ್ಲದೊ
ಡ್ಡಿದ ಕಯ್ಯೆಲ್ಲದ ಪೆಂಪು ಭೂಭುಜರೊಳದ್ವಿತೀಯಮಾಗಿರ್ಪನ
ಲೆಗ್ಗದಿಟಕ್ಕನ್ಯರ ಲೇಸನಲ್ಲದೆನಗಿಂತಂತೆಂದು ಮಾತಾಡಲೊ
ಲ್ಲದ ಸತ್ವಂ ಕವಿಭಾಳಲೋಚನನೊಳುಂಟೆನೆ ಸ್ವರ್ಗದೊಳ್ ತೋಱುಸಾ
—ಅನಂತನಾಥಪುರಾಣ xiv, ೮೦.

ಹೇಳುವಂತೆ ಎಷ್ಟು ಜನ ಕವಿಗಳು ಹೇಳಿಕೊಳ್ಳಬಲ್ಲರು. ತನಗಿದ್ದ ರಾಜಕೃಪೆಯ ಸೌಭಾಗ್ಯವನ್ನು ಕವಿ ಹೇಳಿ ದಣಿಯನು: 'ಭೂಭುಜರೊಳ್ ಅದ್ವೈತೀಯಮಾಗಿರ್ಪ ಸಲ್ಗೆ,' 'ಕೊಡೆಯನ್ ಪಟ್ಟಮನಾಂತ ಚಕ್ರಿ ಕವಿತಾ ಸಾಮ್ರಾಜ್ಯದೊಳ್'[1]—ಇವು ಜನ್ನಮರಸನ ಹೆಮ್ಮೆ ಹಿರಿಮೆಗಳು.

ಜನ್ನ ತಲೆಬಾತು ಮೈಸೋತ ಕದಿರುಕಡ್ಡಿಯಾಗಿರಲಿಲ್ಲ. ಅವನು ಕವಿ ಮಾತ್ರವಲ್ಲ, ಜಟ್ಟಿಯೂ ಆಗಿದ್ದನು. 'ಬರೆಯಲ್ ಮೇಣ್ ಮಚ್ಚರದಿಂ ಕರೆಯಲ್ ಮೇಣ್ ಕಯ್ಗೆ ಪಲಗೆ ಬರೆ ಕಾವ್ಯ ಕಲಾ। ಪರಿಣತಿಯೊಳ್ ಖಟ್ಗಕಳಾ ಪರಿಣತಿಯೊಳ್ ಭಾಳನೇತ್ರನೆನಿಪನ್ ಜನ್ನನ್'—ಇದು ಕವಿಯ ಮೈಮೆದುಳುಗಳ ಕೆಚ್ಚು, ಅರ್ಪು[2]. ಜನ್ನ ಜಟ್ಟಿಯೆಂದು ಹೇಳಿದಾಗಲೇ ಅವನ ಮೈಕಟ್ಟು, ದೇಹದಾರ್ಢ್ಯ ಎಂಥದೆಂದು ತಿಳಿಯಬೇಕು. ಜತೆಗೆ ಜನ್ನ ಚೆಲುವ. 'ಸೊಬಗಿನ ಜಂಗಮಶಾಸನನ್,' 'ಸೊಬಗಿನ ಅಭಿನವ ಮದನನ್' ಎಂದು ತನ್ನನ್ನು ಕರೆದುಕೊಂಡಿದ್ದಾನೆ. ಈ ಅಭಿನವ ಮದನ_'ಬದ್ದೆಯರುಡಿಸಿದೊಡುಡೆ ಕಲ್ತ ಕೊವರನ್'—ಎಂಥ ರಸಿಕನೆಂದು ಬೇರೆ ಹೇಳಬೇಕಾಗಿಲ್ಲ.

ಜನ್ನನಿಗೆ ತನ್ನ ಕವಿತಾಶಕ್ತಿಯ ವಿಷಯದಲ್ಲಿ ಒಂದು ಬಗೆಯ ಗೌರವ, ಪೂಜ್ಯತೆ; ಒಂದು ಬಗೆಯ ಹೆಮ್ಮೆ, ಕೆಚ್ಚು. 'ಜಿನೇಂದ್ರವಾಗ್ವನಿತೆ ನಿಲ್ಕಸ್ಮನ್‌ಮುಖಾಂಭೋಜದೊಳ್' ಎಂದು ಭಕ್ತಿಭಾವದಿಂದ ವಾಗ್ದೇವಿಯನ್ನು ನೆನೆಯುವ ಜನ್ನನ ಮಾತುಗಳು, ಪಂಪನ 'ಪರಮ ಜಿನೇಂದ್ರವಾಣಿಯೆ ಸರಸ್ವತಿ, ಬೇಱದು ಪೆಣ್ಣರೂಪಮನ್ ಧರಿಯಿಸಿ

---

[1] ಕೊಡೆಯಿಂ ಪಟ್ಟಮನಾಂತ ಚಕ್ರಿ ಕವಿತಾಸಾಮ್ರಾಜ್ಯದೊಳ್ ತೇಜದು
ಗ್ಗಡಮಿಂ ಕೀರ್ತಿಯನಾಂತ ಬಲ್ಲಹನಿಳಾಪುತ್ರತ್ವದೊಳ್ ಚಾಗಮಿಂ
ನುಡಿಯೊಳ್ ಸತ್ಯಮನಾಂತ ರಾಜಮುನಿಪಂ ಸಮ್ಯಕ್ತ್ವದೊಳ್ ಗೌರವಂ
ಪಡೆದಿಂ ಮಾನವಮೇರು ಜನ್ನಮರಸಂ ಸಾಹಿತ್ಯರತ್ನಾಕರಂ
—ಅನಂತನಾಥಪುರಾಣ xiv, ೮೧.

[2] ಪಂಪನೂ ಹೀಗೆಯೇ ಕವಿಯೂ ಕಲಿಯೂ ಆಗಿದ್ದನು:
ಕವಿತೆ ನೆಗೆದ್ತೆಯಿಂ ನಿಮಿಸೆ ಜೋಳದ ಪಾಟಿ ನಿಜಾಧಿನಾಥನಾ
ಹವದೊಳರಾತಿನಾಯಕರ ಪಟ್ಟನೆ ಪಾಱಿಸೆ ಸಂದ ಪೆಂಪು ಭೂ
ಭುವನದೊಳಾವಗಂ ಬೆಳಗೆ ವಿಕ್ಕಭಿಮಾನದ ಮಾತು ಕೀರ್ತಿಯಿಂ
ವಿವರಿಸೆ ಸಂದನೇಂ ಕಲಿಯೊ ಸತ್ಕವಿಯೋ ಕವಿತಾಗುಣಾರ್ಣವಂ
—ವಿಕ್ರಮಾರ್ಜುನವಿಜಯ xiv, ೫೦

ನಿಂದುದಲ್ತು' ಎಂಬ ಪವಿತ್ರವಾದ ಮಾತುಗಳನ್ನು ಮನಸ್ಸಿಗೆ ತರುತ್ತವೆ. 'ಸಂತತಂ ಪರಿಮಳದಂತೆ ವಾಣಿ ನೆಲಸಿರ್ಕೆ . . ನಾಟ್ಪ್ರಭುಜನಾರ್ದನ ವಕ್ತ್ರಪದ್ಮದೊಳ್' ಎಂದು ದೇವಿಯನ್ನು ಬೇಡುವ ಬಾಯೆ 'ಈ ಜನಾರ್ದನನ ವಕ್ತ್ರಾಂಭೋಜಮನ್ ಸಾರ್ದು ಸುಸ್ಥಿತೆಯಾಗಿರ್ದುದ ಱಿಂದೆ ತಾನ್ ಸೊಬಗೆಯಾದಳ್, ಜಾಣೆಯಾದಳ್, ಸರಸ್ವತಿ ಸಂಮೋಹಿತೆ ಯಾದಳ್, ಅಗ್ಗಳಮೆಯಾದಳ್, ವಿಶ್ವಭೂಚಕ್ರದೊಳ್' ಎಂಬ ಕೆಟ್ಟನ ನುಡಿಗಳನ್ನೂ ನುಡಿಯುತ್ತದೆ. ಅಷ್ಟೇ ಅಲ್ಲ. 'ಉಭಯ ಕವಿಚಕ್ರ ವರ್ತಿಯ ಸಭೆಯನ್ ಪುಗಲಣ್ಮುವಲ್ತೆ . . . ದೂಷಣಾಭಾಸಂಗಳ್' ಎಂದು ಕೆಣಕಿ ಕೆಲೆಯುತ್ತದೆ. ಒಬ್ಬನಲ್ಲಿಯೇ ಈ ನಮ್ರಭಕ್ತಿಭಾವವನ್ನೂ ಉದ್ದಂಡ ಔದ್ಧತ್ಯವನ್ನೂ ಹೇಗೆ ಸರಿಹೊಂದಿಸುವುದು? ಜನ್ನಕವಿ ರಾಜಾಸ್ಥಾನದಲ್ಲಿದ್ದನೆಂಬುದು ನೆನಪಿನಲ್ಲಿದ್ದರೆ ಈ ವಿರೋಧಭಾವ ಕೊಂಚಮಟ್ಟಿಗೆ ಅರ್ಥವಾದೀತು. ತನ್ನ ಮನೆಬಾಳಿನಲ್ಲೂ ವ್ಯಕ್ತಿ ಜೀವನದಲ್ಲೂ ಸರಳನೂ ಗಂಭೀರನೂ ನಮ್ರನೂ 'ವಿನೇಯನಿಧಿ'ಯೂ ಆದವನು ರಾಜಾಸ್ಥಾನದ ಗೌರವಮರ್ಯಾದೆಗಳನ್ನೂ ರಾಜನ ಗೌರವ ಮರ್ಯಾದೆಗಳನ್ನೂ ಪಾಲಿಸಿ ಮೆರೆಯುವುದಕ್ಕಾಗಿ ಈ ರೀತಿಯ ಹೆಮ್ಮೆಯ, ಮೂದಲಿಕೆಯ, ಸ್ವಪ್ರತಿಷ್ಠೆಯ ಮಾತುಗಳನ್ನು ಆಡಬಹುದು. ಆಸ್ಥಾನದ ಸಂಪ್ರದಾಯಮರ್ಯಾದೆಗಳ ಪಾಲನೆಯ ನೆವವನ್ನು ಬಿಟ್ಟರೆ, ಒಂದೇ ಬಾಳಿನಲ್ಲಿ ಇಂಥ ಎದುರುಬದುರು ತಿರುಚಿನ ಎಳೆಗಳು ಏಕೆ ಹೊಸೆದುಕೊಳ್ಳುತ್ತವೆ ಎಂದು ಹೇಳುವುದು ಕಷ್ಟ. 'ರನ್ನನ್ ವೈಯಾ ಕರಣನ್, ಜನ್ನನ್ ಮೇಣ್ ಕವಿಗಳೊಳಗೆ ವೈಯಾಕರಣನ್, ಹೊನ್ನನ್ ಅಸಹಾಯಕವಿ, ಮೇಣ್ ಜನ್ನಿಗನ್ ಅಸಹಾಯಸುಕವಿ ಕವಿಚಕ್ರಿ ಗಳೊಳ್' ಎಂದು ತನ್ನ ಹುರುಡಿಗೆ ಉಳಿದಿಬ್ಬರು ಕವಿಚಕ್ರವರ್ತಿಗಳಾದ ಪೊನ್ನರನ್ನರನ್ನು ಮಾತ್ರ ಗುರಿಮಾಡಿರುವುದನ್ನು ನೋಡಿದರೆ, ತನ್ನ ಚಕ್ರವರ್ತಿಯ ಪ್ರತಿಷ್ಠೆಯನ್ನು ಮೆರೆಯುವುದಕ್ಕಾಗಿಯೇ ಜನ್ನ ಹೀಗೆ ಜಂಬ ಕೊಚ್ಚಿಕೊಂಡಿರಬಹುದೆಂದು ಎಣಿಸುವುದಕ್ಕೆ ಮತ್ತೂ ಎಡೆ ಯಾಗುತ್ತದೆ.[1]

---

1. ಈ ಸಂದರ್ಭದಲ್ಲಿ ಮತ್ತೊಂದು ಅಂಶವನ್ನು ಗಮನಿಸಬಹುದಾಗಿದೆ. ನಮ್ಮ ಹಲವು ಕಾವ್ಯಗಳಲ್ಲಿ ಬರುವ ಕವಿಪ್ರತಿಷ್ಠಾಪ್ರಶಂಸೆಯ ಪದ್ಯಗಳೆಲ್ಲವೂ ಆಯಾ

ಕವಿ ತನ್ನ ದೇವದತ್ತ ಪ್ರತಿಭೆಯೊಂದನ್ನೆ ನೆಮ್ಮಿ ಕುಳಿತವನಲ್ಲ; ಹಲವು ಶಾಸ್ತ್ರಗಳನ್ನು ಕೃಷಿಮಾಡಿಕೊಂಡಿದ್ದವನು. ತನ್ನ ವಿದ್ಯಾ ಗುರುವಾದ ನಾಗವರ್ಮನನ್ನು ಭಕ್ತಿ ಕೃತಜ್ಞತೆಗಳಿಂದ ನೆನೆದಿರುವುದನ್ನು ನೋಡಿದರೆ, ವಿದ್ಯಾವ್ಯವಸಾಯದಿಂದ ಕವಿಗೆ ಆಗಿರುವ ಪ್ರಯೋಜನ ಎಷ್ಟೆಂದು ತಿಳಿಯಬಹುದು. ಕವಿಗೆ ತನ್ನನ್ನು 'ಕವಿಚಕ್ರವರ್ತಿ,' 'ಕವಿರಾಜಶೇಖರನ್' ಎಂದು ಕರೆದುಕೊಳ್ಳುವುದರಲ್ಲಿ ಎಷ್ಟು ಹೆಮ್ಮೆಯೊ 'ಚತುರ್ವಿಧಪಂಡಿತನ್, ನವವೈಯಾಕರಣನ್, ತರ್ಕವಿನೋದನ್, ಭರತಸುರತಶಾಸ್ತ್ರವಿಳಾಸನ್' ಎಂದು ಕರೆದುಕೊಳ್ಳುವುದರಲ್ಲಿಯೂ ಅಷ್ಟೇ ಹೆಮ್ಮೆ. ಜನ್ನನು ಹೇಳುವ 'ಸಹಜಂ ವೇಟ್ಪುದು ಮುನ್ನೆ, ವೇಟ್ಪುದು ಪದವ್ಯುತ್ಪತ್ತಿ, ವೇಟ್ಕುಂ ಬಲಂ ಬಹು ಕಾವ್ಯಾನುಭವಂ ಕಳಾಪ್ರತಿಭೆ ಲೋಕಜ್ಞತ್ವಮಾಪ್ತಾಗಮಸ್ಪೃಹೆ' ಎಂಬ ಮಾತುಗಳು 'ಕಾವ್ಯಾವಲೋಕನ'ದ ನಾಗವರ್ಮನ 'ಪ್ರತಿಭಾನಂ, ಕಾವ್ಯವಿದ್ಯಾ ಪ್ರಚಯಪರಿಚಯಂ, ವೃದ್ಧಸೇವಾನುರಾಗಂ, ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ' ಎಂಬ ಮಾತುಗಳನ್ನು ನೆನಪಿಗೆ ತರುತ್ತವೆ. ಆದರೆ, ಒಣಪಾಂಡಿತ್ಯ ಬೇರೆ, ಕವಿತಾಸಾಮರ್ಥ್ಯ ಬೇರೆ ಎಂಬ ವಿಷಯ ಜನ್ನನಿಗೂ ತಿಳಿದಿತ್ತು. 'ತತ್ವವಿದರಾದೊಡಂ ಸರಸತ್ವಕ್ಕೆಡೆಗುಡದ ಜಡರ್ ಅದೆಂತಱುದಪರೊ' ಕವಿತೆಯನ್? 'ಪದಮುಂ ಪ್ರಾಸಮುಮನ್ ತಪ್ಪದೆ ಬಲ್ಲನ್, ಬೇಱೆಹೋದ ಹೊಲನನ್ ರಸಭಾವದೊಳ್ ಅಱಿಯನ್, ಅವನನ್ ಎತ್ತೆನ್ನದೆ ಮತ್ತೇನೆಂದು ಕರೆದೊಡೋಯೆಂದಪ್ಪನ್?' 'ಕವಿ ರಸಸಂವ್ಯುತ್ಪನ್ನನ್ . . . ಆಗೆ ನಿರ್ವಹಿಸುವುದು; ಆ ಕವಿ ಪೇಟ್ದ ಕಾವ್ಯಮ್ ಅಖಿಳಶ್ರಾವ್ಯಂ.' ಜನ್ನನ ಈ ಮಾತುಗಳನ್ನು

---

ಕವಿಗಳೇ ಬರೆದುವೊ ಅಲ್ಲವೊ ಎಂಬ ಸಂಶಯಕ್ಕೆ ಎಡಯುವೆ. ಆಯಾ ಕವಿಗಳ ಪಕ್ಷಪಾತಿಗಳೂ ಕಕ್ಷಿಗಳೂ ತರುವಾಯ ಆ ಪ್ರಶಂಸಾಪದ್ಯಗಳನ್ನು ಬರೆದು ಕೃತಿಗಳಲ್ಲಿ ಸೇರಿಸಿದ್ದರೂ ಇರಬಹುದೆಂದು ವಾದಿಸುವುದಕ್ಕೆ ಕೊಂಚಮಟ್ಟಿಗೆ ಅವಕಾಶವಿರುವಂತೆ ತೋರುತ್ತದೆ. ಒಂದೇ ಕಾವ್ಯದಲ್ಲಿ ಬರುವ ಒಬ್ಬ ಕವಿಯ ಪ್ರಶಂಸೆಯ ಪದ್ಯಗಳಲ್ಲಿಯೇ ಎರಡು ಬಗೆಯ ನುಡಿತ ಕಂಡುಬಂದಾಗ, ವಿನಯಪೂರ್ವಕ ಪದ್ಯಗಳಲ್ಲಿ ಉತ್ತಮ ಪುರುಷಪ್ರಯೋಗವೂ ಪ್ರತಿಷ್ಠಾಪ್ರದರ್ಶಕ ಪದ್ಯಗಳಲ್ಲಿ ಪ್ರಥಮಪುರುಷಪ್ರಯೋಗವೂ ಕೆಲವೆಡೆ ಬಂದಿರುವುದನ್ನು ಗಮನಿಸಬೇಕು. ಇಂಥ ಸಂದರ್ಭದಲ್ಲಿ ಮೊದಲ ಬಗೆಯವು ಕವಿಕೃತವೂ ಎರಡನೆಯ ಬಗೆಯವು ಕವಿಮಿತ್ರಕೃತವೂ ಆಗಿದ್ದಿರಬಹುದೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

'ಆದಿಪುರಾಣ'ದಲ್ಲಿ ಪಂಪನು ಹೇಳಿರುವ 'ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕತಾರ್ಕಿಕಂಗಂ ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯರತ್ನಂ, ಅತಿ ಚತುರಕವಿಕದಂಬಕವಿಷಯಂ' ಎಂಬುದರೊಡನೆ ಹೋಲಿಸಬಹುದು.

ಶಕ್ತಿಸಂಪನ್ನತೆ ದೊಡ್ಡದಲ್ಲ, ಅದರ ಸದ್‌ವಿನಿಯೋಗ ದೊಡ್ಡದು ಎಂದು ಜನ್ನ ತಿಳಿದಿದ್ದನು. 'ಕವಿತಾಶಕ್ತಿ ಸುರೇಂದ್ರಧೇನುವದು ಪುಣ್ಯಾಯತ್ತಮ್, ಆ ಕಾಮಧೇನುವೆ ಕೈಸಾರ್ದೊಡವು, ಆ ವಚಸ್ಸುಧೆಯನ್ ಅನ್ಯರ್ಗಿತ್ತು ಕಾಪ್‌ಬೆಕ್ಕಿಗೂಡುವವೊಲ್ ತುಯ್ಯಲನ್' ದುರ್‌ವಿನಿಯೋಗಮಾಡದೆ 'ಅರ್ಹದ್ದೇವನನ್ ಭರ್ತೃಮಾಡಿ' 'ಅರಿದಿದು ಬಾಟಬಟ್ಟೆ ಪರಮಾಗಮಮ್ ಅಲ್ಲದೆ, ಜಾರಚೋರವೀರರ ಕಥೆಯಂತೆ ಬಾಯ್‌ಸವಿಯ ಮಾತುಗಳನ್ ಬಱಿಕಯ್ವ ಚರ್ಚೆಯಲ್ಲ; ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ ಪೇೞ್ದಪೆನ್ ಚರಿತಪುರಾಣಮನ್' ಎಂದು 'ಅನಂತನಾಥಪುರಾಣ'ದಲ್ಲಿ ಹೇಳಿದ್ದಾನೆ. ('ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆಯಲ್ಕೆ' ಎನ್ನುವ ವಿಶೇಷಣ ಕಾವ್ಯದೃಷ್ಟಿಯಿಂದ 'ಅನಂತನಾಥಪುರಾಣ'ಕ್ಕಿಂತಲೂ 'ಯಶೋಧರಚರಿತೆ'ಗೇ ಹೆಚ್ಚು ಒಪ್ಪುತ್ತದೆಂದು ತೋರುತ್ತದೆ). ಇದರ ಅರ್ಥ ಎಲ್ಲರ ಕವಿತಾಶಕ್ತಿಯ ವಿನಿಯೋಗಕ್ಕೂ ತೀರ್ಥಂಕರ ಪುರಾಣರಚನೆಯೊಂದೇ ದಾರಿಯೆಂದಲ್ಲ; ತಮ್ಮ ದಿವ್ಯ ಕವಿತಾಶಕ್ತಿಯನ್ನು ತಮಗೆ ತೋರಿದ, ಇಷ್ಟವಾದ, ಶ್ರದ್ಧೆಯಿರುವ ಯಾವುದಾದರೂ ದೊಡ್ಡ ವಿಷಯಕ್ಕೆ, ಕಲ್ಯಾಣ ವಿಷಯಕ್ಕೆ ವಿನಿಯೋಗಿಸಬೇಕೆಂದು.

ಜನ್ನನು ತನ್ನ ಕವಿತ್ವದ ವಿಷಯವಾಗಿ 'ಚಂದದ ಬಳ್ಳಿಸಂಕಲೆಯೊಳ್ ಅಕ್ಕರಮನ್ ಸೆಱೆಗೆಯ್ವ ಕಕ್ಕಸ'ರಂತಲ್ಲದೆ 'ರಸಸ್ಯಂದಿಗಳಾದ ಮಾತು ಮನಮನ್ ಸಲೆ ಸೋಲಿಸೆ ಪೇೞ್ದ ಲೋಕದೊಳ್ ಸಂದ ಜನಾರ್ದನನ್ ಸುಕವಿವಲ್ಲಭನ್' ಎಂದು ಹೇಳಿಕೊಂಡಿದ್ದಾನೆ. ಎಷ್ಟು ಹೇಳಿದರೇನು ಕೇಳುವವರಿಲ್ಲದಿದ್ದರೆ? 'ಎನಿತನ್ ಒಱಲ್ದು ಪೇೞ್ವ ಕವಿಏವನ್? ಅದನ್ ಪೆಸರಿಟ್ಟು ಮೆಚ್ಚ ಬಲ್ಲನನ್ ಅಱಸಲ್ಕೆ ವೇೞ್ಪುದು. ಅವನನ್ ಜಗದೊಳ್ ಪಡೆಯಲ್ಕೆ ಬಾರದು. ಆತನ ಮುಖದಿಂದ ಮಲ್ಲದದು ಸಲ್ಲದು. ಕಟ್ಟಿಯುಮೇನೊ ಮಾಲೆಗಾಱನ ಪೊಸಬಾಸಿಗಂ

ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ ?' ಎಂದು ಜನ್ನ ನೊಂದು ನುಡಿದಂತೆ ತೋರುತ್ತದೆ. ಅವನ 'ಯಶೋಧರ ಚರಿತೆ'ಯ ಬಾಸಿಗ ವನ್ನು ಮುಡಿಯುವ ರಸಿಕಭೋಗಿಗಳು ಹಲವರು ಇರುವುದರಿಂದ ಕವಿ ಕೊರಗಬೇಕಾಗಿಲ್ಲ.

**ಪೂರ್ವಕವಿ ಸ್ಮರಣೆ:** ಕವಿ ತನ್ನ ಗ್ರಂಥಾರಂಭದಲ್ಲಿ ಹಿಂದಿನ ಹಿರಿಯ ಕವಿಗಳನ್ನು ನೆನೆಯುವುದು ಕನ್ನಡದಲ್ಲಿ ವಾಡಿಕೆ. ಈ ನೆನವು ಎರಡು ಬಗೆಯಾಗಿರಬಹುದು : ಪೂರ್ವಕವಿಗಳನ್ನು ಭಕ್ತಿಯಿಂದ ಸ್ಮರಿಸಿ ಅವರಿಗೆ ಕಾಣಿಕೆ ಸಲ್ಲಿಸುವ ನಮ್ರತಾರೂಪವಾಗಿರಬಹುದು; ಇಲ್ಲವೆ, ಹಿರಿಯರ ಹೆಸರು ಹೇಳಿ ಅವರಿಗಿಂತ ತಾನು ಮಿಗಿಲೆಂದು ಹೆಮ್ಮೆ ಕೊಚ್ಚುವ ಪ್ರತಿಷ್ಠಾರೂಪವಾಗಿರಬಹುದು. ಒಂದೊಂದು ಬಗೆಯ ನೆನವು ಒಬ್ಬೊಬ್ಬನಲ್ಲಿರಬಹುದು ; ಎರಡೂ ಒಬ್ಬನಲ್ಲಿಯೇ ಕಾಣ ಬಹುದು. 'ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನ್ ಈಸುವೆನ್,ಕವಿವ್ಯಾಸನೆನ್ ಎಂಬ ಗರ್ವಮು' ಎನಗಿಲ್ಲ,' ಎಂದು ವಿನಯ ದಿಂದ ಹೇಳುವ 'ಗುಣಾರ್ಣವ' ಪಂಪನೂ ಇದ್ದಾನೆ. ಕಾಳಿದಾಸನ ಕೃತಿಗಳಿಂದ ಇಡಿಯ ಪದ್ಯಗಳನ್ನೇ ಕೊಂಡು ಕನ್ನಡಿಸಿ 'ಸಕ್ಕದದೊಳ್ ಮುನ್ನುಳ್ಳ ಕಾಳಿದಾಸಂಗಂ ನೂರ್ಮಡಿ' ಎಂದು ಗಳಹುವ ಕುರುಳ್ಗಳ ಸವಣ ಪೊನ್ನನೂ ಇದ್ದಾನೆ[1] 'ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ, ಪಂಪನಿಂಪು, ಪೊನ್ನನ ಬಗೆ, ನಾಗವರ್ಮನ ಬಹುಜ್ಞತೆ, ರನ್ನನ ಕಾಂತಿ, ನಾಗಚಂದ್ರನ ರಸಭಾವಂ, ಅಗ್ಗಳನ ವಕ್ರತೆ, ನೇಮಿಯ ದೇಸೆ, ಪುಷ್ಪಬಾಣನ ಮೃದುಬಂಧಂ—ಈ ಕವಿಗಳಲ್ತೆ ಜಿನೇಂದ್ರ ಪುರಾಣ ಕರ್ತೃಗಳ್' ಎಂದು ಭಕ್ತಿಯಿಂದ ಪ್ರಾರ್ಥಿಸುವ ಕವಿಭಾಳ ಲೋಚನ ಜನ್ನನೇ 'ರನ್ನನ್ ವೈಯಾಕರಣನ್, ಜನ್ನನ್ ಮೇಣ್ ಕವಿಗಳೊಳಗೆ ವೈಯಾಕರಣನ್; ಹೊನ್ನನ್ ಅಸಹಾಯಕವಿ, ಮೇಣ್, ಜನ್ನಿಗನ್ ಅಸಹಾಯಸುಕವಿ' ಎಂದು ಪ್ರತಿಷ್ಠೆಯ ಮಾತುಗಳನ್ನೂ ಆಡಿದ್ದಾನೆ.[2]

---

1 ೮ನೆಯ ಪುಟದ ಅಡಿ ಟಿಪ್ಪಣಿ ನೋಡಿ.

2 ಈ ಪೂರ್ವ ಕವಿಸ್ಮರಣೆಯ ವಿಷಯದಲ್ಲಿ ಒಂದು ಮಾತು ಹೇಳಬಹುದು. ಪ್ರತಿಯೊಬ್ಬ ಕವಿಯೂ ತನಗೆ ಮೆಚ್ಚುಗೆಯಾದ ಅಥವಾ ಶ್ರೇಷ್ಠರಾದ ಎಲ್ಲ ಪೂರ್ವ ಕವಿಗಳನ್ನೂ ಹೇಳಿರುವನೆಂದಾಗಲಿ, ಆಯಾ ಕವಿಗಳ ಅತ್ಯುತ್ತಮವಾದ ಅಥವಾ

ಜನ್ನನನ್ನು ಅವನ ತರುವಾಯದ ಕವಿಗಳು ಹಲವರು ಸ್ಮರಿಸಿದ್ದಾರೆ. ಗುಣವರ್ಮನು 'ಪುಷ್ಪದಂತ ಪುರಾಣ'ದಲ್ಲಿ 'ಜನ್ನಿಗನಿಂಪು' ಎಂದೂ, ಕಮಲಭವನು 'ಶಾಂತೀಶ್ವರ ಪುರಾಣ'ದಲ್ಲಿ 'ಜಗನ್ನುತ ಜನ್ನನ್' ಎಂದೂ, ಆಂಡಯ್ಯನು 'ಕಬ್ಬಿಗರ ಕಾವ'ದಲ್ಲಿ 'ಜನ್ನಿಗನ ಜಸಂ' ಎಂದೂ, ಮಲ್ಲಿಕಾರ್ಜುನನು 'ಸೂಕ್ತಿಸುಧಾರ್ಣವ'ದಲ್ಲಿ 'ಜನ್ನನ ದೇಸೆ' ಎಂದೂ, ನಾಗರಾಜನು 'ಪುಣ್ಯಾಸ್ರವ'ದಲ್ಲಿ 'ಜನ್ನನೊಳ್ಪುವೆತ್ತ ಪೊಸಮಾತು' ಎಂದೂ ನೆನೆದಿದ್ದಾರೆ. ಮಧುರನು 'ಧರ್ಮನಾಥ ಪುರಾಣ'ದಲ್ಲಿ 'ತನ್ನ ತಱುವಾಯೆ ಕೃತಿವೇಳ್ಪನ್ನನ್ ನೀನ್ ಅಲ್ಲದಿಲ್ಲವೆಂದತಿ ಮುದದಿನ್ ಮನ್ನಿಸಿ ಸಲಹುಗೆ ಸತ್ ಕವಿ ಜನ್ನನ್ ಜಾಣ್ ಎಸೆಯಲಿತ್ತು ನುಡಿಗಳನ್ ಎನ್ನನ್' ಎಂದು ಜನ್ನನನ್ನು ಸ್ತುತಿಸುವ ನೆವದಿಂದ ತನ್ನನ್ನು ಹೊಗಳಿಕೊಂಡಿದ್ದಾನೆ. ಅಲ್ಲದೆ, 'ಸರ್ವರ ಸಮ್ಮತಮ್', ಎನಗಿದು ಗರ್ವದ ಮಾತಲ್ಲ, ಶಾಸ್ತ್ರ ಲೌಕಿಕ ಕಲೆಯೊಳ್ ಬೇರ್ವರಿದ ನೇಮಿ ಜನ್ನಮರ್ ಇರ್ವ್ವರೆ ಕರ್ನಾಟಕೃತಿಗೆ ಸೀಮಾಪುರುಷರ್' ಎಂದೂ ಕೊಂಡಾಡಿದ್ದಾನೆ. ನಂಜುಂಡನು 'ಕುಮಾರರಾಮ ಕಥೆ'ಯಲ್ಲಿ 'ಬಲ್ಲಿದ ಕರ್ನಾಟ ಕವಿಗಳೆಲ್ಲರ ಗೆಲ್ದು ಬಲ್ಲಾಳ ಭೂಮಿಶ್ವರನಸಿಲ್ಲದೆ ಮೆಚ್ಚಿಸಿಕೊಂಡ ಜನ್ನನ ಪದಪಲ್ಲವಗಳಿಗೆಱಗುವೆನು' ಎಂದು ಭಕ್ತಿ ತೋರಿಸಿದ್ದಾನೆ. ಕುಮುದೇಂದು, ಮಂಗರಸ, ಬಾಹುಬಲಿ ಮೊದಲಾದ ಕವಿಗಳೂ ಜನ್ನನಿಗೆ ಮನ್ನಣೆ ಮಾಡಿದ್ದಾರೆ.

**ಜನ್ನನ ಕವಿತಾಶಕ್ತಿ** : ಕವಿಯ ವ್ಯಕ್ತಿತ್ವ ಅವನ ಶೈಲಿಯಲ್ಲಿ ಮೂಡುತ್ತದೆ ಎಂದು ಸಾಮಾನ್ಯವಾಗಿ ಹೇಳುವುದುಂಟು ಈ ಮಾತು ಎಷ್ಟು ಕನ್ನಡ ಕವಿಗಳಿಗೆ ಅನ್ವಯಿಸುತ್ತದೆಯೋ ಹೇಳುವುದು ಕಷ್ಟ. ಪಟ್ಟಿಯನ್ನೆಲ್ಲಾ ಹುಡುಕಿ ತಡಕಿದರೆ ಒಬ್ಬ ಪಂಪ, ಒಬ್ಬ ರನ್ನ, ಒಬ್ಬ ಬಸವೇಶ್ವರ, ಒಬ್ಬ ಹರಿಹರ, ಒಬ್ಬ ನಾರಣಪ್ಪ, ಒಬ್ಬ ರತ್ನಾಕರ ವರ್ಣಿ ಸಿಕ್ಕಬಹುದು ಈ ಮಾತನ್ನು ನಿಜಮಾಡುವುದಕ್ಕೆ. ನಿಸರ್ಗಕವಿತಾವಾಣಿ

---

ವಿಶಿಷ್ಟವಾದ ಗುಣಗಳನ್ನೇ ಹೇಳಿರುವನೆಂದಾಗಲಿ ಎಣಿಸುವುದಕ್ಕಿಲ್ಲ. ಈ ವಿಷಯಗಳು ಎಷ್ಟೋ ಸಲ ಕವಿ ಆಯ್ದುಕೊಂಡ ಪ್ರಾಸ ಛಂದಸ್ಸು ಮೊದಲಾದುವನ್ನೂ ಅವಲಂಬಿಸಬಹುದು.

ಒಂದು ಕೇಳಬಂದರೆ, ದುರ್ಬಲ ಗುಹಾನಿನಾದಗಳು ಸಾವಿರಗಟ್ಟಳೆ ಕಿವಿಗಿಡಿಯುತ್ತಿವೆ ಕನ್ನಡ ಸಾಹಿತ್ಯದಲ್ಲಿ. ಭಾವಕ್ಕಿಂತ ಬುದ್ಧಿಯನ್ನು ಪ್ರತಿಭೆಗಿಂತ ಪಾಂಡಿತ್ಯವನ್ನು ನಂಬಿ ನೆಮ್ಮಿದವರು ಹಲವರು. ಸಹಜ ಕವಿತಾಪ್ರತಿಭೆಯಾಗಲಿ ಕಾವ್ಯನಿರ್ಮಾಣ ಶಕ್ತಿಯಾಗಲಿ ತಕ್ಕಷ್ಟಿಲ್ಲದೆ, ಒಣಪಾಂಡಿತ್ಯ ಹೊತ್ತು ಗ್ರಂಥರಚನೆಯ ಎದೆಗುದಿಯಿಂದ, ಹಿಂದಿನ ಮಹಾಕವಿಗಳನ್ನು ಮರ್ಮವರಿಯದೆ ಅನುಕರಿಸಿ, ಹೊಸೆದಿರುವ ಛಾಯಾ ಗ್ರಂಥಗಳೇ ಹೆಚ್ಚು. ಹೀಗಿರುವಲ್ಲಿ ಕವಿಯ ವ್ಯಕ್ತಿತ್ವವಾಗಲಿ ವಿಶಿಷ್ಟತೆ ಯಾಗಲಿ ಅವನ ಕೃತಿಗಳಲ್ಲಿ ಕಾಣುತ್ತದೆಂದು ಎಲ್ಲರ ವಿಷಯದಲ್ಲೂ ಹೇಳುವುದಕ್ಕಿಲ್ಲ.

ಜನ್ನ ಮೇಲುಮಟ್ಟದ ಕವಿ. ಅದರಲ್ಲಿ ಸಂಶಯವಿಲ್ಲ. ಅವನವೇ ಆದ ಕೆಲವು ವಿಶೇಷ ಗುಣಗಳು ಅವನಲ್ಲುಂಟು. ಆದರೂ, ಕೆಲವು ಕಾರಣಗಳಿಂದ ಜನ್ನನ ಕವಿತಾಶಕ್ತಿಯನ್ನು ಒಟ್ಟಾಗಿ ವಿಮರ್ಶಿಸು ವುದಕ್ಕಿಂತ ಅವನ ಪ್ರತ್ಯೇಕ ಕೃತಿಗಳಲ್ಲಿ ಕಾಣಬರುವ ಕವಿತಾಗುಣವನ್ನು ವಿಮರ್ಶಿಸುವುದು ಮೇಲು ಮತ್ತು ಸುಲಭ. ಅವನ ಒಂದು ಕೃತಿಯಲ್ಲಿ ಕಾಣುವ ಶಕ್ತಿ, ಗುಣ, ಮತ್ತೊಂದರಲ್ಲಿ ಕಾಣುವುದಿಲ್ಲ. ಅಷ್ಟೇ ಅಲ್ಲ. 'ಅನಂತನಾಥ ಪುರಾಣ'ವನ್ನೂ 'ಯಶೋಧರ ಚರಿತೆ'ಯನ್ನೂ ಒಬ್ಬನೇ ಜನ್ನ ಬರೆದನೆಂದು ನಮಗೆ ಆ ಗ್ರಂಥಗಳಿಂದಲೇ ತಿಳಿಯದೆ ಹೋಗಿದ್ದರೆ, ಅವೆರಡೂ ಒಂದೇ ಕವಿಹೃದಯದಿಂದ ಮೂಡಿದ ಕೃತಿ ಗಳೆಂದು ನಂಬುವುದು ಕೊಂಚ ಕಷ್ಟವಾಗುತ್ತಿತ್ತು. ಜನ್ನನ ಕಾಲ ಕ್ಕಾಗಲೆ ಜೈನ ಪುರಾಣವನ್ನು ಬರೆಯುವ ಮಾರ್ಗ ಸಿದ್ಧವಾಗಿ, ಖಚಿತ ವಾಗಿ, ಏರ್ಪಟ್ಟುಹೋಗಿತ್ತು. ಆ ಸಂಪ್ರದಾಯ ಶೈಲಿಯಲ್ಲಿಯೇ ಕವಿ ಬರೆದಿರುವುದರಿಂದ ಅವನ ನಿಸರ್ಗಕವಿತಾಶಕ್ತಿಯ ವಿಕಾಸ ಪ್ರದರ್ಶನ ಗಳಿಗೆ ಅದರಲ್ಲಿ ಎಷ್ಟುಮಟ್ಟಿಗೆ ಎಡೆಯಾಯಿತೆಂದು ಹೇಳುವುದಕ್ಕಿಲ್ಲ. ಮತ್ತೊಂದು ಕಡೆ, 'ಯಶೋಧರ ಚರಿತೆ' ಸಂಸ್ಕೃತ ಗ್ರಂಥದ ಅನು ವಾದವಾದ್ದರಿಂದ ಆ ಕಾವ್ಯದ ಪ್ರತಿಷ್ಠೆಯಲ್ಲಿ ಎಷ್ಟು ಪಾಲು ಜನ್ನನಿಗೆ ಸಲ್ಲಬೇಕೋ ಸರಿಯಾಗಿ ಗೊತ್ತುಹಚ್ಚುವುದು ಕೊಂಚ ಕಷ್ಟವಾದೀತು. ಹಿಂದಿನ ಮಾರ್ಗವನ್ನು ಅನುಸರಿಸಿದ್ದರಿಂದಲೇ, ಮತ್ತೊಂದು ಆಕರದಿಂದ ತೆಗೆದುಕೊಂಡದ್ದರಿಂದಲೇ, ಒಬ್ಬನ ಕೃತಿ ಕೀಳೆಂದಾಗಲಿ ಮರುಕೂಗೆಂದಾ

ಗಲಿ ಹೇಳಬರದು. ಹಳತು ಹೊಸತೆಂದರಾದರೂ ಏನು? ಮನುಷ್ಯ ಈ ನೆಲದ ಮೇಲಿನ ತನ್ನ ನಿಡುಬಾಳಿನಲ್ಲಿ ಕಾಣದ ಕೇಳದ ಹೊಸತು ಯಾವುದೂ ಇಲ್ಲ. ಮತ್ತೊಂದು ದೃಷ್ಟಿಯಿಂದ ಪ್ರತಿಯೊಬ್ಬನ ಪ್ರತಿಯೊಂದು ಕ್ಷಣದ ಅನುಭವವೂ ಹೊಸತೆ. ಆದ್ದರಿಂದ ಒಬ್ಬ ಕವಿಯ ಕೃತಿಯಲ್ಲಿ ನೋಡಬೇಕಾದ್ದು ಆ ಕವಿಯ ವರ್ಚಸ್ಸಿನ ಪ್ರಭಾವ ಎಷ್ಟರ ಮಟ್ಟಿಗೆ ವ್ಯಕ್ತವಾಗಿದೆ ಎಂಬುದನ್ನು; ಹಳತನ್ನೆ ಹೇಗೆ ಹೊಸತಾಗಿ ತೋರಿಸಿದ್ದಾನೆಂಬುದನ್ನು. ಈ ದೃಷ್ಟಿಯಿಂದ ಜನ್ನನ ಕೃತಿಗಳನ್ನು ಇಲ್ಲಿ ತನಿತನಿಯಾಗಿ ತೆಗೆದುಕೊಂಡು ಕಿರಿದರಲ್ಲಿ ವಿಮರ್ಶೆಮಾಡಿದೆ.

## ಶಾಸನಗಳು

ಕ್ರಿ. ಶ. ೧೧೯೧ರಲ್ಲಿ ಹುಟ್ಟಿದ ಚೆನ್ನರಾಯಪಟ್ಟಣದ (೧೭೯ನೆಯ) ಶಾಸನವೂ ೧೧೯೭ರಲ್ಲಿ ಹುಟ್ಟಿದ ತರಿಕೆರೆಯ (೪೫ನೆಯ) ಶಾಸನವೂ ಜನ್ನ ಬರೆದುವೆಂದು ಆ ಶಾಸನಗಳಿಂದಲೆ ತಿಳಿಯುತ್ತದೆ. ೧೨೦೫ರಲ್ಲಿ ಹುಟ್ಟಿದ ತರಿಕೆರೆಯ (೪೨ನೆಯ) ಶಾಸನವೂ ೧೨೦೮ರಲ್ಲಿ ಹುಟ್ಟಿದ ತರಿಕೆರೆಯ (೭೮ನೆಯ) ಶಾಸನವೂ ಜನ್ನ ಬರೆದುವೇ ಇರಬಹುದೆಂದು ತೋರುತ್ತದೆ. ಕೊನೆಯ ಎರಡು ಶಾಸನಗಳಲ್ಲಿ ಕಡೆಯ ಸಾಲುಗಳ ಅಕ್ಷರ ಅಳಿಸಿಹೋಗಿರುವುದರಿಂದ ಕವಿಯ ಹೆಸರು ಗೊತ್ತಾಗುವುದಿಲ್ಲ. ಮೊದಲ ಎರಡು ಶಾಸನಗಳಲ್ಲಿ ಕೆಲವು ಪದ್ಯಗಳು ಸಮಾನವಾಗಿ ಬಂದಿವೆ. ಅಲ್ಲದೆ, ಅವುಗಳಲ್ಲಿ ಒಂದೆರಡು, ಕವಿಯ ಇತರ ಕಾವ್ಯಗಳಲ್ಲಿಯೂ ಇವೆ. ತರಿಕೆರೆಯ ೪೨ನೆಯ ಶಾಸನದ ಬಲ್ಲಾಳನ ವಂಶವರ್ಣನೆಯ ಪದ್ಯಗಳೆಲ್ಲವೂ ೪೫ನೆಯ ಶಾಸನದಲ್ಲಿವೆ. ೪೭ನೆಯ ಶಾಸನ ೪೫ರ ಕಿರಿಯಳತೆಯ ಪಡಿಯಚ್ಚಿನಂತಿದೆ. ೭೮ನೆಯ ಶಾಸನದ ನಾಗಗವುಂಡನ ಅನ್ವಯವರ್ಣನೆಯ ಆರು ಪದ್ಯಗಳು ೪೭ನೆಯದರಲ್ಲಿಯೂ ಇವೆ.

ಹೊಯ್ಸಳ ವೀರಬಲ್ಲಾಳದೇವನ ಪಾದಪದ್ಮೋಪಜೀವಿ ಶ್ರೀಕರಣದ ಹೆಗ್ಗಡೆ ಮಾಚಣನು ಆನೆಗನಕೆರೆಯನ್ನು ಅಗ್ರಹಾರವಾಗಿ ಬಿಟ್ಟ ವಿಷಯವನ್ನು ಚೆನ್ನರಾಯಪಟ್ಟಣದ ಶಾಸನವೂ; ವೀರಬಲ್ಲಾಳನ ದಂಡನಾಯಕ ಅಮಿತನು ಅಮೃತಾಪುರದ ಅಮೃತೇಶ್ವರ ದೇವಾ

ಲಯಕ್ಕೆ ಅಂಗಭೋಗಾದಿಗಳಿಗಾಗಿ ದತ್ತಿ ಬಿಟ್ಟ ವಿಷಯವನ್ನು ತರಿಕೆರೆಯ ೪೫ನೆಯ ಶಾಸನವೂ ; ವೀರಬಲ್ಲಾಳದೇವನ ಪಾದಪದ್ಮೋಪಜೀವಿ ಮಹಾ ಸಾಮಂತಚೂಡಾಮಣಿ ಹಾದಿಕೆರೆಯ ನಾಗಗವುಂಡನು ಅಮೃತೇಶ್ವರ ದೇವರಿಗೆ ಅಮೃತಪುರವನ್ನು ದತ್ತಿಬಿಟ್ಟ ವಿಷಯವನ್ನು ತರಿಕೆರೆಯ ೪೬ನೆಯ ಶಾಸನವೂ ; ನಾಗಗವುಂಡನೂ ಮಾದಗವುಂಡಿಯೂ ಮಾದಸಮುದ್ರ ಕೆರೆಯನ್ನು ಕಟ್ಟಿಸಿ ಲಿಂಗ ಪ್ರತಿಷ್ಠೆ ಮಾಡಿ ದತ್ತಿಬಿಟ್ಟ ವಿಷಯವನ್ನು ತರಿಕೆರೆಯ ೭೮ನೆಯ ಶಾಸನವೂ ಹೇಳುತ್ತವೆ.

ಜನ್ನ ಬರೆದಿರುವ ಶಾಸನಗಳು ಮಿಕ್ಕ ಹಲವು ಶಾಸನಗಳಂತೆಯೆ ಕಂದ ವೃತ್ತ ವಚನಗಳನ್ನು ಒಳಕೊಂಡು ಚಂಪೂ ಶೈಲಿಯಲ್ಲಿವೆ. ಒಂದೊಂದು ಶಾಸನವೂ ಒಂದೊಂದು ಸಣ್ಣ ಚಂಪು ಎಂದರೂ ಎನ್ನಬಹುದು. ಇವು ಚರಿತ್ರೆಯ ವಾಸ್ತವ ಸಂಗತಿಗಳನ್ನು ಹೇಳ ಹೊರಟಿದ್ದರೂ, ಹೇಳುವ ಧಾಟಿ ವರ್ಣನೆ ಎಲ್ಲವೂ ಪ್ರೌಢ ಚಂಪುಗಳಲ್ಲಿ ಚಿರಪರಿಚಿತವಾದುವೆ. ಆದ್ದರಿಂದ, ನಮ್ಮ ಚಂಪೂ ಗ್ರಂಥಗಳ ಗುಣಾವಗುಣಗಳೆರಡೂ ಈ ಶಾಸನಗಳಲ್ಲಿಯೂ ಕಾಣುತ್ತವೆ ಅದು ಹೇಗೇ ಏನೇ ಇರಲಿ ಕವಿಯ ಇತರ ಕಾವ್ಯಗಳಲ್ಲಿಯಂತೆಯೆ, ಇನ್ನೂ ಒಂದು ಕೈ ಹೆಚ್ಚಾಗಿಯೇ ಎನ್ನಬಹುದು, ಈ ಶಾಸನಗಳಲ್ಲಿ ಉಜ್ವಲ ರಾಜಭಕ್ತಿ ತುಂಬಿ ತುಳುಕುತ್ತಿದೆ. ಈ ಶಾಸನಗಳನ್ನು ಬರೆದ ಮೊದಲು ಕವಿ ರಾಜಕಟಾಕ್ಷಕ್ಕೆ ಪಾತ್ರನಾಗಿದ್ದರೂ ಇರಬಹುದು.[1]

## ಅನಂತನಾಥ ಪುರಾಣ

'ಅನಂತನಾಥ ಪುರಾಣ' ವನ್ನು ಬರೆಯುವ ಹೊತ್ತಿಗೆ ಜನ್ನನಿಗೆ ಅರುವತ್ತರೊಸಗೆ ಅಥವಾ ಷಷ್ಟಿಪೂರ್ತಿ ಆಗಿದ್ದಿರಬೇಕು. ಆ ನಿಡು ಬಾಳಿನಲ್ಲಿ ಸಂಸಾರದ ಸಾರಾಸಾರಗಳನ್ನೆಲ್ಲ ಅನುಭವಿಸಿ ಕವಿ ಮನಸ್ಸನ್ನು ಒಂದು ಹದಕ್ಕೆ ತಂದುಕೊಂಡಿರಬೇಕು. ಕೇವಲ ಲೌಕಿಕ ವಿಷಯಗಳಿಂದ ಮನಸ್ಸನ್ನು ಎಳೆದು ತನ್ನ ಮತಧರ್ಮದ ಕಡೆಗೆ ಹೆಚ್ಚುಹೆಚ್ಚಾಗಿ

---

1 ಚೆನ್ನರಾಯಪಟ್ಟಣದ ೧೭೭ನೆಯ ಶಾಸನದಿಂದಲೂ ತರಿಕೆರೆಯ ೪೫ನೆಯ ಶಾಸನದಿಂದಲೂ ಕೆಲವು ಭಾಗಗಳನ್ನು ಎತ್ತಿ ಅನುಬಂಧದಲ್ಲಿ ಕೊಟ್ಟಿದೆ.

ಹರಿಯು ಬಿಟ್ಟಿರಬೇಕು. ತನ್ನ ಧರ್ಮದಲ್ಲಿ ಮೊದಲಿನಿಂದಲೂ ಇದ್ದ ಭಕ್ತಿ ಶ್ರದ್ಧೆಗಳು ಮುಪ್ಪಿನಲ್ಲಿ ಹಣ್ಣಿಗೆ ಬಂದಿರಬೇಕು. ಹಿಂದಿನ ಜೈನ ಮಹಾ ಕವಿಗಳ ಮೇಲುಪಂಕ್ತಿಯನ್ನೇ ಅನುಸರಿಸಿ, ತನ್ನ ಧರ್ಮವನ್ನು ಬೆಳಗುವು ದಕ್ಕಾಗಿ, ಅನಂತನಾಥತೀರ್ಥಂಕರ ಪುರಾಣವನ್ನು ಬರೆದು ತನ್ನ ಕವಿತಾಸೌಧಕ್ಕೆ ಕಲಶವಿಟ್ಟಂತೆ ಭಾವಿಸಿ ಧನ್ಯನೆಂದು ಆತನು ಎಣಿಸಿರ ಬೇಕು. 'ಅನಂತನಾಥ ಪುರಾಣ' ಜನ್ನನ ಅತ್ಯಂತ ವಿಸ್ತಾರವಾದ ಗ್ರಂಥ. ಶಾಸ್ತ್ರೋಕ್ತವಾದ ಮಹಾ ಕಾವ್ಯದ ಲಕ್ಷಣಗಳೆಲ್ಲವೂ ತುಂಬಿ ತುಳುಕುತ್ತಿರುವುದರಿಂದ ಅದು ಮಹಾಕಾವ್ಯ. ಜಗನ್ನುತ ಜನ್ನನ ಆಳ ವಾದ ತುಂಬುಪಾಂಡಿತ್ಯಕ್ಕೆ ಅದು ಆಡುಂಬೊಲ ; ಮೆದುಳಿನ ಮಾಟದ ಬೆರಗುವರಿಸೆಗಳ ಗರಡಿಯ ಮನೆ.

ಜನ್ನನ ಕಾಲಕ್ಕೆ ಎಷ್ಟೋ ಮುಂಚೆಯೇ ಜೈನಪುರಾಣ ರಚನೆಯ ರಾಜಮಾರ್ಗ ಏರ್ಪಟ್ಟುಹೋಗಿತ್ತು. ಕಥೆ ಹೀಗೆಯೇ ಇರಬೇಕು, ಇಂಥಿಂಥ ವಿಷಯಗಳೇ ಬರಬೇಕು, ಈ ಈ ಕ್ರಮದಲ್ಲಿಯೇ ನಿರೂಪಿತ ವಾಗಬೇಕು, ಇವೇ ಮೊದಲಾದ ಕದಲಿಸಲಾಗದ ಕಟ್ಟುಗಳು ಏರ್ಪಟ್ಟು ಹೋಗಿದ್ದುವು. ಇಪ್ಪತ್ತುನಾಲ್ವರು ತೀರ್ಥಂಕರರು ಇದ್ದರೂ ಆಕಾರ, ಗಾತ್ರ, ಬಣ್ಣ, ಹೆಸರು ಮೊದಲಾದ ಕೇವಲ ಬಾಹ್ಯಲಕ್ಷಣಗಳನ್ನು ಬಿಟ್ಟರೆ ವ್ಯಕ್ತಿವ್ಯಕ್ತಿಗೆ ಅಷ್ಟೇನೂ ವ್ಯತ್ಯಾಸ, ವೈಶಿಷ್ಟ್ಯ ತೋರು ವುದಿಲ್ಲ. ಒಬ್ಬೊಬ್ಬರೂ ಮತ್ತೊಬ್ಬರ ದೊಡ್ಡ ಅಥವಾ ಸಣ್ಣ ಪಡಿಯಚ್ಚು. ಜತೆಗೆ, ಪ್ರತಿಯೊಬ್ಬರ ಜೀವನಕಥೆಯಲ್ಲಿಯೂ ಹೇಳುವುದು ಮಾನುಷ ಸಂಗತಿಗಳಿಗಿಂತ ಹೆಚ್ಚಾಗಿ ಅತಿಮಾನುಷ ಸಂಗತಿಗಳು. ಅವೂ ಕೂಡ ಬಹುತರ ಒಂದೇ ಅಚ್ಚಿನವು. ಮನುಷ್ಯನನ್ನೇ ದೇವನನ್ನಾಗಿ ಮೇಲೆತ್ತಿ, ಬೇರೆ ದೇವನನ್ನು ಕಾಣದ ದರ್ಶನವನ್ನು ಕಂಡ ಜೈನಧರ್ಮಕ್ಕಿಂತ ದೊಡ್ಡಮಾನವಧರ್ಮವೇ ಮತ್ತೊಂದಿಲ್ಲವೆಂದರೂ ತಡೆದೀತು, ಮಾನವ ವಿಕಾಸದೃಷ್ಟಿಯಿಂದ. ಹೀಗಿರುವಲ್ಲಿ, ಜಿನಜೀವನ ವಿಷಯದಲ್ಲಿ ಯಾರಿಗೆ ತಾನೆ ಸಹಾನುಭೂತಿಯಿಲ್ಲ ? ಆದರೆ, ವಾಸ್ತವಿಕ ರೀತಿಯಲ್ಲಿ ಜೀವನ ಕಥೆ ನಿರೂಪಣೆಯಾಗಿದ್ದರೆ, ಈ ಚರಿತ್ರೆಗಳು ಇನ್ನೂ ಹೆಚ್ಚಾಗಿ ಜನ ಮೆಚ್ಚುಗೆಯನ್ನು ಪಡೆಯುತ್ತಿದ್ದುವೇನೊ ! ಈಗಿರುವ ರೂಪದಲ್ಲಿಯೆ ಈ ತೀರ್ಥಂಕರರ ಚರಿತ್ರೆಗಳೆಲ್ಲವೂ ಒಂದೇ ಸಮನಾಗಿ ಎಲ್ಲರ ಮನ ಸ್ಸನ್ನೂ ಎಳೆಯಲಾರದಾವೇ ಎನ್ನಿಸುತ್ತದೆ.

ಪುರಾಣ ವಸ್ತುವಿನಿಂದ ಸುಂದರವಾದ ಕಾವ್ಯವನ್ನು ಮನೋಹರವಾಗಿ ಕಟ್ಟುವುದಕ್ಕೆ ಆಗುವುದಿಲ್ಲವೆಂದು ಹೇಳುವಂತಿಲ್ಲ. ಪಂಪನ 'ಆದಿಪುರಾಣ' ಉತ್ತಮಕಾವ್ಯವಲ್ಲವೆ? ಪುರಾಣರಚನೆಯ ಸಂಪ್ರದಾಯ ಮಾರ್ಗದ ಹಿಂಗಟ್ಟು ಮುಂಗಟ್ಟುಗಳಲ್ಲಿ ಸೆರೆಸಿಕ್ಕಿ ತೊಳಲಿ ಒರಲುತ್ತಿದ್ದರೂ ಪಂಪನ ನಿಸರ್ಗ ಕವಿತಾವಾಣಿಯು ಘೋಷ ಉದ್ಧಕ್ಕೊ ಸೀಳಿಕೊಂಡು ಬಂದು ಸೊದೆಯೆರೆದು ಕಿವಿಕೊನರಿಸುವುದಿಲ್ಲವೆ? ಅಲ್ಲೊಮ್ಮೆ ಇಲ್ಲೊಮ್ಮೆ ತಲೆಹಾಕುವ ನೀರಸವಾದ ಕಾವ್ಯೇತರ ಭಾಗಗಳನ್ನು ಸಮರಿ ಪರಿಷ್ಕರಿಸಿದರೆ ಪಂಪನ 'ಆದಿಪುರಾಣ' ಉತ್ಕೃಷ್ಟ ಕಾವ್ಯವಾಗಿ ಇಂದೂ ಮುಂದೂ ಎಲ್ಲರ ಮನಸ್ಸನ್ನೂ ರಂಜಿಸಿ ಆನಂದಗೊಳಿಸುವುದಿಲ್ಲವೆ? ಆದರೆ ಇದೇ ಮಾತನ್ನು ಉಳಿದ ತೀರ್ಥಂಕರ ಪುರಾಣಗಳೆಲ್ಲದರ ವಿಷಯದಲ್ಲಿ ಅಷ್ಟು ಧೈರ್ಯವಾಗಿ ಹೇಳುವುದು ಕಷ್ಟ. ಪಂಪ ಆರಿಸಿಕೊಂಡಿರುವ ಕಥೆಯೂ ಇದಕ್ಕೆ ಸಹಕಾರಿಯಾಗಿದೆ. ವೃಷಭ ತೀರ್ಥಂಕರನ ಮತ್ತು ಭರತ ಬಾಹುಬಲಿಗಳ ಕಥೆ ಇತರ ತೀರ್ಥಂಕರರ ಮತ್ತು ಚಕ್ರವರ್ತಿಗಳ ಕಥೆಗಿಂತ ಹೆಚ್ಚು ಸ್ವಾರಸ್ಯವೂ ಕಾವ್ಯಯೋಗ್ಯವೂ ಆಗಿದೆ. ಆದರೂ, 'ಪಂಪಭಾರತ' ಹೇಗೆ ಮಿಕ್ಕ ಕನ್ನಡ ಕಾವ್ಯಗಳನ್ನು 'ಇಕ್ಕಿ ಮೆಟ್ಟಿದೆ' ಯೋ ಹಾಗೆಯೆ, ಪಂಪನ 'ಆದಿಪುರಾಣ' ಮಿಕ್ಕವನ್ನು ಮೆಟ್ಟಿದೆ. ಕನ್ನಡದಲ್ಲಿ ಆ 'ಜಿನಪುರಾಣ' ದ, ಆ ಗಂಡುಗವಿತೆಯ ಸಂಪತ್ತೇ ಇನ್ನೂ ಬೆಳೆಯಬಾರದಾಗಿತ್ತೇ ಎನ್ನಿಸುತ್ತದೆ.

ಗುಣಭದ್ರಾಚಾರ್ಯರು ಸಂಸ್ಕೃತದಲ್ಲಿ ಪದ್ಯರೂಪದಲ್ಲಿ ಬರೆದಿರುವ ಜೈನ ಉತ್ತರಪುರಾಣದಲ್ಲಿಯೂ ಚಾವುಂಡರಾಯನು ಕನ್ನಡದಲ್ಲಿ ಗದ್ಯರೂಪದಲ್ಲಿ ಬರೆದಿರುವ ತ್ರಿಷಷ್ಟಿಶಲಾಕಾಪುರುಷ ಪುರಾಣದಲ್ಲಿಯೂ ಬರುವ ಅನಂತಜಿನನ ಕಥೆ ಜನ್ನನಿಗೆ ಆಧಾರವೆಂದು ತೋರುತ್ತದೆ. ಚಾವುಂಡರಾಯ ಪುರಾಣದಲ್ಲಿ ಸುಮಾರು ಇಪ್ಪತ್ತು ಸಾಲುಗಳಲ್ಲಿ ಅಡಕವಾಗಿರುವ ವಸ್ತುವನ್ನು ನಮ್ಮ ಕವಿ ಸುಮಾರು ೧,೪೦೦ ಪದ್ಯಗಳಲ್ಲಿ ಹರವಿದ್ದಾನೆ. ಗ್ರಂಥ ಪ್ರೌಢಶೈಲಿಯ ಚಂಪು ಎಂದು ಹೇಳಿದರೆ ಒಟ್ಟಿನಲ್ಲಿ ಅದರ ಗುಣಗಳನ್ನು ಹೇಳಿದಂತಾಯಿತು ಎನ್ನಬಹುದು. ಭಾಷೆ ಸಂಸ್ಕೃತಭೂಯಿಷ್ಠವಾಗಿ ಸಾಮಾನ್ಯರಿಗೆ ಪೆಡಸಾಗಿದೆ. "ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂತಿಸಿ

ಕೂಡಲಾಱದಕ್ಕಟ ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೆ ? '' ; '' ಸಕ್ಕದಮಂ ಪೇೞ್ವೊಡೆ ನೆಱೆ ಸಕ್ಕದಮಂ ಪೇೞ್ಗೆ, ಶುದ್ಧ ಕನ್ನಡ ದೊಳ್ ತಂದಿಕ್ಕುವುದೆ ಸಕ್ಕದಂಗಳ ? ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ? '' ಎಂದು ಕನ್ನಡದ ಮೇಲಿನ ಸಂಸ್ಕೃತ ದಾಳಿಯನ್ನು ನಯಸೇನನೇ ಮೊದಲಾದವರು ಎಷ್ಟು ಪ್ರತಿಭಟಿಸಿದರೇನು ? 'ಉಭಯ ಕವಿಚಕ್ರವರ್ತಿ 'ಗಳ ಕಿವಿಮುಗಿಲನ್ನು ಮುಟ್ಟಬಲ್ಲದೆ ಆ ಬಡ ಕೂಗು ?

ಅವನೀದೃಶ್ಯಾಂಜನಕ್ಷೇಪಣವಿಪುಳಕಪೋಲಂ ಶಿಖಂಡಿಸ್ಫುರತಾ್ತಂ
ಡವರಂಗಂ ಸಾಂದ್ರಚಂದ್ರೋದಯಮಮರಸರಿತ್ಪದ್ಮಪತ್ರೋದನೀಲೀ
ನಿವಹಂ ಪರ್ಜನ್ಯದೋಹಕ್ಷಮ ಬಹುಮಹಿಷೀಸಂಕುಲಂ ಯಾಮಿನೀಸಂ
ಭವಶುಂಭನ್ಮಂದಿರಂ ನಿಂದುದು ಪಿಕರುಚಿರೋತ್ತಾಳಮಂಭೋದಜಾಳಂ

ಕರಿಸೇನಾನಕ್ರಚಕ್ರಂ ತುರಗಬಲತರಂಗತ್ತರಂಗಂ ಚಳತ್‌ಪು
ಷ್ಪರಥಪ್ರೋದ್ಡಿನಫೇನಂ ಚಟುಳಭಟಪಯೋಜಂತು ಸಂತಾನಕಂ ಶಾ
ಕ್ವರಮಾಳಾವಿಭ್ರದಭ್ರಂ ನಟನಯುವತಿಗಾಂಧರ್ವಿಕಾವೃಂದತೀರಾಂ
ತರವಲ್ಲೀವೇಲ್ಲನಂ ಬಂದುದು ಸುರವರಸಪ್ತಾಂಗಸೇನಾಸಮುದ್ರಂ

ಗ್ರಂಥದ ಉದ್ದಕ್ಕೂ ಇಂಥವು ಬಹಳ. ಜನ್ನ ತಿಳಿಯಾದ ಸರಳವಾದ ಅಚ್ಚಕನ್ನಡದಲ್ಲಿ ಅಂದವಾಗಿ ಮನಮುಟ್ಟುವಂತೆ ಬರೆಯಬಲ್ಲ.—ಮನಸ್ಸು ಮಾಡಿದರೆ, ಕನ್ನಡಿಗರ ಮೇಲೆ ಕೃಪೆಯಿಟ್ಟರೆ. ಮುದ್ದಾದ ತಿಳಿಗನ್ನಡಕವಿತೆ ಗಳನ್ನು ಅಲ್ಲಲ್ಲಿ ಮಾದರಿಗಾಗಿ ಸೇರಿಸಿದ್ದಾನೆ. ಕಾರ್ಗಾಲ ತಲೆದೋರೆ,

ಅಂತು ಮೊಗಮಂ ನೋಡಲಿಳೆಯೆ ಕಣ್‌ದೆಱೆದಂತೆ
ಮಣಿಬೀಡು ರಜ ಧರಣಿಯೊಳ್ ನೆಗೆದುಪೋರಂತೆ.
ಕಲ್ಲಪೊಗರೆಯೊಳಿಟ್ಟ ಕಾರ್ಮುಗಿಲ ಮೊಟ್ಟೆಗಳ್
ತಾಮೆನಿಸಿ ಪರ್ಬಿದುವು ಪೆರ್ಜೇನ ಪುಟ್ಟುಗಳ್.
ತರದೆ ಪಾಱಿದುವು ಬೆಳ್ವಕ್ಕಿ ನೂಲ್‌ದೆಗೆದಂತೆ
ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ.
ಚಿಕ್ಕವಂ ಮೊಲೆಯೆಡೆಯೊಳಿಕ್ಕಿ ಪಿಡಿದುದು ಮತ್ತೆ

ಪುಲ್ಲೆಗಳ ಪಿಂಡೊಡೆಯದೊಡನೆ ಮೆಯ್ವಿದಿರುತ್ತೆ.
ಬಸಿಱನಪ್ಪಿದ ಮಱಿಗಳಂ ಹೊತ್ತು ಸಾಲ್ಗೊಂಡು
ಮರದ ಪೋಟಲ್ಗೆ ಸಾರ್ದುವು ಕೋಡಗದ ಹಿಂಡು.
ತೊರೆದುಗುವ ತೋರಮೊಲೆಗಳನುಂಡು ಕಱು ಪಿಂಗೆ
ಪಾಲಧಾರೆಗಳೊಕ್ಕು ನೊರೆಯ ಪಿಂಡಲು ಪೊಂಗೆ,
ಬೆನ್ನಮೇಲಣ ಪನಿಯೊಳುಣ್ಮೆ ನೆಗೆತರುವೆರ್ಮೆ
ಕೋಡೆಕೊಂಡುವು ಮಿಕ್ಕನಿಱಿಯುತಂ ಕಾಡೆರ್ಮೆ.
ಪಸಲೆಯೊಳ್ ಪಸುರೇಱೆ ಪರಪಿನೊಳ್ ಪೊರೆಯೇಱೆ
ಗಿಡುಗಳೊಳ್ ದನಿದೋಱೆ ಗೊಡಲೆಯೊಳ್ ನೊರೆವೇಱೆ,
ನಿಱಿನಿಱಿದು ತೆರೆಯಿಱಿದು ಕಿಱುಮಟಲ ದಿಣ್ಣೆಯೊಳ್
ಪರಿವ ಬರಿವೊನಲೆಸೆದುವೋರೊಂದು ತಾಣದೊಳ್.
ನೆಲವುತ್ತಿನೊಳ್ ಪೊನಲ್ ಪುಗೆ ಪಾವು ಪೊಱಮಟ್ಟು
ಪೆಡೆಗಳಂ ಕೊಡೆಗಳಂತೆತ್ತಿದುವು ಕಡೆಪಟ್ಟು.

ಲಲಿತ ರಗಳೆಯ ಮಳೆಗಾಲದ ಈ ಕನ್ನಡ ನವಿಲ ಕುಣಿತ ಯಾವುದಕ್ಕೆ ಕಡಮೆಯಾಗಿದೆ?

ತೀರ್ಥಂಕರನ ಚರಿತ್ರೆಯಾದ 'ಅನಂತನಾಥ ಪುರಾಣ'ದಲ್ಲಿಯ ಶೃಂಗಾರ ಸಾಮಾನ್ಯಶೃಂಗಾರಕಾವ್ಯಗಳಲ್ಲಿ ಚಿರಪರಿಚಿತವಾದ್ದೇ. ಅದೇ ಪಾಮರಿಯರು, ಮಾಲೆಗಾರ್ತಿಯರು, ವಾರವನಿತೆಯರು; ಅದೇ ವೇಶ್ಯಾವಾಟಿ. ಅನಂತನಾಥನನ್ನು ಓಲೈಸಬೇಕಾದರೆ ಭೂಮಿಯ ಬೆಲೆವೆಣ್ಣುಗಳಾಗಬೇಕು; ಇಲ್ಲವೇ ಗಗನದ ಗಣಿಕೆಯರಾಗಬೇಕು. ಜಿನನ ಅಂತಃಪುರದಲ್ಲಿ ವಧುವಿನ ಜತೆಗೆ ವಾರಾಂಗನೆಯರಿರಬೇಕು. ಅನಂತ ತೀರ್ಥನಾಥನನ್ನು ವೇಶ್ಯಾವಾಟಿಯಲ್ಲಿ ಚಂದ್ರಿಕಾ ವಿಹಾರಕ್ಕೆ ಕವಿ ಕಳಿಸಿದ್ದಾನೆಂದಮೇಲೆ ಬೇರೆ ಹೇಳಬೇಕೆ[1]? ಹಲವು ಕವಿಗಳ ಕಣ್ಣಿಗೆ

1 ಇಂಥ ವೈಪರೀತ್ಯಗಳು ಇತರ ಮಹಾಕಾವ್ಯಗಳಲ್ಲಿಯೂ ಕಾಣಬರುತ್ತವೆ.

ಸುಭದ್ರೆಯ ರೂಪಕ್ಕೆ ಮೋಹಗೊಂಡು ಪರಿಣಯಕ್ಕೆಳಸಿ ವಿರಹವನುಭವಿಸುತ್ತಿರುವ ಅರ್ಜುನನನ್ನು ಮುನ್ನಿರುಳು ವಿಟವಿದೂಷಕರೊಡನೆ ಸೂಳೆಗೇರಿಯಲ್ಲಿ ತಿರಿಸುತ್ತಾನೆ ಪಂಪ.

ಗಿರಿಜೆ ಸಾಕ್ಷಾತ್ ಪರಮೇಶ್ವರಿಯ ಅವತಾರವೆಂದು ತಂದೆತಾಯಿಗಳಿಗೆ ಅರುಹ

ಹೆಣ್ಣು ಹೆಚ್ಚಾಗಿ ಕಾಮುಕೆರಳಿಕೆಯ ಮತ್ತು ಆ ಕಾಮತೀರಿಕೆಯ ಯಂತ್ರ ಮಾತ್ರವಾಗಿ ಕಂಡಿದ್ದಾಳೆಯೇ ಹೊರತು, ಬಿರುಗಂಡನ್ನು ಮೃದುಮಾಡಿ ನಯಕ್ಕೆ ತಿದ್ದುವ, ಒಂಟಿ ಬದುಕಿನ ಅರಕೆಯನ್ನು ತುಂಬುವ ಹೆಣ್ಣಾಗಿ, ಅಕ್ಕತಂಗಿಯಾಗಿ, ಮಗಳಾಗಿ, ತಾಯಾಗಿ, ದೇವಿಯಾಗಿ ಅಷ್ಟು ಕಂಡುಬಂದಿಲ್ಲ. ಕವಿಯ ಈ ನೋಟಕ್ಕೂ ಅವನು ಅನುಸರಿಸಿದ ಕಾವ್ಯ ಮಾರ್ಗವೇ ಕಾರಣ. ಅವನು ಬದುಕಿನಲ್ಲಿ ಅಕ್ಕ ತಂಗಿಯರ ತಾಯಿ ಮಗಳುದಿರ ಗೆಳತಿ ಮಡದಿಯರ ಒಲುಮೆ ನಲುಮೆಗಳನ್ನು ಉಂಡು ನಲಿಯದವನೆಂದಲ್ಲ ; ಆಳ ಬಾಳಿನಲ್ಲಿ ಆ ಒಲುಮೆ ನಲುಮೆಗಳ ತಿಳಿ ಸವಿಗೆ ಎಡೆ ಎಷ್ಟೆಂದು ಅರಿಯದವನಲ್ಲ. ಆದರೆ, ಕಾವ್ಯಪ್ರಪಂಚಕ್ಕೆ ಕಾಲಿಟ್ಟೊಡನೆಯೆ, ಕವಿಯ ಕಣ್ಣೇ ಏಕೋ ಬೇರೆಯಾಗುತ್ತದೆ. ರವಿ ಕಾಣದ್ದನ್ನು ಕವಿ ಕಾಣಬೇಡವೆ ! ಇಲ್ಲಿ ಅನಾವಶ್ಯಕವಾದ, ಒಬ್ಬ ಪವಿತ್ರ ವ್ಯಕ್ತಿಯ ಜೀವನ ಕಥನಕ್ಕೆ ಹೊಂದದ, ಶೃಂಗಾರ ಭಾಗವಷ್ಟನ್ನಾದರೂ ಕತ್ತರಿಸಿ ಹಾಕಿದರೆ ಕೃತಿ ಅರ್ಧಕ್ಕರ್ಧ ಕಸಿಯಾಗುತ್ತದೆ. ' ಯಶೋಧರ ಚರಿತೆ ' ಯಲ್ಲಿ ಪ್ರಣಯವನ್ನು ಅಷ್ಟು ಸರಳವಾಗಿಯೂ ತಿಳಿಯಾಗಿಯೂ ಚಿತ್ರಿಸಿ ಇಲ್ಲಿ ಏಕೆ ಜನ್ನನ ಕೈ ಮುಗ್ಗರಿಸಿತೊ ತಿಳಿಯದು. ಹೀಗಿದ್ದೂ ' ಜಾರ ಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಿಕಯ್ವ ಚರ್ಚೆಯಲ್ಲರುಹನ ಮೂರ್ತಿಯಂತಿರೆ ನಿರಾಭರಣಂ ಮೆಱೆ ಯಲ್ಕೆ ಪೇಟ್ದಪೆನ್ ' ಎಂದು ಹೇಳುವ ಜನ್ನನ ಧಾರ್ಷ್ಟ್ಯವೇ ಧಾರ್ಷ್ಟ್ಯ.

' ಬಾಟ ಬಟ್ಟೆ ಪರಮಾಗಮ ' ವನ್ನು ಹೇಳಹೋಗಿ, ' ಧರ್ಮವಿಹಾರದಿಂ ಭವ್ಯ ಸಸ್ಯಾವಳಿಗೆ . . ಧರ್ಮಾಮೃತವರ್ಷ' ವನ್ನು ಕರೆದ ತೀರ್ಥನಾಥನ ಉಪಾಸನೆಯನ್ನು ವಿವರಿಸುವಲ್ಲಿ

ಪದಿನಾಲ್ಕನೆಯ ಜಿನೇಂದ್ರಂ
ತ್ವದೀಯ ಗುರುವದಱಿನಮಳಸೂತ್ರಾಂತಿಕದೊಳ್
ಪದಿನಾಲ್ಕುಂ ಗಂಟನಿಕ್ಕು
ವುದು ಕನಕದ ಪಟ್ಟುನೂಲನೂಲಭಿರಚಿತಂ

---

ಬಂದ ನಾರದ ಮಹಾಮುನಿ ರಾತ್ರೆ ರಾಜನೊಡನೆ ಚಂದ್ರಿಕಾವಿಹಾರಕ್ಕೆ ಹೋಗುತ್ತಾನೆ ಹರಿಹರನ ' ಗಿರಿಜಾ ಕಲ್ಯಾಣ ' ದಲ್ಲಿ.

ಕ್ರಮದಿಂ ದಾರಮನೋಂ ಹ್ರೀಂ
ನಮೋಽರ್ಹತೇಽನಂತಬಂಧನಾಶಾಯಾನಂ
ತಮುಷಿಮ್ನೇ ಸ್ವಾಹಾ ಎಂ
ಬೀ ಮಂತ್ರವ ಪೇೞ್ದು ಕಟ್ಟುವುದು ಬಲದೋಳೊಳ್

ಮುಂಡಗೆ ಮೇಣ್ ಹೂರಿಗೆ ಮೇಣ್
ಉಂಡಲಿಗೆಗಳಕ್ಕಕಣಿಕದಿಂದ್ಯೈಮಾನಂ
ಗೊಂಡಿಪ್ಪತ್ತೆಂಟಾಗಿರೆ
ಖಂಡಿಸಿ ಕೊಡುವುದು ದೃಢವ್ರತಂಗಂತದಱೊಳ್

—ಎಂದು ಮೊದಲಾಗಿ ನೋಂಪಿಯ ಪರಿಯನ್ನು ಓದುವುದು ಶುದ್ಧ ಸಾಹಿತ್ಯ ದೃಷ್ಟಿಯಿಂದ ಅಷ್ಟು ಉಚಿತವಾಗದೆ ಹೋಗಬಹುದು. ಆದರೆ, ಮತೋಪದೇಶವನ್ನೂ ಕಾವ್ಯರಚನೆಯನ್ನೂ ಜತೆಯಲ್ಲೇ ತೆಗೆದು ಕೊಂಡು ಹೋಗುವ ಪದ್ಧತಿಯಲ್ಲಿ ಇದು ಅನಿವಾರ್ಯ. ಒಟ್ಟಿನಲ್ಲಿ ಹೇಳುವುದಾದರೆ, ಮನುಷ್ಯನಾಗಿ ಹುಟ್ಟಿ ದೊಡ್ಡದಾಗಿ ಬಾಳಿ ಆತ್ಮ ಸಾಧನೆಯಿಂದ ದೇವತ್ವಕ್ಕೆ ಏರಿದ ಒಬ್ಬ ಮಹಾವ್ಯಕ್ತಿಯ ಸಾನ್ನಿಧ್ಯದ ಯಾವ ಪವಿತ್ರ ಅನುಭವ ತೀರ್ಥಂಕರ ಚರಿತ್ರೆಯಿಂದ ಆಗಬೇಕೊ ಆ ಅನುಭವ ಇನ್ನೂ ರಸವತ್ತಾಗಿ ಆಗುತ್ತಿತ್ತು—ಜೀವನಕಥೆ ವಾಸ್ತವ ಶೈಲಿಯಲ್ಲಿ ಉಲ್ಲೇಖವಾಗಿದ್ದರೆ. ಆದರೆ, ಜನ್ನನು ಅನುಸರಿಸಿರುವ ಮಹಾ ಕಾವ್ಯಲಕ್ಷಣದ ಸಂಪ್ರದಾಯಪಂಥದ ಪುರಾಣರಚನೆಯ ಕಟ್ಟಿನಲ್ಲಿ ಈಗಿರುವುದಕ್ಕಿಂತ ಹೆಚ್ಚಿಗೆಯನ್ನು ನಿರೀಕ್ಷಿಸುವುದು ತಪ್ಪಾದೀತು.

ಭರತ ಬಾಹುಬಲಿಗಳ ಪ್ರಕರಣ 'ಆದಿಪುರಾಣ'ದ ಸೌಂದರ್ಯ ವನ್ನು ಹೆಚ್ಚಿಸುವಂತೆ ವಸುಷೇಣ ಸುನಂದೆ ಚಂಡಶಾಸನರ ಕಥೆ 'ಅನಂತ ನಾಥಪುರಾಣ'ಕ್ಕೆ ಕಳೆಕೊಡುತ್ತದೆ. 'ಅನಂತನಾಥಪುರಾಣ'ದ ಈ ಪ್ರಕರಣ 'ಯಶೋಧರ ಚರಿತ್ರೆ'ಯ ಕಥೆಯಂತೆ ಪ್ರಣಯ ಸಮಸ್ಯೆಗೆ ಸಂಬಂಧಪಟ್ಟದ್ದು. ಒಂದು ಪ್ರಣಯ ಸಮಸ್ಯೆಯಲ್ಲಿ ಸಾಮಾನ್ಯವಾಗಿ ಮೂರು ವ್ಯಕ್ತಿಗಳು ಸಿಕ್ಕಿಕೊಂಡಿರುವುದುಂಟು. ಒಂದು ಹೆಣ್ಣು ಎರಡು ಗಂಡು ; ಇಲ್ಲವೆ, ಒಂದು ಗಂಡು ಎರಡು ಹೆಣ್ಣು. ಒಂದು

ಗಂಡು ಎರಡು ಹೆಣ್ಣಿನ ಸಂಬಂಧ ಸಾಮಾನ್ಯವಾಗಿ ನಮ್ಮವರಿಗೆ ಅಷ್ಟೇನೂ ಸಾಮಾಜಿಕ ಸಮಸ್ಯೆಯಾಗಿ ತೋರಿ ಬಂದಿಲ್ಲ. ಸವತಿ ಮತ್ಸರವೂ ಸತಿ ಸೂಳೆಯರ ಸೆಣಸೂ ಮೊದಲಿನಿಂದಲೂ ಇತ್ತಾದರೂ, ಈ ಕಾಟದಿಂದ ಗಂಡಿಗೆ ಬೇರೆ ತೆರನ ತೊಡಕುಗಳು ಉಂಟಾಗಿದ್ದರೂ, ಒಬ್ಬನ ಪ್ರೇಮ ಜೀವನದಲ್ಲಿ ಈ ಸಂಬಂಧ ಅಷ್ಟಾಗಿ ಅಸಾಧ್ಯ ಸಮಸ್ಯೆಗಳನ್ನೇನೂ ಒಡ್ಡಿದಂತೆ ಕಾಣಲಿಲ್ಲ. ದೊರೆಯಾದರೆ ಒಬ್ಬಳನ್ನು ಪಟ್ಟದರಸಿಯನ್ನಾಗಿಯೂ ಮತ್ತೊಬ್ಬಳನ್ನು ಪ್ರೇಮದರಸಿಯನ್ನಾಗಿಯೂ, ಸಾಮಾನ್ಯನಾದರೆ ಒಬ್ಬಳನ್ನು ಮನೆಮಡದಿಯನ್ನಾಗಿಯೂ ಮತ್ತೊಬ್ಬಳನ್ನು ಒಲವಿನೊಡತಿಯನ್ನಾಗಿಯೂ ಮಾಡಿಕೊಂಡುಬಿಟ್ಟರೆ ಎಲ್ಲವೂ ಸರಿಹೋದಂತೆ ಹೊರಕ್ಕಾದರೂ ತೋರುತ್ತಿತ್ತು. ಆದರೆ, ಒಂದು ಹೆಣ್ಣು ಎರಡು ಗಂಡಿನ ಸಮಸ್ಯೆ ಜಟಿಲವಾದ್ದು, ದುರಂತವಾದ್ದು. ಅದರಲ್ಲಿಯೂ ಹೆಣ್ಣು ಹೆರನ ಹೆಂಡತಿಯಾಗಿದ್ದರೆ ಅನರ್ಥ ಹೇಳತೀರದು. ಈ ಸಮಸ್ಯೆಗೆ ಮೂಲಕಾರಣ ಹೆಣ್ಣಾಗಿರಬಹುದು, ಗಂಡಾಗಿರಬಹುದು. 'ಯಶೋಧರ ಚರಿತೆ' ಯಲ್ಲಿ ಮನೆಮಡದಿ ಅಮೃತಮತಿಯ ಮನಸ್ಸು ಚಲಿಸುತ್ತದೆ. ಮತ್ತೊಂದರಲ್ಲಿ ಚಂಡಶಾಸನನ ಕಣ್ಣು ಮಿತ್ರನ ಮಡದಿಯ ಮೇಲೆ ಬೀಳುತ್ತದೆ. ಎರಡು ಕಡೆಯೂ ಸನ್ನಿವೇಶ ರುದ್ರ ಸನ್ನಿವೇಶ, ಅಂತ ದುರಂತ.

'ಅನಂತನಾಥಪುರಾಣ'ದ ಮುಖ್ಯವಸ್ತುವಾದ ಅನಂತತೀರ್ಥಂಕರನ ಚರಿತ್ರೆಗೂ ವಸುಷೇಣ ಸುನಂದೆ ಚಂಡಶಾಸನರ ಪ್ರಕರಣ ಬರುವ ಸುಪ್ರಭಪುರುಷೋತ್ತಮರ ಚರಿತ್ರೆಗೂ ನೇರವಾದ ಯಾವ ಸಂಬಂಧವೂ ಇಲ್ಲ. ಒಬ್ಬ ತೀರ್ಥಂಕರನ ಚರಿತ್ರೆ ಹೇಳುವಾಗ ಅವನ ಕಾಲದಲ್ಲಿರಬಹುದಾದ ಚಕ್ರವರ್ತಿಯ ಕಥೆಯನ್ನೂ ಬಲದೇವ ವಾಸುದೇವರ ಕಥೆಯನ್ನೂ ಹೇಳುವುದು ಜಿನಪುರಾಣದಲ್ಲಿ ವಾಡಿಕೆ. ಅನಂತಜಿನನ ಸಮವಸರಣ ಮಂಟಪಕ್ಕೆ 'ಸುಪ್ರಭನೆಂಬ ನಾಲ್ಕನೆಯ ಬಲದೇವನ್ ಬಂದು ದೇವರ ದೇವನನ್ (ಅನಂತನನ್) ಅನೇಕಾರ್ಚನೆಗಳಿಂದರ್ಚಿಸಿ ಪೊಡವಟ್ಟು, ಜಯನಾಥ ಗಣಧರರೊಳ್ ತನ್ನ ಪೂರ್ವಜನ್ಮವೃತ್ತಕಮಂ ಬೆರಸು ನಿಜಾನುಜಾತನ್ ಚತುರ್ಥವಾಸುದೇವನ್ ಎನಿಸಿದ ಪರಮ ಪುರುಷೋತ್ತಮನ ವೃತ್ತಕಮಂ ಬೆಸಗೊಳಲ್, ಒಡನಾ ಗಣಧರಾ

ಧೀಶ್ವರರ್ ' ಬೆಸಸಿದ ಕಥೆಯನ್ನು ಕಿವಿಯುಂಡ ಮದನಪತಾಕೆಯೆಂಬ ಖಚರಾಂಗನೆ ತನ್ನ ತಂಗಿ ಚಿತ್ರಲತೆಗೆ ವರ್ಣಿಸುತ್ತಾಳೆ. ಪುರುಷೋತ್ತಮ ವಾಸುದೇವನು ದೈತ್ಯ ಮಧುಕೈಟಭನನ್ನು ಸಂಹರಿಸುವುದಕ್ಕೆ ಜನ್ಮಾಂತರ ದ್ವೇಷಕಾರಣವೂ ಒಂದಿತ್ತೆಂದೂ, ಹಿಂದೆ ಭವಾಂತರದಲ್ಲಿ ವಾಸುದೇವನು ವಸುಷೇಣನಾಗಿದ್ದನೆಂದೂ ಮಧುಕೈಟಭನು ಚಂಡಶಾಸನನಾಗಿದ್ದನೆಂದೂ ಚಂಡಶಾಸನನು ಸ್ನೇಹಿತ ವಸುಷೇಣನ ಸತಿ ಸುನಂದೆಯನ್ನು ಕದ್ದೊಯ್ದು ಅವನ ದ್ವೇಷಕ್ಕೆ ಪಕ್ಕಾಗಿದ್ದನೆಂದೂ ಹೇಳುವ ಪ್ರಸಂಗ ಬರುತ್ತದೆ. ಪ್ರಾಸಂಗಿಕವಾಗಿ ಬಂದ ಆ ಜನ್ಮಾಂತರ ಸಂಗತಿಯೇ, ಜನ್ನನ ದೃಷ್ಟಿಯಲ್ಲಿದ್ದ ಆ ಕಥಾವಸ್ತುವಿನ ಸ್ವಾರಸ್ಯ ಮಹತ್ವಗಳಿಂದಲೂ ಅದರಲ್ಲಿ ಅಡಗಿದ್ದ ಸಾಧ್ಯತೆಗಳ ಸಿದ್ಧಿಯಿಂದಲೂ, ಒಂದು ದೊಡ್ಡ ಕಥೆಯಾಗಿ ಬೆಳೆದಿದೆ, ಒಳ್ಳೆಯ ಕಾವ್ಯವಾಗಿ ಪರಿಣಮಿಸಿದೆ. ' ಯಶೋಧರ ಚರಿತೆ 'ಯಲ್ಲಿ ಒಂದು ಬಗೆಯ ಪ್ರಣಯ ಸಮಸ್ಯೆಯನ್ನು ಚಿತ್ರಿಸಿದ ಜನ್ನನಿಗೆ ಇಲ್ಲಿ ಮತ್ತೊಂದು ಬಗೆಯದನ್ನು ಚಿತ್ರಿಸಲು ಎಡೆ ದೊರೆಯಿತು.

**ಕಥಾಸಾರಾಂಶ :** ಭಾರತವರ್ಷದ ತೆಂಕವಕ್ಕದಲ್ಲಿ ಭೋಗದ ಚಾಗದಾಗರವೆನಿಸಿ ಮೆರೆಯುವ ಸುರಮ್ಯಮಂಡಲದ ಅಧಿಪತಿಯಾದ ವಸುಷೇಣ ದೊರೆಗೆ ರಾಜಧಾನಿ ಪೌದನಪುರ. ಹಿಂದೆ ಭರತ ಚಕ್ರವರ್ತಿಯ ದರ್ಪಮುರಿದ ಅವನ ತಮ್ಮ ಬಾಹುಬಲಿ ದೇವನ ಆಳಿಕೆಗೊಂಡ ಹಿರಿಮೆ ಆ ಪೌದನಕ್ಕುಂಟು. ಊರ್ವಶಿ ರಂಭೆ ಮೇನಕೆ ತಿಲೋತ್ತಮೆ ಎಂಬವರ ಹಾವಭಾವವನ್ನೂ ಗೆಲ್ಲುವುದಕ್ಕೆ ಸಾಕೊಬ್ಬರೇ ಎನಿಸುವ ರಾಣಿಯವಾಸದ ಐನೂರು ಚೆಲುವೆಯರಲ್ಲಿ ಹಿರಿಯಳಾದ ಸುನಂದೆ ವಸುಷೇಣನ ಪಟ್ಟದರಸಿ, ಮನದರಸಿ. ಸುನಂದೆಯ ಮುಖಬಿಂಬವೇ ಮಣಿದರ್ಪಣವಾಗಿ, ಅಚ್ಚುಮೆಚ್ಚಿನ ಆ ಮಹಾದೇವಿಯಲ್ಲಿಯೇ ಆ ಭೂಕಾಂತನ ಕಣ್ಣುಗಳಿಗೆ ನಲಿವು. ದೊರೆ ಒಂದು ದಿನ ವೈಹಾಳಿಯಲ್ಲಿ ಗಜಾರೋಹಣ ಕ್ರೀಡೆಯಲ್ಲಿರುತ್ತ, ಸಹಪಾಂಸುಕ್ರೀಡಾನುಬಂಧ ಸಂಗತ ಬಂಧುವೂ ಮಕರಗ್ರಾಹಪುರವರಾಧೀಶ್ವರನೂ ಆದ 'ಸಹೋದರ ' ಚಂಡಶಾಸನ ದೇವನು ಹಲವು ದಿವಸ ಅಗಲಿದ್ದು ತನ್ನನ್ನು ನೆನೆದು ನೋಡ ಬಯಸಿ ಬರುತ್ತಿರುವನೆಂದು ಕೇಳಿ ವಿಸ್ತಾರಿತಲೋಚನನಾಗಿ ಮಹೋ

ತ್ಸಾಹದಿಂದ ಬರಮಾಡಿಕೊಂಡು ತನ್ನ ಪಟ್ಟದಾನೆಯ ಮೇಲೆ ಆ ಮನೋ ಮಿತ್ರನನ್ನು ಕೂರಿಸಿ ಮೆರವಣಿಗೆಯಿಂದ ಅರಮನೆಗೆ ಕರೆತರುತ್ತಾನೆ. ಮಿತ್ರನ ಮನೋಲ್ಲಾಸಕ್ಕಾಗಿ ಕಾವ್ಯಗೋಷ್ಠಿಗಳು, ಗೀತಾವಾದ್ಯಗಳು, ನಾಟ್ಯನೃತ್ಯಗಳು, ಕೇಳಿಕೆಗಳು, ಜೆಟ್ಟಿಕಾಳಗಗಳು, ವೇಷವಿಶೇಷಗಳು, ವಾಹ ವಿಳಾಸ ಕಂದುಕ ಕೇಳಿಗಳು—ಇವೇ ಮೊದಲಾದ ಚಿತ್ರ ವಿಚಿತ್ರ ಕೌತುಕಗಳನ್ನು ವಸುಷೇಣ ಭೂಪತಿ ನಡಸುತ್ತಾನೆ. ಹೀಗೆ, ನಿರ್ವಿ ಕಲ್ಪವೂ ನಿರಂತರಿತವೂ ಆದ ಸೌಹಾರ್ದದಲ್ಲಿರುವಾಗ ಏಕಸದನ, ಸಹ ಪಂಕ್ತಿಭೋಜನ, ಸಹ ವಿಳಾಸಕ್ರೀಡೆಗಳ ಸಮಯಗಳಲ್ಲಿ ಸುಳಿದು, ಕಾಮ ದೇವನ ಕರವಾಳಂತೆ ಕಣ್ಣಲ್ಲಿ ಹೊಳೆದು, ಸ್ಮರನ ಸಂಮೋಹನ ಶಕ್ತಿ ಯಂತೆ ಭಾವಕರ ಬಗೆಯ ಬಯ್ಕೆಯನ್ನು ಸೂರೆಗೊಂಡು ಮೆರೆಯುವ ವಸುಷೇಣನಂಗನೆ ಸುನಂದಾದೇವಿಯ ಮೇಲೆ ದುರಾತ್ಮನಾದ ಚಂಡ ಶಾಸನನ ಕಣ್ಮಲರು ಕವಿದು ಕವ್ವರೆಗೊಂಡು, ಒಳಸೋರಿ ಮನ ಸೋಲುತ್ತದೆ. ಒಂದು ದಿನ ಕೆಳೆಯನ ಸಹಪಂಕ್ತಿ ಭೋಜನದಲ್ಲಿ ಸುನಂದೆ ತಾನೇ ಬಡಿಸುತ್ತಾಳೆ. ಅಂದಿನ ಆ ಎಳೆಯಳ ಸೊಬಗು ವಿಳಾಸ ಗಳಿಂದ ಪೂರ್ಣಭ್ರಮೆಗೊಂಡ ಆ ಕಾಮುಕನು ಮದನಜ್ವರದಿಂದ ಒಳ ಗೊಳಗೇ ಬೇಯುವ ಹೃದಯವನ್ನು ಹದಪಡಿಸಲಾರದೆ, ತನ್ನ ಕೆಳೆಯ ಸುದರ್ಶನನಲ್ಲಿ ಮನಬಿಚ್ಚಿ, ಈ ಕಡುನಂಟನ ಸತಿಯ ರೂಪು ತನ್ನನ್ನು ಸೋಲಿಸಿತೆಂದು ನಾಚಿಕೆಯಿಲ್ಲದೆ ಹೇಳಿಕೊಂಡು, ಬಾಳುವ ಉಪಾಯ ವನ್ನು ಹೇಳಬೇಕಾಗಿ ಕೇಳಿಕೊಳ್ಳುತ್ತಾನೆ. ಆ ತಳೋದರಿಯನ್ನು ಕೂಡುವ ಪುಣ್ಯ ತನಗೇಕೆ ಸಲ್ಲದು ? ಗಂಡನಿದ್ದರೇನು ? ಎನ್ನುವಷ್ಟರ ದೂರ ಸಾಹಸಮಾಡುತ್ತಾನೆ. ಬಗೆಯ ಬೇಟವನ್ನು ಬಯಲಿಗಿಕ್ಕಿದ ತನ್ನ ದೊರೆಗೆ ಸುದರ್ಶನನು ಬುದ್ಧಿಹೇಳುವುದು ಬಿಟ್ಟು ಹರಿಯುವ ಮನಕ್ಕೆ ಹಗ್ಗವಿಲ್ಲ, ನೋಡುವ ಕಣ್ಣಿಗೆ ಎಡೆಗಟ್ಟಿಲ್ಲ ಎಂದು ಹೇಳಿ ಆ ಹುಚ್ಚನ್ನು ಇನ್ನೂ ಕೆರಳಿಸುತ್ತಾನೆ. ಇನ್ನೂ ಮುಂದೆ ಹೋಗಿ, ಸುನಂದೆಗೂ ಚಂಡಶಾಸನನಲ್ಲಿ ಅಳಿಪುಂಟಾಗಿದೆಯೆಂದೂ ' ನಿಮ್ಮರಸರು ಏನು ಕಾರಣ ಬಂದರು ? ಇಲ್ಲಿ ಕಾರ್ಯಾಂತರವೇನು ? ಪ್ರಯಾಣದಿನ ವೆಂದು ? ' ಇವೇ ಮೊದಲಾಗಿ ನಯದಿಂದ ಹೆತ್ತ ತಂದೆಯ ಮಿತ್ರನಿಗೂ ಒಡವುಟ್ಟಿದಣ್ಣನ ಕೆಳೆಯನಿಗೂ ಆಡುವಂತೆ ತನ್ನಲ್ಲಿ ಆಡಿದಳೆಂದೂ

ನಂಬುವಂತೆ ಗಳಹುತ್ತಾನೆ. ದೊರೆ ಅದನ್ನು ನಂಬದೆ ಇನಿಯನಿರುವಾಗ ತನ್ನೊಡನೆ ಆಸೆಮಾಡಳೆಂದು ವಾದಿಸಲು, ವಸುಷೇಣನೂ ಚಂಡ ಶಾಸನನೂ ಆರೋಗಿಸಿ ಏಕಮರಾಳತೂಲತಲ್ಪಾಸನದಲ್ಲಿ ಪರಸ್ಪರ ಸಂಭಾಷಣೆಯಲ್ಲಿದ್ದಾಗ ಆ ಕಾಮಿನಿ ಸುನಂದೆ ಗಂಡನ ನೆವದಿಂದ ಚಂಡ ಶಾಸನನನ್ನು ಯಾರೂ ಕಾಣದಂತೆ ನೋಡುತ್ತಿದ್ದದ್ದನ್ನು ತಾನು ಕಂಡಂತೆ ಸುಳ್ಳುಹೇಳಿ, ಮನದ ಪಿಶಾಚಕ್ಕೆ ವಚನ ರಚನಾ ಧೂಪವನ್ನು ತೋರಿ ವಿರಹವಿಕಾರವನ್ನು ಕೆರಳಿಸಿ ಆಕೆಯನ್ನು ಕೂಡುವ ಉಪಾಯವನ್ನು ಮಾಡುವುದಾಗಿ ಆ ಧೂರ್ತನು ದೊರೆಯನ್ನು ಗುಸಿ ನಂಬಿಸುತ್ತಾನೆ.

ಈ ನಡುವೆ, ಒಂದು ದಿನ ದೊರೆಗಳಿಬ್ಬರೂ ಬೇಟೆಗೆ ಹೊರಡುತ್ತಾರೆ. ಅಲ್ಲಿ, ಕಣೆಗಟ್ಟಿನಿಂದ ಎರಲೆಮರಿಯೊಂದರ ಅವಸ್ಥೆಯನ್ನು ಚಂಡಶಾಸನನು ನೋಡಿ, ಸುನಂದೆಯೇ ದೀವವಾಗಿ ಮನ್ಮಥನೇ ಬೇಟೆಗಾರನಾಗಿ ತಾನೇ ಹರಿಣನಾಗಿ ಪಡುತ್ತಿರುವ ವಿರಹಾವಸ್ಥೆಯನ್ನು ನೆನಸಿಕೊಳ್ಳುತ್ತಾನೆ. ಬೇಟೆಯ ಸೋಹಿನಲ್ಲಿ ಕೆಳೆಯರಿಬ್ಬರೂ ಅಗಲಿ ಬೇರೆಯಾಗುತ್ತಾರೆ. ಇತ್ತ, ಅರಸನು ಹೇಳಿಕಳಿಸಿದಂತೆ ಬೋನವನ್ನು ತೆಗಸಿಕೊಂಡು ಕೆಲವು ಗೆಳತಿಯರೊಡಗೂಡಿ ಸುನಂದೆ ಪಲ್ಲಕ್ಕಿಯಲ್ಲಿ ಬರುತ್ತಿರುತ್ತಾಳೆ. ಚಂಡಶಾಸನನು ಹೊಂಚುತ್ತಿದ್ದ ಹೊತ್ತು ಸಿಕ್ಕಿತು. ಆ ಹೆಣ್ಣನ್ನು ನೋಡಿದೊಡನೆ ಅವನ ಮನಸ್ಸು ಸಂಗಕ್ಕೆ ದಾಳಿಯಿಟ್ಟು, ಕರುಳ ಕತ್ತರಿಯೂ ನಂಟರ ಮಾರಿಯೂ ಆದ ಆ ಖಳನು ಮೇಲೆ ವಾಯ್ದು, ಭರದಿಂದ ಅವಳನ್ನು ರಥದಲ್ಲಿ ತೆಗೆದಿಟ್ಟುಕೊಂಡು ಮನೋವೇಗದಿಂದ ಹೋಗುತ್ತಾನೆ. ಎರಗಿದೊಡನೆ ಹಾವು ಹಿಡಿದಂತಾಗಿ, ಸಿಡಿಲು ಬಡಿದಂತಾಗಿ, ಹೆಣ್ಣು ಮೈಮರೆಯುತ್ತಾಳೆ. ಮೆಲ್ಲ ಮೆಲ್ಲನೆ ಮೂರ್ಛೆ ತಿಳಿದು ವಿಶ್ವಾಸಘಾತುಕನಾದ ಚಂಡಶಾಸನನು ತನ್ನನ್ನು ಹಿಡಿದದ್ದನ್ನು ಅರಿದು ಹುಯಲಿಡುತ್ತಾಳೆ, ಬಸಿರು ಬಾರೇಳುವಂತೆ ಮೋದುತ್ತಾಳೆ, ಮೂರುಲೋಕಕ್ಕೂ ಮೊರೆಯಿಡುತ್ತಾಳೆ. ಕೊನೆಗೆ 'ಹಾಳು ಮನೆಯಲ್ಲಿ ನಾಯಿ ಘೃತಭಾಂಡವನ್ನು ತೆಗೆಯುವಂತೆ ಗಂಡನ ಬೆನ್ನ ಹಿಂದೆ ಮಡದಿಯನ್ನು ಕದ್ದೊಯ್ಯುವುದು ಆಳ ಪಾಳಿಯೆ? ದೂರ ಸಾರು' ಎಂದು ಚಂಡ ಶಾಸನ ಬೂತಕ್ಕೆ ಮೊರೆಯಿಡುತ್ತಾಳೆ. ಸುರಮ್ಯ ಮಂಡಲದ ಗಡಿಕಾಪಿನವನಾದ ಕಡುಗಲಿ ಸಾಮಂತ ಸಿಂಹಚೂಡನು ಆ ಗೋಳುಕರೆ ಕೇಳಿ,

ನೆರವುನೋಡದೆ ಕಯ್ಯ ಕತ್ತಿ ಗುರಾಣಿಯನ್ನೆ ನೆಮ್ಮಿ ಒಡನೆಯೆ ಇದಿರಾಗುತ್ತಾನೆ. 'ಹೇರಾನೆಯ ಕೈಹಿಡಿದ ಕಬ್ಬನ್ನು ಕೋತಿ ಕಸಿಯಬಲ್ಲದೆ? ಸುಮ್ಮನೆ ಹೋಗು' ಎಂದು ಹೇಳಿ ಆ ಚಂಡಾಲ ಚಂಡಶಾಸನನು ಕಾಳಗ ಕೊಡುತ್ತಾನೆ. ಸುತ್ತಲ ನೋಟಕರು ಅವರ ಸೋಲು ಗೆಲವು ಅರಸನ ಪುಣ್ಯ ಎಂದುಕೊಳ್ಳುತ್ತಾರೆ. ಸುನಂದೆ ಮೈಕೊರಗಿ ಮನದಲ್ಲಿಯೆ 'ತಲೆಗಾಯಿ ಈ ಭಟನನ್ನು, ಹೊಡೆದಿಕ್ಕು ಈ ದ್ರೋಹನನ್ನು, ಸೆರೆಯಿಂದ ತಪ್ಪಿದಂದು ನಿಮಗೆ ನಾನೆ ಬಲಿಕೊಡುತ್ತೇನೆ' ಎಂದು ದೇವದೇವತೆಯರಿಗೆಲ್ಲ ಮೊರೆಯಿಡುತ್ತಿರುವಲ್ಲಿ, ಚಂಡಶಾಸನನು ಬಾಳಿಗೆ ಬಲಿಗೊಂಡು ಸಿಂಹಚೂಡನನ್ನು ತಲೆಕಡಿದುರುಳಿಸಿ, ಸುನಂದೆಯನ್ನು ಮುಹೂರ್ತಮಾತ್ರದಲ್ಲಿ ತನ್ನ ದುರ್ಗಕ್ಕೆ ಕೊಂಡೊಯ್ದು ಸೆರೆಯಿಡುತ್ತಾನೆ.

ಇತ್ತ, ವಸುಷೇಣನು ಬೇಟೆಯಿಂದ ಬಂದು 'ಬಂದಳೆ ದೇವಿ? ಪಂಕ್ತಿಗೆಡೆಮಾಡಿಸಿದಳೆ? ಚಂಡಶಾಸನನೆಲ್ಲಿ?' ಎಂದು ಮಂದಿ ಮಹತ್ತರರನ್ನು ಬೆಸಗೊಳ್ಳುತ್ತಿರುವಲ್ಲಿ ಶೋಕರಸವೆ ರೂಪುಗೊಂಡಂತೆ ಬಂದ ಸುನಂದೆಯ ಸಖೀಜನರಿಂದ ಅವಳು ಸೆರೆಹೋದ ಸುದ್ದಿಯನ್ನು ಕೇಳುತ್ತಾನೆ. ಅದನ್ನು ಕೇಳಿದೊಡನೆ ಕೋಪಾವೇಶ ವಿಯೋಗೋದ್ರೇಕಗಳಿಂದ ಮೂರ್ಛೆಹೋಗಿ, ಶೈತ್ಯೋಪಚಾರದಿಂದ ಮೆಲ್ಲನೆ ಎಚ್ಚತ್ತು, ಹೆಂಡತಿ ಇಲ್ಲದೆ ಹೊಳಲನ್ನು ಹೊಗಲಾರದೆ, ಮೊದಲು ತನ್ನ ಕತ್ತಿಯನ್ನೂಡಿ ಬಳಿಕ ತಾನುಣ್ಣುವುದಾಗಿ ಪ್ರತಿಜ್ಞೆ ಮಾಡಿ, ಚಂಡಶಾಸನನಮೇಲೆ ದಂಡೆತ್ತಿ ನಡೆಯುತ್ತಾನೆ. ಇತ್ತ, ತಮ್ಮ ಅರಸನು ಹೆರಹೆಣ್ಣನ್ನು ತಂದನೊ ಹೆಮ್ಮಾರಿಯನ್ನು ತಂದನೊ ಎಂದು ಪಟ್ಟಣಿಗರು ಕುದಿದು ತಳ್ಳಂಕಗೊಂಡಿದ್ದಾರೆ. ವಸುಷೇಣನ ಸೇನೆ ಬಂದು ಲಗ್ಗೆಹತ್ತಿ ಎರಡು ಕಡೆಗೂ ಹಗಲು ಹೋರಾಟ ನಡೆಯುತ್ತದೆ. ಇರುಳು ಬಿಡುವುಗೊಂಡಾಗ, ಚಂಡಶಾಸನನು ವೀರ ಶೃಂಗಾರ ಮಾಡಿಕೊಂಡು ಸುನಂದೆ ಸೆರೆಯಿದ್ದ ಮಣಿಮಾಡಕ್ಕೆ ಮರಳಿ, ಕೊರಗಿ ಕಣ್ಣಿಗೆಸೆದಿದ್ದ ಆ ಸತಿಯನ್ನು ಕಂಡು 'ನಯದಿಂದ ನಿನ್ನಲ್ಲಿ ಒಪ್ಪಿಗೆ ಪಡೆಯಲಿಲ್ಲ; ಔತ್ಸುಕ್ಯದಿಂದ ತಂದ ಸಲುಗೆಯನ್ನು ಮನ್ನಿಸು; ಕಾಮಿ ಕಣ್ಣರಿವನಲ್ಲ; ನಾನು ಗಂಡು ತೊತ್ತು ನಿನಗೆ; ನನ್ನ ರಾಣಿವಾಸವೆಲ್ಲ ನಿನಗೆ ಪರಿಚಾರಕರು; ಈ ಸಾಮ್ರಾಜ್ಯಲಕ್ಷ್ಮೀ ಸುಖೋದಯದಲ್ಲಿ ನೀನು ನನಗೆ ವಲ್ಲಭೆಯಾಗಿರು' ಎಂದು ಪರಿಪರಿಯಾಗಿ

ಬೇಡುತ್ತಾನೆ. ನುಡಿದೊಡನೆ, ಘೃತಾಹುತಿಯ ಶಿಖಿಜ್ವಾಲೆಯಂತೆ ಬಾಲೆ ಕನಲಿ ಒನಲಿ, ಸೈರಿಸಲಾರದೆ 'ಸೆರೆಸಿಕ್ಕಿದ ದೇಸಿತಿಯನ್ನು, ಭೋಗೋಪ ಭೋಗಗಳನ್ನು ಮರೆದೂ ಕಾಣದ ಅನಾಥೆಯನ್ನು ನುಡಿಸುವಂತೆ, ಅಯ್ಯೋ ಪಾಣ್ಬ, ನಿನ್ನ ಸಂಪತ್ತಿಯನ್ನು ಜರುಚುತ್ತಿರುವೆ. ನಾಳೆ ನಿನ್ನ ತಲೆ ಸೆರೆಮನೆಯ ಬಾಗಿಲಲ್ಲಿ ಮೆರೆಯುವಾಗ ಇದನ್ನು ನುಡಿ' ಎಂದು ಬೈದುಬಿಡುತ್ತಾಳೆ. ಆದರೂ ಚಂಡಶಾಸನನು ಏವೈಸಿ ಮುಳಿಯದೆ, ಲಜ್ಜೆಯಿಂದ ಚಳಿಯದೆ 'ನಾನು ಕೆಳೆಗೆಟ್ಟು ಹಗೆಯಾದೆನಾಗಿ, ವಸುಷೇಣ ಹೋದನೆಂದೆಣಿಸು. ನಮೆಯದಿರು, ಆಗ್ರಹಬೇಡ. ಪಾತಿವ್ರತ್ಯದಿಂದ ಬತ್ತಿದ ಬಾಳಾಗದೆ ಸೌಖ್ಯಶ್ರೀವಿಲಾಸಗಳನ್ನು ಆಳಿಕೊಂಡಿರು' ಎಂದು ಮತ್ತೆ ಹೇಳಿದ್ದಕ್ಕೆ, ಅವನಿಗೆ ಮಾತಿಗೆ ಮಾತು ಉತ್ತರಕೊಡುವುದೇಕೆಂದು ಸುನಂದೆ 'ವಸುಷೇಣನೇ ಕೈವಿಡಿದಸುವಿಗೂ ಒಡೆಯ, ಚಿತಾಗ್ನಿಗೂ ಒಡೆಯ' ಎಂದು ಖಂಡಿತವಾಗಿ ಹೇಳಿಬಿಡುತ್ತಾಳೆ. ಆ ಕುಟಿಲನು ಆಕೆಯಲ್ಲಿ ತೆರಪುಗಾಣದೆ 'ನಾನು ನಿನ್ನನ್ನು ಬಿಡುವುದಿಲ್ಲ. ನೀನು ಸತ್ತರೆ ನಾನು ಸಾಯುವೆನು, ಉಳಿಯುವನಲ್ಲ. ನನ್ನಲ್ಲಿ ನಿನಗೆ ಒಲವಿರಲಿ ಇಲ್ಲದಿರಲಿ. ನನಗೇನೊ ನಿನ್ನಲ್ಲಿ ಎರಡಿಲ್ಲದ ಒಲವಿದೆ. ಆದ್ದರಿಂದ, ಬೇರೆ ಯೂರಿನ ಬೇಟಕ್ಕೆ ಬಾಯಿಬಿಡಲಾರೆ. ಸೆರೆಯಾದರೂ ಸರಿ, ನನ್ನ ಮನೆ ಯಲ್ಲಿ ನೀನಿರುವೆಯೆಂಬ ಆಸೆಯೇ ಸಾಕು ನನಗೆ. ಬಳಿಕ ರಣದಿಂದ ಆಗುವುದಾಗಲಿ' ಎಂದು ತನ್ನ ಅಳಿಪಿನ ಆಳವನ್ನು ತಿಳಿಸುವ ತೀರ್ಮಾನ ವನ್ನು ಹೇಳಿಬಿಟ್ಟು ಹೋಗುತ್ತಾನೆ.

ನೇಸರು ಮೂಡಿ ಬೆಳಗಾದರೂ ವಿರಹತಾಪ ತೀರದೆ 'ಪತಿಯಿರು ವಾಗ ಆಸೆ ಹಿಂಗದು, ಈ ಸತಿ ನನ್ನನ್ನು ಒಲ್ಲಳು ; ಇವಳನ್ನು ಮರುಳು ಗೊಳಿಸುತ್ತೇನೆ' ಎಂದು ಬಗೆದು, ಆ ಇಂದ್ರಜಾಲಿಗನು ವಸುಷೇಣನ ಸೇನೆ ಸೋತೋಡಿತೆಂದೂ ಪಗೆಯ ಪಂದಲೆ ಕೈಸೇರಿತ್ತೆಂದೂ ಸುಳ್ಳುಸುದ್ದಿ ಹುಟ್ಟಿಸಿ, ತಾನೇ ಸುನಂದೆಯ ಸೆರೆಮನೆಗೆ ಬಂದು 'ತೆಗೆದುಕೊ ನಿನ್ನಿನಿ ಯನ ಬಸಿವ ತಲೆಯನ್ನು' ಎಂದು ವಸುಷೇಣನ ಮಾಯದ ಶಿರವನ್ನು ಈಡಾಡುತ್ತಾನೆ. ನೋಡಿದೊಡನೆಯೆ ಅವಳ ಅಲರುಗಣ್ಣು ಮುಚ್ಚಿ ಹರಣ ಹೋಗಿಬಿಡುತ್ತದೆ. ಅದನ್ನು ಕಂಡು ಹತಾಶನಾದ ಆ ಖಳನು ಬೆದರಿ ಬೆರಗಾಗಿ, ಉಪಾಯದಿಂದ ಕೂಡುವೆನೆಂದು ಮಾಡಿದ ಮಾಟ

ಮರಣದಲ್ಲಿ ಮುಗಿಯಿತೆಂದು ಎದೆಬೆಂದು, ಆ ಹೆಣ್ಣಿನ ಹೆಣವನ್ನೇ ತಕ್ಕೈಸಿ ಮೈಸೋಂಕಿನಿಂದ ಮೂರ್ಛೆಹೋಗುತ್ತಾನೆ. ಉಪಚಾರದಿಂದ ಮೂರ್ಛೆ ತಿಳಿದಮೇಲೆ ಬಾಳಬಯಸದೆ, ಮುಂದಿನ ಜನ್ಮದಲ್ಲಿಯಾದರೂ ಅವಳನ್ನು ಕೂಡುವುದಾಗಿ ಸುನಂದೆಯೊಡನೆ ಸಹಗಮನ ಮಾಡಲು ನಿಶ್ಚಯಿಸಿ, ಯಾರು ತಡೆದರೂ ತಡೆಯದೆ, ಸುನಂದಾದೇವಿಯ ಶವದೊಡನೆ ಏಕಾಸನದಲ್ಲಿ ಕುಳಿತು ಚಿತೆಗೆ ನಡೆಯುತ್ತಾನೆ. ಅವನ ರಾಣಿವಾಸದವರು 'ಮಲ್ಲಿಗೆ ಮಾವನ್ನು ಪ್ರೀತಿಸಿದರೆ, ಮಾವು ವಸಂತಶ್ರೀಯನ್ನು ಪ್ರೀತಿಸಿತು' ಎಂದುಕೊಂಡರೂ, ರಾಜನೇನೇ ಆಗಲಿ ತಾವು ಮೈನೆಳಲಿನಂತಿರಬೇಕೆಂದು ಅವನೊಡನೆ ಸಹಗಮನ ಮಾಡುತ್ತಾರೆ.

ಇತ್ತ ವಸುಷೇಣನು ದುರ್ಗಕ್ಕೆ ಲಗ್ಗೆಹತ್ತುವಲ್ಲಿ ಹೆಂಗಸರ ಗೋಳು ದನಿ ಕೇಳಿ ವಿಷಯವೇನೆಂದು ವಿಚಾರಿಸಲು, ಸುನಂದೆಯು ಸಾವಿನ ಸುದ್ದಿ ತಿಳಿಯುತ್ತದೆ. ತಾನು ಅಳಿದನೆಂದು ಹುಸಿದರೆ ಒಡನೆ ಅಳಿದಳು ಹೆಣ್ಣು; ಅವಳು ಸತ್ತು ತಾನುಳಿದರೆ ಕೃತಘ್ನನಲ್ಲವೇ ಎಂದೆಣಿಸುತ್ತಾನೆ. ಇನಿಯಳಿದ ಬಳಿಕ ತನ್ನಿರವು ತಾರಾಮಂಡಲ ಹೋದ್ದ ಲೋಚನದಂತೆ, ಅಸು ಹೋದ ಬಾಳ್ವೆಣನಂತೆ ಆಯಿತೆಂದುಕೊಂಡು, ಜಯವಾಗಲಿ ರಾಜ್ಯವಾಗಲಿ ಬೇಡದೆ ಹೋಗಿ, ಹಿಂದಿರುಗಿ, ಮಗನಿಗೆ ಪಟ್ಟಕಟ್ಟಿ ವಸುಷೇಣ ದೊರೆ ತೊರೆದು ತಪಸ್ಸಿಗೆ ತೆರಳುತ್ತಾನೆ. ಅವನೊಡನೆ ಅವನ ಹಲವು ಕೆಳೆಯರಸರೂ ನಡೆಯುತ್ತಾರೆ. ವಸುಷೇಣನು ತಪಮುಡಿಪಿ, ಆ ಪುಣ್ಯ ಫಲದಿಂದ ಸಹಸ್ರಾರಕಲ್ಪದಲ್ಲಿ ಸುರನಾಗಿ ಹುಟ್ಟಿ ದೇವಭೋಗ ಅನುಭವಿಸಿ, ಕಡೆಗೆ ಅದಕ್ಕೂ ಬೇಸತ್ತು ಅಲ್ಲಿಯೂ ಸಂಸಾರ ಅಸಾರವೆಂದು ಅರಿತು ಸಂನ್ಯಸನ ವ್ರತದಿಂದ ಬಾಳನ್ನು ಮುಡಿಪಿ, ಭೂಲೋಕದಲ್ಲಿ ಸೋಮಪ್ರಭರಾಜನಿಗೂ ರಾಣಿ ಸೀತಾದೇವಿಗೂ ಪುರುಷೋತ್ತಮ ವಾಸುದೇವನಾಗಿ ಹುಟ್ಟಿ, ಅದೇ ಕಾಲದಲ್ಲಿ ಮಧುಕೈಟಭ ದೈತ್ಯನಾಗಿ ಹುಟ್ಟಿಬಂದ ಚಂಡಶಾಸನನನ್ನು ಸಂಹರಿಸುತ್ತಾನೆ.[1]

---

1 ಗ್ರೀಕ್ ಪುರಾಣದಲ್ಲಿ ಟ್ರಾಯ್ ಯುವರಾಜನಾದ ಪ್ಯಾರಿಸ್ ತನ್ನ ಸ್ನೇಹಿತ ಸ್ಪಾರ್ಟಾ ರಾಜನಾದ ಮೆನೆಲೆಯುಸ್‌ನ ಅರಮನೆಗೆ ಅತಿಥಿಯಾಗಿ ಬಂದುಳಿದುಕೊಂಡು, ಅಲ್ಲಿ ಮಿತ್ರನ ಮಡದಿಯ ಮೇಲೆ ಕಣ್ಣುಹಾಕಿ ಎತ್ತಿಕೊಂಡು ಹೋಗುವುದನ್ನು ಈ ಕಥೆಯೊಡನೆ ಹೋಲಿಸಬಹುದು. ಆದರೆ ಅಲ್ಲಿ ಮನೆಮಡದಿಯೂ ಬಂದವನಿಗೆ ಮನ

ಈ ಕಥೆಯಲ್ಲಿ ಮುಖ್ಯವಾಗಿ ನೋಡಬೇಕಾದ್ದು ಚಂಡಶಾಸನನ ಶೀಲ, ನಡತೆ ; ಅವನ ಮೋಹ, ಕಾಮ. ಆ ನೋಟಕ್ಕೆ ವಸುಷೇಣ ಸುನಂದೆಯರಿಬ್ಬರೂ ಹಿನ್ನೆಲೆ. ವಸುಷೇಣನ ಎರಡಿಲ್ಲದ ಕೆಳೆಯೂ ಸುನಂದೆಯ ಪರಿಶುದ್ಧ ಪಾತಿವ್ರತ್ಯವೂ ಚಂಡಶಾಸನನ ಪಾಪಕೃತ್ಯದ ಘೋರವನ್ನೂ ದ್ರೋಹವನ್ನೂ ಮಾತ್ರ ಮುನ್ನೋಟಕ್ಕೆ ತಂದೊಡ್ಡುತ್ತವೆ. ಚಂಡಶಾಸನನ ವಿಷಯದಲ್ಲಿ ಮೇಲಿಂದಮೇಲೆ ಕುಟಿಲ, ಖಳ, ಬೂತು, ಚಂಡಾಲ, ದುರಾತ್ಮ ಮೊದಲಾದ ಕಟುವಿಶೇಷಣಗಳನ್ನು ಕವಿ ಪ್ರಯೋಗಿಸುತ್ತಾನೆ. ಈ ಮಾತುಗಳನ್ನೇನೂ ನಾವು ಲಾಘುವವಾಗಿ ಎಣಿಸದೆ, ಚಂಡಶಾಸನನ ಒಳಗನ್ನು ಹೊಕ್ಕು ಅವನ ವ್ಯಾಪಾರವೆಲ್ಲವನ್ನೂ ಸಹಾನುಭೂತಿಯಿಂದ ಪರಿಶೀಲಿಸಿ ಅರ್ಥ ಮಾಡಿಕೊಳ್ಳುವುದು ಅಷ್ಟೇನೂ ಕಷ್ಟವಲ್ಲ ಸುನಂದೆಯಲ್ಲಿ ಮೊದಲೆ ಮೋಹಗೊಂಡು, ಮಿತ್ರಸಂದರ್ಶನದ ಮುಸುಕುಹಾಕಿಕೊಂಡು, ಮಡದಿಯನ್ನು ಕದ್ದೊಯ್ಯುವ ಮುನ್ನೆಣಿಕೆಯಿಂದ ಬಂದ ಘಾತುಕನೇನೂ ಅಲ್ಲ ಚಂಡಶಾಸನ. ಗೂಢೋದ್ದೇಶವೇನೂ ಇಲ್ಲದೆ, ಕಿರಿಯಂದಿನ ಕೆಳೆಯನ್ನು ನೆನಸಿಕೊಂಡು ಸ್ನೇಹಿತನ ಸಂದರ್ಶನದ ಸದುದ್ದೇಶದಿಂದಲೇ ಬರುತ್ತಾನೆ. ಬಂದಮೇಲೆ ಸಂದರ್ಭ ಸನ್ನಿವೇಶಗಳು ಮೇಲುಕಯ್ಯಾಗಿಬಿಡುತ್ತವೆ. ಸುಶಿಕ್ಷಿತ ಆತ್ಮಬಲವಿಲ್ಲದ್ದರಿಂದ ವಿಧಿಯೊಡ್ಡಿದ ಬಲೆಗೆ ಬೀಳುತ್ತಾನೆ, ಬೇಟದಲ್ಲಿ ಬೇಯುತ್ತಾನೆ ; ಕೊನೆಗೆ ಮರಣದಲ್ಲಿ ಮುಗಿಸುತ್ತಾನೆ. ದುರ್ದಮ್ಯ ಮೋಹಾವೇಶದ ಸುಳಿಯಲ್ಲಿ ಸೆರೆಸಿಕ್ಕಿದ ಮನಸ್ಸು ತನ್ನ ಮುಂದನ್ನು ಕಾಣಲಾರದೆ ಹೋಗುತ್ತದೆ, ಮೇಗನ್ನು ಆರಯ್ಯಲಾರದೆ ಹೋಗುತ್ತದೆ; ಪವಿತ್ರಮೈತ್ರಿಗೂ ಅತಿಥಿಧರ್ಮಕ್ಕೂ ಮಾಡಲಿರುವ ಘೋರದ್ರೋಹವನ್ನು ಕೂಡ ಕೊಂಚವೂ ಎಣಿಸಲಾರದೆ ಹೋಗುತ್ತದೆ. ದ್ರೋಹದ ದಾರುಣತೆಯನ್ನು ಹೆಚ್ಚಿಸುವುದಕ್ಕಾಗಿಯೋ ಎಂಬಂತೆ ವಸುಷೇಣನು

---

ಸೋಲುತ್ತಾಳೆ. ರಾಣಿ ಹೆಲೆನ' ಕೂಡಿ ಬಾಳಿದ ಗಂಡನನ್ನೂ ಕಟ್ಟಿ ಬೆಳಸಿದ ಮನೆಯನ್ನೂ ತೊರೆದು, ಬಂದವನ ಬೇಟಕ್ಕೆ ಬಲಿಯಾಗಿ ಪ್ಯಾರಿಸಿನೊಡನೆ ಓಡಿಹೋಗುತ್ತಾಳೆ.

ಒಂಟಿ ಹೆಣ್ಣನ್ನು ದಾರಿಕಟ್ಟಿ ಎತ್ತಿಕೊಂಡು ಹೋಗುವುದು ; ತಡೆಯಬಂದ ಸಾಮಂತ ಸಿಂಹಚೂಡನು ಸೆಣಸಿ ಸಾಯುವುದು ; ವಸುಷೇಣನ ಮಾಟದ ತಲೆಯನ್ನು ಸುನಂದೆಗೆ ತಂದು ತೋರಿಸುವುದು—ಇವೇ ಮೊದಲಾದುವು ರಾಮಾಯಣದ ಕಥೆಯನ್ನು ನೆನಪಿಗೆ ತರುತ್ತವೆ.

ಮಹೋತ್ಸಾಹದಿಂದ ತನ್ನ ಬಾಲ್ಯಸ್ನೇಹಿತನಾದ ಚಂಡಶಾಸನನಿಗೆ ಹೃತ್ಪೂರ್ವಕವಾಗಿ ಮಾಡಿದ ಆದರಾತಿಥ್ಯಗಳು ಅಂಶಅಂಶವೂ ಬಹು ವಿವರವಾಗಿ ವರ್ಣನೆಯಾಗಿವೆ. ವಸುಷೇಣನು ಚಂಡಶಾಸನನನ್ನು 'ಸಹೋದರ'ನಂತೆ ಬರಮಾಡಿಕೊಳ್ಳುತ್ತಾನೆ. ಆದರೆ ತಾನೆ ಏನು ? ಕಾಮೋದ್ರಿಕ್ತ ಮನಃಕಷಾಯದಿಂದ ಕಲುಷಿತವಾದ ಬುದ್ಧಿ ಯಾವುದನ್ನೂ ಲೆಕ್ಕಿಸದು, ಯಾವುದನ್ನೂ ತಿಳಿಯಲಾರದು. ಚಂಡಶಾಸನನು ಆಗಲೇ ಪಟ್ಟದರಸಿ ಮನೆದರಸಿಯರು ಹಲವರನ್ನು ಆಳುತ್ತಿದ್ದು, ಕಂಡೊಡನೆ ಕೆಳೆಯನ ಕಣ್ಮಣಿಯನ್ನು ಹಾರಿಸಿಕೊಂಡು ಹೋಗುತ್ತಾನೆಂಬುದನ್ನು ನೆನಸಿಕೊಂಡರೆ ಅವನ ತಪ್ಪನ್ನು ಎಂದೂ ಯಾರೂ ಮರೆಯುವುದಕ್ಕಾಗುವುದಿಲ್ಲ. ಪರಮಪವಿತ್ರವೂ ಅನತಿಕ್ರಮ್ಯವೂ ಆದ ಹೆರನ ಮನೆಬಾಳಿನೊಳಕ್ಕೆ ದಾಳಿಯಿಟ್ಟು ಸಮಾಜಧರ್ಮಕ್ಕೆ ಚಂಡಶಾಸನನು ಮಾಡುವ ಅನ್ಯಾಯ, ದ್ರೋಹ ಅಕ್ಷಮ್ಯವಾದದ್ದು ; ಆ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಆದರೆ, ಚಂಡಶಾಸನನ ಶರೀರದಾರ್ಢ್ಯವೇನು, ಮನಸ್ಥೈರ್ಯವೇನು ? ಅವನು ರಾಜವೈಭವದ ಸ್ವಚ್ಛಂದ ಭೋಗವಿಲಾಸದಲ್ಲಿ ತೇಲಿ ಮುಳುಗಿದವನು, ತನ್ನ ರಾಣಿವಾಸದಲ್ಲೇ ಹಲವು ಹೆಂಡಿರನ್ನು ನೋಡಿದವನು. ಸಮಸ್ತ ವಿಷಯಸುಖಗಳನ್ನೂ ನೆರೆಯುಂಡ ಇಂದ್ರಿಯಗಳು ಅವನವು. ಈ ಪ್ರತಿನಿತ್ಯದ ವಿಷಯಾಸಕ್ತ ಜೀವನದಿಂದ ಬರುಬರುತ್ತ ಮೆಲ್ಲಮೆಲ್ಲನೆ ಕಟ್ಟುಸಡಿಲಿ, ಅತ್ಯಲ್ಪ ಭೋಗವಿಷಯದಿಂದ ಉದ್ದೀಪನಗೊಳ್ಳುವುದಕ್ಕೆ ಮಾತ್ರ ಸಮರ್ಥವಾದ ಇಂದ್ರಿಯಸತ್ವವಿದ್ದು, ಹಾಗೆ ಕೆರಳಿ ಕಲಕಿದ ಇಂದ್ರಿಯವನ್ನು ಸ್ತಿಮಿತಕ್ಕೆ ತರುವ ಚಿತ್ತಸ್ಥೈರ್ಯವನ್ನು ಮಾತ್ರ ನೀಗಿಕೊಂಡ ಗಂಡು ಅವನು. ವಿಷಯಭೋಗದ ರುಚಿಯನ್ನು ಕಂಡುಂಡ ರಕ್ತಮಾಂಸಗಳ ಒಳಕೂಗನ್ನೂ ಸೆಳೆತವನ್ನೂ ಆತ್ಮಶಕ್ತಿಯೊಂದು ತಡೆಯದೆಹೋದರೆ, ಸಮಾಜದ ಕೃತಕ ದುರ್ಬಲ ಬಂಧಗಳು ತಡೆಯಬಲ್ಲವೇ ? ಇಷ್ಟಾದರೂ, ಚಂಡಶಾಸನನ ಒಲವಿನ ಪಟ್ಟನ್ನು ನೋಡಿ ಒಂದು ದೃಷ್ಟಿಯಿಂದ ಮರುಗಲೇ ಬೇಕು, ಬೆರಗಾಗಲೇ ಬೇಕು. 'ನೀನು ಒಲಿಯದಿದ್ದರೂ ಹೋಗಲಿ, ಸೆರೆಯಾದರೂ ಸರಿ ನೀನು ನನ್ನ ಮನೆಯಲ್ಲಿ ಇರುವೆಯೆಂಬ ಆಸೆಯೆ ಸಾಕು ನನಗೆ' ಎಂದು ಹೇಳುವ ಚಂಡಶಾಸನನ ಮರುಳುಪಾಡಿಗೆ ಮರುಗದಿರು-

ವುದಕ್ಕಾದೀತೆ? ಅವಳು ಒಲಿಯದಿದ್ದರೂ ತಾನು ಒಲಿದ ಹೆಣ್ಣು ಅಳಿದೊಡನೆ, ಮುಂದಿನ ಜನ್ಮದಲ್ಲಾದರೂ ಅವಳನ್ನು ಕೂಡುತ್ತೇನೆಂದು, ಹೆಣ್ಣೊಡನೆ ಸಹಗಮನ ಮಾಡುವ ಗಂಡನ್ನು ನೋಡಿ ಬೆರಗಾಗದಿರುವುದಕ್ಕಾದೀತೆ?

ಸುನಂದೆ ವಸುಷೇಣರ ವಿಷಯವನ್ನು ಹೆಚ್ಚು ಬೆಳಸಬೇಕಾಗಿಲ್ಲ. ಸುನಂದೆ ಶುದ್ಧ ಹೆಣ್ಣು, ಗಂಡನ ಅಚ್ಚುಮೆಚ್ಚಿನ ಮಡದಿ. ಕೊಂಚವೂ ಮುನ್ಸುಳಿವಿಲ್ಲದೆ ತನ್ನ ಪ್ರಿಯಪತಿಯಿಂದ ವಂಚಿಸಿ ತನ್ನನ್ನು ಚಂಡಶಾಸನನು ಎತ್ತಿಕೊಂಡುಹೋದಾಗ ಏನುಮಾಡಬಲ್ಲಳು? ಅಳಬಲ್ಲಳು; ಅಳುತ್ತಾಳೆ. ಮೊರೆಯಿಡಬಲ್ಲಳು; ಮೊರೆಯಿಡುತ್ತಾಳೆ. ಮೂದಲಿಸಬಲ್ಲಳು; ಮೂದಲಿಸುತ್ತಾಳೆ. ಆದರೆ ಎಲ್ಲವೂ ವ್ಯರ್ಥವಾಗುತ್ತದೆ. ಚಂಡಶಾಸನನ ಬೆಡಗು ಬೆದರುಗಳಿಗೆ ಕೊಂಚವೂ ಬೆರಗಾಗುವುದಿಲ್ಲ, ಬಗ್ಗುವುದಿಲ್ಲ. ಸೆರೆಯಲ್ಲಿ ಸೊರಗಿದರೂ ಸತಿ ಸಗ್ಗುವುದಿಲ್ಲ. ಕಾಮುಕನ ಅನುನಯ ಸಂಲಾಪಗಳಿಗೆ ಅವಳು ಕೊಡುವ 'ನಾಳೆ ನಿನ್ನ ತಲೆ ಸೆರೆಮನೆಯ ಬಾಗಿಲಲ್ಲಿ ಮೆರೆಯುವಾಗ ಇದನ್ನು ನುಡಿ' ಎಂಬ ಮರುನುಡಿ ತನ್ನನ್ನು ಸೆರೆತಂದ ದೊರೆಯನ್ನೂ ಧಿಕ್ಕರಿಸುವ ಅವಳ ರಾಣಿತನದ ಗೌರವ ಗಾಂಭೀರ್ಯವನ್ನೂ ಸತೀತ್ವದ ಕೆಚ್ಚನ್ನೂ ಬೆಳಗುತ್ತದೆ. ಆ ತಿರಸ್ಕಾರ ಧಿಕ್ಕಾರಗಳಿಗೆಲ್ಲ ಅವಳಿಗಿದ್ದ ಬಲ ತನ್ನ ಗಂಡನು ಕಾಳಗಕೊಟ್ಟು ಗೆದ್ದು ಸೆರೆಬಿಡಿಸಿಕೊಂಡು ಹೋಗುತ್ತಾನೆಂಬ ಅಚಲವಾದ ನಂಬಿಕೆ. ಆ ನಂಬಿಕೆಯಲ್ಲೇ ಪ್ರಾಣವಿಟ್ಟುಕೊಂಡಿರುವ ಹೆಣ್ಣು ಇದ್ದಕ್ಕಿದ್ದಹಾಗೆ ತನ್ನ ಇನಿಯನ ತಲೆಯನ್ನು ತನ್ನ ಮುಂದೆ ನೋಡಿದರೆ ಏನು ಮಾಡಿಯಾಳು? ಹಿಂದು ಮುಂದು ಅರಯ್ಯದೆ, ಮಾಟದ ತಲೆಯ ಮೋಸಕ್ಕೆ ಮಾರುವೋಗಿ, ತನ್ನ ಅಸುವಿಗೊಡೆಯನಾದವನಿಗೆ ಅಸುವನ್ನು ಅರ್ಪಿಸಿಬಿಡುತ್ತಾಳೆ.

ಸಹೋದರನಂತೆ ಬರಮಾಡಿಕೊಂಡು ಆದರೋಪಚಾರಗಳಿಂದ ಆತಿಥ್ಯ ಕೊಟ್ಟು ಸತ್ಕರಿಸಿದ ಬಾಲ್ಯ ಸ್ನೇಹಿತನು ಮಿತ್ರದ್ರೋಹವನ್ನೂ ಲಕ್ಷಿಸದೆ ತನ್ನ ಕಣ್ಮಣಿಯನ್ನು ಕದ್ದೊಯ್ದ ಸುದ್ದಿ ಕೇಳಿದೊಡನೆಯೆ ವಸುಷೇಣ ದೊರೆ ಕ್ರೋಧಪರವಶನಾಗಿ, ಇದ್ದಹಾಗೆಯೆ ಚಂಡಶಾಸನನ ಮೇಲೆ ದಂಡೆತ್ತಿ ನಡೆಯುತ್ತಾನೆ. ಯುದ್ಧ ಮುಗಿಯುವುದರೊಳಗೆ

ಸುನಂದೆಯ ಸಾವಿನ ಸುದ್ದಿ ಬರುತ್ತದೆ. ಇನ್ನು ಯಾರಿಗಾಗಿ, ಏತಕ್ಕಾಗಿ ಯುದ್ಧ ಮಾಡಬೇಕು ? ಸೇಡನ್ನಾದರೂ ತೀರಿಸಿಕೊಳ್ಳೋಣವೆಂದರೆ ಹಗೆ ಸಹಗಮನಮಾಡಿದ್ದಾನೆ. ವಸುಷೇಣನು ತನ್ನ ಮನದನ್ನೆ ಮಡಿ ದೊಡನೆ ತಾನೂ ಆತ್ಮಹತ್ಯಮಾಡಿಕೊಂಡು ತನ್ನ ಬಾಳನ್ನು ರುದ್ರ ಮರಣದಿಂದ ಮುಗಿಸಬಹುದಾಗಿತ್ತು. ಆದರೆ, ಧೀರನೂ ಸತ್ವಶಾಲಿಯೂ ಆದ ಆ ದೊರೆ ಅದಕ್ಕೂ ಅರಿದಾದ್ದನ್ನು, ಮೇಲಾದ್ದನ್ನು ಮಾಡುತ್ತಾನೆ. ರಾಜ್ಯವನ್ನು ಮಗನಿಗೆ ಒಪ್ಪಿಸಿಕೊಟ್ಟು ತಪಸ್ಸಿಗೆ ನಡೆಯುತ್ತಾನೆ.

ಅಂತೂ ಒಬ್ಬನಲ್ಲಿ ಮೂಡಿದ ಅಧಾರ್ಮಿಕ ಪ್ರೇಮ ಅವನನ್ನು ಮಾತ್ರ ಬಲಿಗೊಂಡದ್ದಲ್ಲವೆ, ವಿಧಿವಿಲಾಸದಿಂದ ಅದರ ಸುಳಿಯೊಳಗೆ ಸಿಕ್ಕಿದ ಹೆರರಿಬ್ಬರು ನಿರಪರಾಧಿಗಳ ಬಾಳನ್ನೂ ಮುರಿದುಬಿಟ್ಟಿತು.

## ಯಶೋಧರ ಚರಿತೆ

ಕೈಹಿಡಿದ ಹೆಂಡತಿಯ ಪ್ರೇಮದ್ರೋಹದಿಂದ ಬಗೆ ಬೇಸತ್ತು ಸಂಸಾರ ತೊರೆದುಹೋಗುವುದರಲ್ಲಿದ್ದ ದೊರೆಯೊಬ್ಬನು ತಾಯಮೇಲಿನ ಮೋಹದಿಂದ ಆಕೆ ಒಡ್ಡಿದ ಬಲಿಯ ಬಲೆಗೆ ಸಿಕ್ಕಿಬಿದ್ದು, ವಿಷಘುಳಿಗೆಯಲ್ಲಿ ಮಾನಸಿಕ ಹಿಂಸೆಗೆಡೆಗೊಟ್ಟು, ಆ ಪಾಪದ ಫಲವಾಗಿ ಜನ್ಮಜನ್ಮಗಳು ಕಷ್ಟವನುಭವಿಸಿ, ಕಡೆಗೆ ಪಾಪಮುಕ್ತನಾದ ಕಥೆ ಯಶೋಧರ ಚರಿತೆಯ ವಿಷಯ. ಇದರಲ್ಲಿ ಒಂದು ಆತ್ಮದ ಅಳಲು ತೊಳಲುಗಳ, ಬೀಳುಏಳು ಗಳ, ಕಟ್ಟುಬಿಡುಗಡೆಗಳ ಕಥೆಯನ್ನು ನಾವು ಕಾಣುತ್ತೇವೆ.

ಯಶೋಧರ ಚರಿತೆಯ ಕಥೆ ಜೈನರೆಲ್ಲರಿಗೂ ಮೆಚ್ಚಿಗೆಯಾಗಿ, ಬಹುಕಾಲದಿಂದ ಹರಡಿ ನಡೆದುಕೊಂಡು ಬಂದಿರುವ ಪುರಾತನ ಕಥೆ. ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮೊದಲುಗೊಂಡು ಕನ್ನಡ, ತಮಿಳು, ಗುಜರಾತಿ, ಹಿಂದಿ ಮೊದಲಾದ ಹಲವು ದೇಶಭಾಷೆಗಳಲ್ಲಿ ಈ ಕಥೆ ಯನ್ನು ಕುರಿತ ಕಾವ್ಯಗಳು ಹಲವಿವೆ. ಈ ಕಥೆಯ ಸಂಬಂಧವಾದ ಗ್ರಂಥರಚನೆ ಈಗ ತಿಳಿದುಬಂದಿರುವ ಮಟ್ಟಿಗೆ ಸುಮಾರು ೮ನೆಯ ಶತ ಮಾನದಲ್ಲಿ ಆರಂಭವಾದ್ದು ೧೮ನೆಯ ಶತಮಾನದ ಕೊನೆಯವರೆಗೆ, ಒಂದಲ್ಲ ಒಂದು ರೂಪದಲ್ಲಿ, ಒಂದು ಸಾವಿರ ವರ್ಷಗಳ ಕಾಲ ಅವಿಚ್ಛಿನ್ನ

ವಾಗಿ ನಡೆದುಬಂದಿದೆ. ಸಂಸ್ಕೃತ ಒಂದರಲ್ಲೆ ಹತ್ತಾರು ಗ್ರಂಥಗಳು ಸಿಕ್ಕಿವೆ. ಈವರೆಗೆ ಕನ್ನಡದಲ್ಲಿ ಈ ವಿಷಯವನ್ನು ಕುರಿತು ಬೇರೆ ಬೇರೆ ಕವಿಗಳ ಕೃತಿಗಳು ನಾಲ್ಕೈದು ಕಂಡುಬಂದಿವೆ. ಜೈನ ಧರ್ಮದ ಮೂಲತತ್ವಗಳಲ್ಲಿ ಎರಡಾದ ಅಹಿಂಸಾ ತತ್ತ್ವವನ್ನೂ ಜನ್ಮಾಂತರ ತತ್ತ್ವವನ್ನೂ ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಬೋಧಿಸಿ ಪ್ರಚಾರಿಸುವುದಕ್ಕೆ ಈ ಕಥಾವಸ್ತು ಕವಿಗಳ ಕೈಗೆ ಬಲು ಅನುವಾಗಿ ಬಂದಂತೆ ತೋರುತ್ತದೆ. ಒಂದೇ ವಿಷಯದಲ್ಲಿ ಇಷ್ಟೊಂದು ಗ್ರಂಥಗಳು ಹುಟ್ಟಿಕೊಳ್ಳುವುದಕ್ಕೆ ಇದೂ ಒಂದು ಕಾರಣವಾಗಿರಬಹುದು. ಇವುಗಳಲ್ಲಿ ಸ್ವತಂತ್ರ ಸಂಪೂರ್ಣ ಕೃತಿಗಳು ಹಲವು, ಮಹಾ ಗ್ರಂಥಗಳ ಖಂಡಗಳು ಕೆಲವು.

## ಜನ್ನನ ಯಶೋಧರ ಚರಿತೆ

ನಾಲ್ಕು ಅಧಿಕಾರ ಅಥವಾ ಅವತಾರಗಳುಳ್ಳ ಜನ್ನನ 'ಯಶೋಧರ ಚರಿತೆ' ಯಲ್ಲಿ ಒಟ್ಟು ಸುಮಾರು ೩೧೦ ಪದ್ಯಗಳಿವೆ. ಒಂದೊಂದು ಅವತಾರದ ಕೊನೆಯಲ್ಲಿಯೂ ಬರುವ ಒಂದೆರಡು ವೃತ್ತಗಳನ್ನು ಬಿಟ್ಟರೆ, ಮಿಕ್ಕ ಸುಮಾರು ೩೦೦ ಪದ್ಯಗಳು ಕಂದಗಳು[1]. ಜನ್ನನ ಈ ಕಂದ ಛಂದಸ್ಸಿನ ಆಯ್ಕೆಗೆ ಅವನ ಆದರ್ಶವಾದ ವಾದಿರಾಜನ ಯಶೋಧರ ಚರಿತೆಯ ಲಘು ಛಂದಸ್ಸುಗಳೂ ಒಂದು ಕಾರಣವಿರಬಹುದು[2]. ಅದು ಹೇಗೇ ಇರಲಿ, 'ಯಶಸ್ತಿಲಕ' ಚಂಪುವೇ ಮೊದಲಾದ ಉದ್‌ಗ್ರಂಥಗಳೂ ಇನ್ನೂ ವಿವಿಧಮಾರ್ಗದ ಯಶೋಧರ ಕೃತಿಗಳೂ ಹಲವಿದ್ದರೂ

---

[1] ಸಂಸ್ಕೃತದಲ್ಲಿ ಸರ್ಗಗಳ ಕೊನೆಯಲ್ಲಿ ವೃತ್ತ ವ್ಯತ್ಯಾಸಮಾಡಿ ಬರೆಯುವುದು ವಾಡಿಕೆ.

ಚಂಪೂ ಗ್ರಂಥಗಳೂ ರಗಳೆ ಗ್ರಂಥಗಳೂ ಷಟ್ಪದೀ ಗ್ರಂಥಗಳೂ ಸಾಂಗತ್ಯ ಗ್ರಂಥಗಳೂ ಕನ್ನಡದಲ್ಲಿ ಹಲವಿವೆ. ಕೆಲವು ಲಕ್ಷಣ ಗ್ರಂಥಗಳೂ ಸುಭಾಷಿತ ವಚನಗಳೂ ಕಂದದಲ್ಲಿವೆ. ಆದರೆ ಹೀಗೆ ಇಡಿಯ ಕಾವ್ಯವನ್ನೇ ಬರಿಯ ಕಂದಗಳಿಂದ ನಿರ್ವಹಿಸಿರುವ ಕೃತಿಗಳು ಕನ್ನಡದಲ್ಲಿ ಅತಿ ವಿರಳ; ಇಲ್ಲವೇ ಇಲ್ಲವೆಂದರೂ ತಡೆದೀತು.

[2] ಅನುಷ್ಟುಪ್, ಉಪಜಾತಿ, ಸ್ವಾಗತ, ವಂಶಸ್ಥ ಮೊದಲಾದ ಸಂಸ್ಕೃತದ ಅವಿಲಂಬ ವೃತ್ತಗಳಿಗೆ ಕಂದ ಸಂವಾದಿಯಾಗುವಷ್ಟು ಕನ್ನಡದ ಬಳಕೆಯ ವೃತ್ತಗಳು ಆಗಲಾರವು.

ವಾದಿರಾಜನ ತಿಳಿಯೂ ಸರಳವೂ ಸುಂದರವೂ ಆದ ಕೃತಿಯನ್ನು ಆದರ್ಶವಾಗಿ ಮಾಡಿಕೊಂಡ ಕವಿಯ ಅಭಿರುಚಿ ಅವನ ಛಂದಸ್ಸಿನ ಆಯ್ಕೆಯಲ್ಲಿಯೂ ಕಂಡುಬರುತ್ತದೆ. ಜನ್ನನು ಸ್ವವಿಷಯವೂ ಬಲ್ಲಾಳ ದೇವನ ಅನ್ವಯ ಕಥನವೂ ಬರುವ ಮೊದಲಿನ ಸುಮಾರು ೨೫ ಕಂದಗಳನ್ನು ಬಿಟ್ಟರೆ ಉಳಿದ ಸುಮಾರು ೨೫೦ ಕಂದಗಳಲ್ಲಿ, ವಾದಿರಾಜನು ೩೦೦ಕ್ಕಿಂತ ಕಡಮೆ ಪದ್ಯಗಳಲ್ಲಿ ಹೇಳಿರುವ ಕಥೆಯನ್ನೆ ಹೇಳಿದ್ದಾನೆ. ಒಟ್ಟಿನಲ್ಲಿ ಜನ್ನನ ಕನ್ನಡ ಕೃತಿ ವಾದಿರಾಜನ ಸಂಸ್ಕೃತ ಕೃತಿಯ ಸರಳಾನುವಾದ ಎನ್ನಬಹುದು. ಆದರೂ, ಕನ್ನಡ ಬರವಣಿಗೆಯ ಓಟವನ್ನಾಗಲಿ ಅಚ್ಚುಕಟ್ಟನ್ನಾಗಲಿ ನುಡಿಗಟ್ಟನ್ನಾಗಲಿ ನೋಡಿದರೆ ಅದು ಭಾಷಾಂತರವೆಂದು ಹೇಳುವಂತಿಲ್ಲ. ಅನ್ಯಭಾಷೆಯ ಕಾವ್ಯದ ಆತ್ಮವನ್ನು ಗ್ರಹಿಸಿ ಸ್ವಭಾಷೆಯ ನೈಸರ್ಗಿಕತೆಯಿಂದ ಪ್ರತಿಬಿಂಬಿಸುವ ಇಂಥ ಅನುವಾದ ಶೈಲಿ ಮೊದಲಿನಿಂದಲೂ ನಮ್ಮ ಕನ್ನಡ ಕವಿಗಳ ಒಂದು ಹಿರಿಯ ತನಿಗುಣ.

ಜನ್ನನ ಕೃತಿ ವಾದಿರಾಜನ ಕೃತಿಯ ಅನುವಾದವೆಂದ ಮಾತ್ರಕ್ಕೆ ಕನ್ನಡದ್ದು ಸಂಸ್ಕೃತದ್ದರ ಪಡಿಯಚ್ಚೆಂದಲ್ಲ ; ಕನ್ನಡ ಕವಿಯ ಕೈವಾಡವಿಲ್ಲವೆಂದಲ್ಲ. ಜನ್ನ ಕವಿ ಎಡೆಯರಿತು ಕೆಲವನ್ನು ಹಿಗ್ಗಿಸಿದ್ದಾನೆ, ಕೆಲವನ್ನು ಅಡಕಿಸಿದ್ದಾನೆ. ಮೂಲದಲ್ಲಿಯ ಅನಗತ್ಯವೆಂದು ತೋರಿದ ಒಂದೆರಡು ಅಂಶಗಳನ್ನು ಬಿಟ್ಟಿದ್ದಾನೆ. ಭಾವಪುಷ್ಟಿಗಾಗಿಯೂ, ಅರ್ಥಪ್ರಸಾದಕ್ಕಾಗಿಯೂ ಮೂಲದಲ್ಲಿಲ್ಲದ್ದನ್ನು ಹೊಸದಾಗಿ ಸೇರಿಸಿದ್ದಾನೆ. ಉದಾಹರಣೆಗೆ : 'ಅದು ಪಿರಿಯ ಸಿರಿಯ ಬಾಜ್ಮೊದಲ್, ಅದು ಚಾಗದ ಭೋಗದಾಗರಂ, ಸಕಲಸುಖಕ್ಕದು ಜನ್ಮಭೂಮಿ ಎನಿಸಿದುದ ನಾಳ್ವನ್ ಮಾರಿದತ್ತನೆಂಬ ನೃಪಾಲನ್'; 'ಬೇಡಿದ ಕಾಡೊಳ್ ಮಟೆಯಾಯ್ತಿಡಾಡುವಮಿದಱ ಪೊಱೆಯನೆನಗಂ ನಿನಗಂ ಮೂಡುವ ಮುಱುಗುವ ದಂದುಗಂ, ಆಡಿದ ಹೊಲನ್, ಉಂಡ ಮರ್ದು, ಕಂಡ ವಿಚಾರಂ'; 'ಭೈರವನ ಜವನ ಮಾರಿಯ ಮೂರಿಯವೊಲ್ ನಿಂದ ಮಾರಿದತ್ತನ್ ಲಲಿತಾಕಾರರ ಧೀರರ ಬಂದ ಕುಮಾರರ ರೂಪಿಂಗೆ ತಕ್ಕುಗೊಂಡಂತಿರ್ದನ್'; 'ನೋಡುವ ಕಣ್ಗಳ ಸಿರಿ, ಮಾತಾಡುವ ಬಾಯ್ಗಳ ರಸಾಯನಂ, ಸಂತಸದಿಂ ಕೂಡುವ ತೋಳ್ಗಳ ಪುಣ್ಯಂ, ನಾಡಾಡಿಯೆ ರೂಪು ಕುವರ ವಿದ್ಯಾಧರನಾ'; 'ಪಾಣ್ಬನ ಕೂಡಿರ್ದ ನಣ್ಪು

ಗಂಡುಂ ತಮದಿಂದಂ ಬೆಂದು ಸತ್ತುದು, ಅರೆಗೊಯ್ಯುಂಬುದಱಿಂ ನೊಂದು ಸತ್ತುದಿಲ್ಲಜಪೋತಂ'—ಇವೇ ಮೊದಲಾದ ಹತ್ತಾರು ಸುಂದರ ಪದ್ಯಗಳ ಭಾವ ವಾದಿರಾಜನಲ್ಲಿಲ್ಲ. 'ಸುಖಮನಱಿಸುವ ಮನುಜನ್ ಮೊರಡಿಯೊಳೆ ಮಾದುಪಟಮನಱಿಸದಿರನ್'; 'ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆ'; 'ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್'; 'ಮಱುಗಿದುದಱುನೀರ ಮೀನ್‌ಬೊಲಿಂದೆನ್ನ ಮನಂ'; 'ಕಣ್ಣಱಿಯದೊಡಂ ಕರುಳಱಿಯದೆ'—ಇವೇ ಮೊದಲಾದ ಹಲವಾರು ಚೆಲುವು ನುಡಿಗಳು ಕನ್ನಡ ಕವಿಯವು.

ಒಟ್ಟಿನಲ್ಲಿ ಹೇಳುವುದಾದರೆ, ಮೂಲದಲ್ಲಿಯ ಹಲವಂಶಗಳನ್ನು ತೆಗೆದುಕೊಳ್ಳುವುದರಲ್ಲಿ ಹೇಗೆಯೋ ಹಾಗೆಯೇ ಕೆಲವಂಶಗಳನ್ನು ಬಿಡುವುದರಲ್ಲಿಯೂ, ಮೂಲದ ಅನುವಾದದಲ್ಲಿ ಹೇಗೆಯೋ ಹಾಗೆಯೇ ಹೊಸದಾಗಿ ಸೇರಿಸಿರುವುದರಲ್ಲಿಯೂ ಜನ್ನನು ತನ್ನ ಸುಸಂಸ್ಕೃತ ಅಭಿರುಚಿಯನ್ನೂ ಕವಿತಾಶಕ್ತಿಯನ್ನೂ ಭಾಷಾನೈಪುಣ್ಯವನ್ನೂ ತೋರಿಸಿದ್ದಾನೆ. 'ಯಶೋಧರ ಚರಿತೆ'ಯೊಂದೇ ಸಾಕು ಜನ್ನನ ಹೆಸರು ಜಗಕ್ಕೆ ಬೆಳಗುವುದಕ್ಕೆ. ಈಗಲೂ, ಜನ್ನನು ಎಲ್ಲ ಕನ್ನಡ ಜನಕ್ಕೆ ಮೆಚ್ಚಾಗುವುದು ಅವನ ತಿಳಿಯಾದ ಮುದ್ದಾದ ಈ ಪುಟ್ಟ ಕಂದ ಕಾವ್ಯದಿಂದ.

## ಕಥಾ ಸಾರಾಂಶ

ಮಾರಿದತ್ತರಾಜನು ಸಕಲ ಸುಖಕ್ಕೆ ಜನ್ಮಭೂಮಿ ಎನಿಸಿದ ರಾಜಪುರವನ್ನು ರಾಜಧಾನಿ ಮಾಡಿಕೊಂಡು ಅಯೋಧ್ಯಾದೇಶವನ್ನು ಆಳುತ್ತಿರುತ್ತಾನೆ. ಆ ಊರಿನ ಪಾಪಕಳಾಪಂಡಿತೆ ಚಂಡಮಾರಿದೇವತೆಗೆ ಪ್ರತಿ ಚೈತ್ರ ಆಶ್ವಯುಜಗಳಲ್ಲಿ ಜಾತ್ರೆ ನಡೆದು ಪಶುಬಲಿ ನರಬಲಿ ಬೀಳುತ್ತದೆ. ಒಮ್ಮೆ ಚೈತ್ರ ಜಾತ್ರೆಯೊಂದರಲ್ಲಿ ದೊರೆಯ ಅಪ್ಪಣೆಯಂತೆ ಮನುಷ್ಯಯುಗಳಕ್ಕಾಗಿ ಅರಸುತ್ತ ಚಂಡಕರ್ಮ ತಳವಾರನು ಕಿರುವರೆಯದ ಶುಭಲಕ್ಷಣದ ಅಣ್ಣತಂಗಿಯರಿಬ್ಬರನ್ನು ಹಿಡಿದುಕೊಂಡು ಹೋಗುತ್ತಾನೆ. ಆ ಮಕ್ಕಳು ತಮ್ಮ ಗುರು ಸುದತ್ತಾಚಾರ್ಯರ ಅಪ್ಪಣೆಯಂತೆ ಚರಿಗೆಗೆ ಹೊರಟವರು. ಅನ್ವರ್ಥನಾಮರಾದ ಅಭಯರುಚಿ ಅಭಯಮತಿ

ಎಂಬ ಆ ಅರಸು ಮಕ್ಕಳಿಬ್ಬರೂ ಸಾವಿಗಂಜದೆ ಒಬ್ಬರನ್ನೊಬ್ಬರು ಸಂತೈಸುತ್ತ ಹಸಿದ ಕೃತಾಂತನ ಬಾಣಸುವಿನಂತಿದ್ದ ಮಾರಿಯ ಮನೆಯನ್ನು ನಿಶ್ಚಿಂತೆಯಿಂದ ಹೊಗುತ್ತಾರೆ. ಭೈರವರೂಪನಾದ ಮಾರಿದತ್ತನು ಆ ಲಲಿತಾಕಾರರಾದ ಧೀರ ಕುಮಾರರ ರೂಪಿಗೆ ಠಕ್ಕುಗೊಂಡು ನಿಲ್ಲುತ್ತಾನೆ. ತಲೆಹೊಯಿಸಿಕೊಳ್ಳುವುದಕ್ಕೆ ಮೊದಲು ದೊರೆಯನ್ನು ಹರಸಬೇಕೆಂದು ಜನರು ಆ ಮಕ್ಕಳಿಗೆ ಹೇಳಲು, ಮಂದರ ಧೀರನಾದ ಅಭಯರುಚಿ 'ನಿರ್ಮಲ ಧರ್ಮದಿಂದ ಧರೆಯನ್ನು ಪಾಲಿಸು' ಎಂದು ಹರಸುತ್ತಾನೆ. ಆ ಪುಣ್ಯವಚನವನ್ನು ಕೇಳಿದೊಡನೆಯೇ ಮಾರಿದತ್ತನ ಎತ್ತಿದ ಕೈ ಹೊಡೆಯದೆ ಕೆಳಕ್ಕಿಳಿಯುತ್ತದೆ. ಕಿತ್ತ ಕರವಾಳಿನ ತನಗೂ ಮೃತ್ಯುವಿನಂತಿದ್ದ ಮಾರಿಗೂ ಬೆದರದೆ ಅರ್ತಿಯನ್ನೇ ನುಡಿದ ಆ ಧೀರರ ವೃತ್ತಾಂತವನ್ನು ಕೇಳುತ್ತಾನೆ. ತಮ್ಮ ನಿರ್ಮಲ ಚರಿತ್ರೆ ಧರ್ಮಪರರಿಗಲ್ಲದೆ ರುಚಿಸದೆಂದೂ, ಆ ಮಾತು ಬಿಟ್ಟು ತನ್ನ ಮುಂದಿನ ಕೆಲಸವನ್ನು ಮಾಡಬೇಕೆಂದೂ ಅಭಯರುಚಿ ಹೇಳಲು, ದೊರೆ ಮತ್ತೊಮ್ಮೆ ಕೈಮುಗಿದು ಬೇಡುತ್ತಾನೆ. ದಯೆಯಲ್ಲಿ ನೆಲೆಗೊಳಿಸಿದ ಆ ದೊರೆಯ ಮನಸ್ಸನ್ನು ಕಂಡು, ಅವನಿಗೆ ಕಾಲಲಬ್ಧಿ ಸಂದಿತೆಂದು ತಿಳಿದು ಅಭಯರುಚಿ ತಮ್ಮ ಕಥೆಯನ್ನು ಹೇಳುತ್ತಾನೆ:

ಯಶೌಘನು ಅವಂತಿದೇಶದ ಉಜ್ಜಯಿನೀಪುರದ ಅರಸು. ಅವನ ಮಡದಿ ಚಂದ್ರಮತಿ. ಅವರ ಮಗ ಯಶೋಧರ. ಅವನ ಮನಃಪ್ರಿಯೆ ಅಮೃತಮತಿ. ಯಶೌಘ ಒಮ್ಮೆ ಕನ್ನಡಿಯಲ್ಲಿ ತಲೆನರೆ ಕಂಡು ನಿರ್ವೇಗಗೊಂಡು ಮಗನಿಗೆ ಪಟ್ಟಕಟ್ಟಿ ತಪಸ್ಸಿಗೆ ಹೋಗುತ್ತಾನೆ. ಯಶೋಧರ ಅಮೃತಮತಿಯರು ಖಚರ ದಂಪತಿಗಳಂತೆ ಕಂಗೊಳಿಸಿ ವಿಹರಿಸುತ್ತಿರುತ್ತಾರೆ. ಒಮ್ಮೆ ಆ ಹೃದಯಪ್ರಿಯರು ಸೆಜ್ಜೆಮನೆಯ ಮಂಚದ ಮೇಲೆ ಮಲಗಿರುವಾಗ ನಲ್ನಿಶೆಯ ನಿಶ್ಶಬ್ದತೆಯಲ್ಲಿ ಅಮೃತಮತಿಗೆ ಇನಿದನಿಯೊಂದು ಕೇಳಬರುತ್ತದೆ. ಪಕ್ಕದ ಗಜಶಾಲೆಯ ಮಾವಟಿಗನು ತನ್ನ ವಿನೋದಕ್ಕೆ ಹಾಡಿಕೊಳ್ಳುತ್ತಿದ್ದ ಆ ಹಾಡಿನಿಂದ ಅಮೃತಮತಿಯ ನಿದ್ದೆ ತಿಳಿಯುತ್ತದೆ. ನಿದ್ದೆ ತಿಳಿದು ಆಲಿಸಿ, ಅರಸಿ ರಾಗದ ಸವಿಗೆ ಒಳಸೋತು ಗೀತೆ ಮುಟ್ಟಿದ ಮನವನ್ನೇ ತೊಟ್ಟನೆ ಪಸಾಯದಾನ ಕೊಟ್ಟುಬಿಡುತ್ತಾಳೆ. ಅತಿ ನೂತನ ಗೀತದ ರಾಗಗಳು

ಒಂದರಮೇಲೊಂದು ಕಿವಿಗೆ ಸೊದೆಯೆರೆಯುತ್ತಿರಲು, ರಾಣಿಯ ರಾಗ ಕೆರಳಿ ಅವನನ್ನು ನೋಡುವ ಕೂಡುವ ಚಿಂತೆ ಕಡಲುವರಿಯುತ್ತದೆ. ಬೆಳಗಾಗುವುದೇ ತಡ ತನ್ನ ಮನದ ಕೆಳದಿಗೆ ಮನಬಿಚ್ಚಿ ಹೇಳಿ ಅವಳನ್ನು ಗೀತದ ಕಣಿಯನಲ್ಲಿಗೆ ಕಳಿಸುತ್ತಾಳೆ. ಅವಳು ಹೋಗಿ ಒಬ್ಬ ಅಷ್ಟವಂಕನನ್ನು ನೋಡಿ ಹೇಸಿ, ವಿಧಿಯನ್ನು ಬೈದಿಡುತ್ತಾಳೆ. ಮಾತಾಡದೆಯೆ ಮರಳುತ್ತಾಳೆ. ಕೆಳದಿಯ ದಾರಿಯೇ ಕಣ್ಣಾಗಿ ನಿಂತಿದ್ದ ರಾಣಿಯ ಬಳಿ ಬಂದು 'ಇಂಥ ಕಾಮದೇವನನ್ನು ಎಲ್ಲಿ ಹುಡುಕಿ ಒಲಿದೆ?' ಎಂದು ವ್ಯಂಗ್ಯವಾಗಿ ನುಡಿಯುತ್ತಾಳೆ. ಕಾಮದ ಕೆರಳಿನಿಂದ ಮರುಳುಮತಿಯಾದ ರಾಣಿ ಆ ವ್ಯಂಗ್ಯ ತಿಳಿಯಲಾರದೆ ನಲಿದು, ನೂತನ ನಲ್ಲನ ಚೆಲುವನ್ನು ಕೇಳಲು ತವಕಿಸುತ್ತಾಳೆ. ಅಷ್ಟವಂಕನ ವಿಕಾರವರ್ಣನೆಯನ್ನು ಕೇಳಿ ಪುಳಿಂದನ ಕಣೆಗಟ್ಟಿ ನಿಂತ ವನಹರಿಣಿಯಂತೆ ನಿಶ್ಚೇಷ್ಟಳಾಗುತ್ತಾಳೆ. ಆದರೂ, ಕೈಮೀರಿದ ಕಾಮೋದ್ರೇಕದ ಭರದಿಂದ ತಪ್ಪಿಸಿಕೊಳ್ಳಲಾರದವಳಾಗಿ, ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳೆಂದು ಮರುಗಳಿಗೆಯೇ ಸಮಾಧಾನ ತಂದುಕೊಳ್ಳುತ್ತಾಳೆ. ದೂತಿಗೆ ಲಂಚ ಕೊಟ್ಟು ಮಾವತಿಗನನ್ನು ಹೊಂದಿಸಿಕೊಂಡು ಹಗಲಿರುಳೂ ತನ್ನ ಬಿಡುಹೊತ್ತನ್ನೆಲ್ಲ ಅವನಲ್ಲಿಯೆ ಕಳೆಯುತ್ತಿರುತ್ತಾಳೆ. ಬೇವನ್ನು ಮೆಚ್ಚಿದ ಕಾಗೆಗೆ ಮಾವು ಇಳಿದಾಗುವಂತೆ ಅಮೃತಮತಿಗೆ ಬರುಬರುತ್ತ ಯಶೋಧರನಲ್ಲಿ ಅನುರಾಗ ಬತ್ತುತ್ತದೆ. ಇದರ ಮರ್ಮವನ್ನು ತಿಳಿಯಬೇಕೆಂದು ದೊರೆ ಒಂದಿರುಳು ನಿದ್ದೆ ಬಂದವನಂತೆ ಮಲಗಿರಲು, ರಾಣಿ ಮೆಲ್ಲನೆ ತೋಳ ಸೆರೆಬಿಡಿಸಿಕೊಂಡು ಜಾರನಲ್ಲಿಗೆ ನುಸುಳುತ್ತಾಳೆ. ಅವಳು ಅರಿಯದಂತೆ ಅರಸನೂ ಬೆನ್ನ ಹಿಂದೆಯೆ ಕತ್ತಿ ಹಿರಿದು ಹೋಗುತ್ತಾನೆ. ಅಮೃತಮತಿ ತಡಮಾಡಿದ್ದಕ್ಕೆ ಅಷ್ಟವಂಕನು ಮುಳಿದು ಕಲಹಂಸಕ್ಕೆ ಗಿಡುಗ ಎರಗುವಂತೆ ಎರಗಿ ಬಡಿಯುತ್ತಾನೆ. ರಾಣಿ ಅವನ ಕಾಲಮೇಲೆ ಬಿದ್ದು ಹೊರಳಿ 'ಪಾತಕಿ ದೊರೆಯಿಂದ ತಡವಾಯಿತು ; ನೀನುಳಿದರೆ ಸಾಯುವವಳು ನಾನು ಮಿಕ್ಕ ಗಂಡರು ಸಮಸೋದರರು ನನಗೆ' ಎಂದು ತಿಳಿಸಿ ಸಮಾಧಾನ ಮಾಡುತ್ತಾಳೆ. ದೊರೆಯ ಮನ ಕನಲಿ ಒಡನೆಯೇ ಇಬ್ಬರನ್ನೂ ಸೀಳಿಬಿಡಬೇಕೆಂದು ಕೈಯ ಕತ್ತಿ ನಿಮಿರುತ್ತದೆ. ಆದರೆ ಮರುಗಳಿಗೆಯೇ ಧೃತಿಗೊಂಡು ಆ ಹುಳುಕರನ್ನು ಹೊಡೆಯಲು ಹೇಸಿ

ಸುಮ್ಮನೆ ಹಿಂದಿರುಗಿ ಬಂದು ಮಲಗಿಕೊಳ್ಳುತ್ತಾನೆ. ರಾಣಿಯೂ ಬಂದು ಮುನ್ನಿನಂತೆ ಪಕ್ಕದಲ್ಲಿ ಮಲಗಿಕೊಳ್ಳುತ್ತಾಳೆ. ಬೆಳಗ್ಗೆ ಎದ್ದು ದೊರೆ ಸಂಸಾರಕ್ಕೆ ಬೇಸತ್ತು ತೊರೆದುಹೋಗಲು ತೀರ್ಮಾನಿಸುತ್ತಾನೆ. ರಾಣಿ ಎದ್ದೊಡನೆ ದೊರೆ ನಗೆನುಡಿಯ ನೆವವನ್ನು ತೆಗೆದು ನೈದಿಲೆ ಹೂವಿಂದ ಅಮೃತಮತಿಯನ್ನು ಇಕ್ಕುತ್ತಾನೆ. ಅಂದು ಅಷ್ಟವಂಕನ ಬಾರೇಟು ತಿಂದು ಉಳಿದ ಆ ಸುಕುಮಾರಿ ಇಂದು ಆ ಹೂವೇಟಿನಿಂದ ಮೂರ್ಛೆ ಹೋಗುತ್ತಾಳೆ. ಅವಳ ಅಣಕಕ್ಕೆ ಅಸಹ್ಯಿಸಿ 'ಅಯ್ಯೋ! ಅಂದಿನ ಸಾವು ದೈವದಿಂದ ತಪ್ಪಿತು ; ಇಂದು ನೈದಿಲೆ ಸಾವಿಗಾಯ್ತು' ಎಂದು ಅರಸು ಕೊಂಕಿ ನುಡಿಯುತ್ತಾನೆ. ತನ್ನ ಗುಟ್ಟು ಬಯಲಾದ್ದನ್ನು ತಿಳಿದು ರಾಣಿ ಮರುಮಾತಾಡದೆ ಬೇಸತ್ತಂತೆ ಇದ್ದುಬಿಡುತ್ತಾಳೆ.

ಇತ್ತ, ದೊರೆ ಬಗೆಕದಡಿ ನೆಲೆಕಾಣದೆ ತಾಯಬಳಿಗೆ ಹೋಗುತ್ತಾನೆ. ಮಗನ ನೀರೋಡಿದ ಮುಖಕಂಡು ತಾಯ ಮನಸ್ಸು ಬತ್ತಿದ ನೀರ ಮೀನಂತೆ ಮರುಗಿ ಕಾರಣ ಕೇಳುತ್ತಾಳೆ ರಾತ್ರಿ ಕನಸಿನಲ್ಲಿ ಹೊಂದಾವರೆಕೊಳದ ಹಂಸ ಕನಲಿ ಆವಲುಗೊಳದಲ್ಲಿ ನಲಿದದ್ದನ್ನು ಕಂಡೆನೆಂದು ಹೇಳಿ ದೊರೆ ನಿಜನುಡಿಯಲಾರದೆ ಇರುಳು ನಡೆದದ್ದನ್ನು ಕನಸಿನ ನೆವದಿಂದ ಮರಸುತ್ತಾನೆ. ಮಗನೊಂದು ನೆನೆದರೆ ತಾಯೊಂದು ನೆನೆಯುತ್ತಾಳೆ. ದುಃಸ್ವಪ್ನದ ಶಾಂತಿಗಾಗಿ ದೇವಿಗೆ ದಾವಣಿಗುರಿಯನ್ನು ತರಿದು ಒಪ್ಪಿಸಬೇಕೆಂದು ತಾಯಿ ಹೇಳಲು, ಮಗ ಕಿವಿ ಮುಚ್ಚಿಕೊಳ್ಳುತ್ತಾನೆ. ವಧೆ ಹಿತವಾಗದು, ಜೀವದಯೆ ಜೈನಧರ್ಮ ಎಂದು ಎಷ್ಟು ಹೇಳಿದರೂ ತಾಯಿ ಕೇಳದೆ, ಕೊನೆಗೆ ಹಿಟ್ಟಿನ ಕೋಳಿಯನ್ನಾದರೂ ಬಲಿ ಕೊಡಬೇಕೆಂದೂ ಇಲ್ಲದಿದ್ದರೆ ತಾನೇ ದೇವಿಗೆ ಬಲಿ ಬೀಳುವುದಾಗಿಯೂ ಹೇಳಿ ಮಗನನ್ನು ಪೀಡಿಸುತ್ತಾಳೆ. ತಾಯ ಮೋಹದಿಂದ ಮಗ ಒಪ್ಪಿ ಮಾನೋಮಿಯ ಮುಂದಿನ ಭೌಮಾಷ್ಟಮಿಯಲ್ಲಿ ಹಿಟ್ಟಿನ ಕೋಳಿಯೊಂದನ್ನು ದೇವಿಗೆ ಬಲಿಯಿಡುತ್ತಾನೆ. ಆ ಹಿಟ್ಟಿನ ಕೋಳಿಯನ್ನು ಆಶ್ರಯಿಸಿಕೊಂಡಿದ್ದ ಬೆಂತರನೊಂದು ಕೋಳಿಯ ತಲೆ ಚಿಗಿದೊಡನೆಯೆ ಕು ಕ್ಕೊ ಕೂ ಎಂದು ಕೂಗಿಕೊಂಡು ಹೋಗುತ್ತದೆ. ಕೂಗಿ ಕರೆವ ದುರಿತಗಳ ಬಲ್ಲುಲಿಯಂತೆ ಇದ್ದ ಆ ವಿಕಾರ ಕೂಗನ್ನು ಕೇಳಿ ದೊರೆ ದಿಗಿಲುಬಿದ್ದು, ವಿಧಿವಿಲಾಸವರಿಯಲಾರದೆ, ಮನೆಗೆ ಬರುತ್ತಾನೆ. ಬಂದು ಸಂಸಾರ ತೊರೆದು ಮಗ ಯಶೋಮತಿಗೆ ಪಟ್ಟಕಟ್ಟಿ ಕಾಡಿಗೆ

ಹೋಗಲು ಅನುವಾಗುತ್ತಾನೆ. ಅದನ್ನರಿತು ಆ ಮಾಯಾಂಗನೆ ಅಮೃತಮತಿ ಹೂವಿನ ಸೌರಭದಂತೆ ತಾನೂ ಗಂಡನ ಹಿಂದೆ ಹೋಗುವುದಾಗಿ ತಿಳಿಸಿ, ಹೋಗುವ ಮೊದಲು ಎಲ್ಲರೂ ತನ್ನರಮನೆಯಲ್ಲಿ ಔತಣವುಂಡು ಹೋಗಬೇಕೆಂದು ಗಂಡನನ್ನೂ ಅತ್ತೆಯನ್ನೂ ಒಪ್ಪಿಸುತ್ತಾಳೆ. ಔತಣದ ಅಡಿಗೆಯಲ್ಲಿ ವಿಷ ಹಾಕಿ ಆ ಪಾತಕಿ ಇಬ್ಬರನ್ನೂ ಅರಮನೆಯಲ್ಲಿ ಕೊಂದು ಬಿಡುತ್ತಾಳೆ.

ಹೀಗೆ ದುರ್ಮರಣದಿಂದ ಸತ್ತ ತಾಯಿ ಮಗ ಇಬ್ಬರೂ ಮುಂದೆ ನಾನಾ ಪಶುಪಕ್ಷಿಗಳಾಗಿ ಏಳೇಳು ಜನ್ಮಗಳನ್ನು ತಳೆದು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಹೊಂದಿ, ಕೊನೆಗೆ ಯಶೋಮತಿಗೆ ಕುಸುಮಾವಳಿಯಲ್ಲಿ ಅಭಯರುಚಿ ಅಭಯಮತಿಗಳಾಗಿ ಹುಟ್ಟುತ್ತಾರೆ. ಅಣ್ಣ ತಂಗಿಯರು ಎಳವೆಯಲ್ಲೇ ಜೈನದೀಕ್ಷೆಗೊಂಡು ಸುದತ್ತಾಚಾರ್ಯರಲ್ಲಿ ಶಿಷ್ಯವೃತ್ತಿಯಲ್ಲಿರುತ್ತಾರೆ.

ಗುರುವಿನ ಅಪ್ಪಣೆಯಂತೆ ಚರಿಗೆಗೆ ಹೊರಟ ಆ ಅಭಯರುಚಿ ಅಭಯಮತಿಗಳೇ ನಾವು. ಕೇವಲ ಮಾನಸಿಕ ಪಾಪವೊಂದಕ್ಕೆ ನಾವು ಪಟ್ಟ ಪಾಡಿನ ಕಥೆ ಇದು.

ಕಥೆ ಕೇಳಿ ಮಾರಿದತ್ತದೊರೆ ಬೆರಗಾಗಿ ಉದ್ವೇಗಪರನಾಗುತ್ತಾನೆ. ಚಂಡಮಾರಿ ಚೇತನ ಮೂರ್ತಿಯಾಗಿ ಬಂದು ಕುವರನಿಗೆ ವಂದಿಸಿ, ಇನ್ನು ಮೇಲೆ ಹಿಂಸಾಪೂಜೆ ಕೂಡದೆಂದೂ ಹೂವು ಅಕ್ಷತೆಗಳಿಂದ ಸಾತ್ವಿಕ ಪೂಜೆಯೇ ಆಗಬೇಕೆಂದೂ ಇಲ್ಲದಿದ್ದರೆ ತಾನು ಮುಳಿಯುವುದಾಗಿಯೂ ನೆರವಿಗೆಲ್ಲ ಕಟ್ಟಳೆಮಾಡಿ ಅಂತರ್ಧಾನವಾಗುತ್ತಾಳೆ. ಮಾರಿದತ್ತನು ಮಗನಿಗೆ ಪಟ್ಟಕಟ್ಟಿ ಜೈನದೀಕ್ಷೆ ವಹಿಸಿ ಸಮಾಧಿ ಮುಡಿಪಿ ಕೊನೆಗೆ ಕಲಿಯನ್ನು ಮೂದಲಿಸಿದಂತೆ ಮೂರನೆಯ ಸ್ವರ್ಗದಲ್ಲಿ ದೇವನೆ ಆಗುತ್ತಾನೆ. ಅಭಯರುಚಿ ಅಭಯಮತಿಗಳಿಬ್ಬರೂ ಇಲ್ಲಿ ತಪಸ್ಸು ಮುಗಿಸಿ ಈಶಾನಕಲ್ಪದಲ್ಲಿ ಹುಟ್ಟುತ್ತಾರೆ. ಪಾತಕಿ ಅಮೃತಮತಿ ಧೂಮಪ್ರಭೆ ಎಂಬ ನರಕದಲ್ಲಿ ತೊಳಲುತ್ತಾಳೆ.

## ಯಶೋಧರ ಚಂದ್ರಮತಿಯರ ಜನ್ಮಾಂತರಗಳ ವಿವರ

ಅಮೃತಮತಿ ಇಟ್ಟ ವಿಷಾನ್ನವುಂಡು ದುರ್ಮರಣದಿಂದ ಸತ್ತ ತಾಯಿ ಮಗ ಇಬ್ಬರೂ ಯಾವೆಡೆಯೋ ಹುಟ್ಟಲಿ ಯಾವ ಹುಟ್ಟೇ

ಹುಟ್ಟಲಿ ಯಶೋಮತಿ ದೊರೆಯೊಡನೆ ಒಂದಲ್ಲ ಒಂದು ಸಂಬಂಧವಿದ್ದೇ ಇರುತ್ತದೆ. ಅರಮನೆಯಲ್ಲಿ ಅವನ ಕೈಯಿಂದ ಬೆಳೆಯುತ್ತಾರೆ ; ಬಲೆಗೆ ಸಿಕ್ಕಿ ಅವನ ಮನೆಯಲ್ಲಿ ಅಡುಗೆಯಾಗುತ್ತಾರೆ ; ಇಲ್ಲವೆ, ಕಾಡಿನಲ್ಲಿ ಅವನ ಬಾಣಕ್ಕೆ ಬೀಳುತ್ತಾರೆ. ಕೊನೆಗೆ ಅವನಿಗೇ ಮಕ್ಕಳಾಗಿ ಹುಟ್ಟುತ್ತಾರೆ.

೧. ಮಗ ವಿಂಧ್ಯೆಯಲ್ಲಿ ನವಿಲಾಗಿ, ತಾಯಿ ಕರಹಟದಲ್ಲಿ ಬೇಟೆ ನಾಯಾಗಿ ಹುಟ್ಟಿ ಯಶೋಮತಿಯ ಅರಮನೆ ಸೇರುತ್ತಾರೆ. ಒಮ್ಮೆ, ಅಮೃತಮತಿಯೊಡನೆ ಸರಸದಲ್ಲಿದ್ದ ಜಾರ ಅಷ್ಟವಂಕನ ಕಣ್ಣನ್ನು ನವಿಲು ಕುಕ್ಕುತ್ತದೆ. ನಾಯಿ ನವಿಲನ್ನು ಮೇಲೆ ಬಿದ್ದು ಕೊಲ್ಲುತ್ತದೆ. ಯಶೋಮತಿ ಕೋಪಗೊಂಡು ನಾಯನ್ನು ಕೊಂದುಬಿಡುತ್ತಾನೆ. ಆದರೆ, ಕಣ್ಣರಿಯದಿದ್ದರೂ ಕರುಳರಿಯಿತೆಂಬಂತೆ ಆ ಎರಡರ ಸಾವಿಗೆ ದೊರೆ ಅಳುತ್ತಾನೆ.

೨. ಮಗ ವಿಂಧ್ಯೆಯಲ್ಲಿ ಎಯ್ಯುಮಿಗವಾಗಿಯೂ ತಾಯಿ ಅಲ್ಲಿಯೇ ಹಾವಾಗಿಯೂ ಹುಟ್ಟಿ, ಹಾವು ಎಯ್ಯನ್ನು ತಿಂದು ಹಾಕುತ್ತದೆ. ಹಾವನ್ನು ಹುಲಿಯೊಂದು ಕೊಲ್ಲುತ್ತದೆ.

೩. ಮಗ ಉಜ್ಜಯಿನಿಯ ಸಿಪ್ರಾನದಿಯಲ್ಲಿ ಮೀನಾಗಿಯೂ ಅಲ್ಲಿಯೇ ತಾಯಿ ಮೊಸಳೆಯಾಗಿಯೂ ಹುಟ್ಟಿ, ಮೊಸಳೆ ಮೀನಮೇಲೆ ಹಾಯಹೋಗುತ್ತದೆ. ಯಶೋಮತಿಯ ಜಾಲಗಾರರು ಆ ಮೊಸಳೆಯನ್ನು ಹಿಡಿದು ಹಲವು ಬಗೆಯಾಗಿ ಸಾಯಿಸುತ್ತಾರೆ. ದೊರೆ ಮೀನನ್ನು ಹಿಡಿದು ತರಿಸಿ ತಂದೆ ಯಶೋಧರನ ಶ್ರಾದ್ಧಕ್ಕಾಗಿ ಸಜೀವವಾಗಿ ಅಡುಗೆ ಮಾಡಿಸಿ ಬ್ರಾಹ್ಮಣರಿಗೆ ಬಡಿಸುತ್ತಾನೆ. ಕಳಿಯುಂಡ ಬ್ರಾಹ್ಮಣರು ಯಶೋಧರನು ಸ್ವರ್ಗದಲ್ಲಿ ಸುಖವಾಗಿದ್ದಾನೆಂದು ಹೇಳುತ್ತಿರುವಲ್ಲಿ, ಯಶೋಧರನಾಗಿದ್ದ ಆ ಮೀನು ಅಡುಗೆಮನೆಯಲ್ಲಿ ಅರೆಜೀವವಾಗಿ ಬೇಯುತ್ತ ಮರುಗುತ್ತದೆ.

೪. ತಾಯಿ ಉಜ್ಜಯಿನಿಯ ಹೊಲಗೇರಿಯಲ್ಲಿ ಆಡಾಗುತ್ತಾಳೆ. ಮಗ ಆ ಆಡಿನಲ್ಲಿ ಹೋತಾಗಿ ಹುಟ್ಟಿ, ಆ ಹೋತೇ ಆ ಆಡಿನೊಡನೆ ನೆರೆದಿರುವಾಗ, ಮತ್ತೊಂದು ಹೋತ ಅದನ್ನು ಇರಿಯುತ್ತದೆ. ಹಾಗೆ ಸತ್ತ ಹೋತನ ಜೀವ ತಾಯ ಬಸಿರಿನ ಸ್ವಬೀಜದಲ್ಲಿ ಸೇರಿಕೊಂಡು ಬೆಳೆಯುತ್ತದೆ. ಹೀಗೆ ಬಸಿರು ಬೆಳೆದ ಆಡನ್ನು ಒಮ್ಮೆ ಬೇಟೆ ಯಾವುದೂ

ಸಿಕ್ಕದ ಯಶೋಮತಿ ಬಾಣದಿಂದ ಹೊಡೆಯುತ್ತಾನೆ ಆ ಹುಣ್ಣ ಬಾಯಿಂದ ಉದುರಿದ ಮರಿಯನ್ನು ಹೊಲೆಯನಿಗೆ ಸಲಹಲು ಕೊಡುತ್ತಾನೆ. ದೊರೆ ಒಮ್ಮೆ ಎಮ್ಮೆ ಹೋರಿಯೊಂದನ್ನು ಊರ ಮಾರಿಗೆ ಬಲಿಯಿಕ್ಕಿ ಅದನ್ನು ಮಹಾಲಯಕ್ಕಾಗಿ ಕೊಡುತ್ತಾನೆ. ಮುಗ್ಗಿ ಹುಳಿತ ಆ ಅಡಗನ್ನು ಬಿಸಿಲಿಗೆ ಆರಹಾಕಿದ್ದಾಗ ನಾಯಿ ಕಾಗೆ ಬಂದು ಮುಟ್ಟಿ ಕೆಡಿಸಿಬಿಡುತ್ತವೆ. ಅದರ ಶುದ್ಧಿಗಾಗಿ ಶಾಸ್ತ್ರಪ್ರಕಾರ ತಾಯ ಬಸಿರಲ್ಲಿ ಸ್ವಬೀಜದಿಂದ ಹುಟ್ಟಿದ ಆಡು ಬೇಕೆಂದು ಪುರೋಹಿತರು ಹೇಳುತ್ತಾರೆ. ದೊರೆ ಹೊಲೆಯನಿಗೆ ಕೊಟ್ಟಿದ್ದ ಆಡನ್ನು ತರಿಸಿ ಅದರಿಂದ ಶುದ್ಧಿ ಮಾಡಿಸುತ್ತಾನೆ. ಅದನ್ನುಂಡ ಬ್ರಾಹ್ಮಣರು ಚಂದ್ರಮತಿ ಯಶೋಧರರು ಸ್ವರ್ಗದಲ್ಲಿ ಸುಖವಾಗಿದ್ದಾರೆಂದು ಹೇಳುತ್ತಿರುವುದನ್ನು ಕೇಳಿದ ಆ ಆಡು ಮನದಲ್ಲೇ ಕೊರಗಿ ಮರುಗುತ್ತದೆ.

೫. ತಾಯಿ ಕಳಿಂಗದಲ್ಲಿ ಕೋಣನಾಗಿ ಹುಟ್ಟಿ ವ್ಯಾಪಾರಿಯೊಬ್ಬನ ಹೊರೆಗೋಣನಾಗಿರುತ್ತದೆ. ನೀರಡಸಿ ಸಿಂಪಾನದಿಗೆ ನೀರು ಕುಡಿಯಲು ಬಂದಿದ್ದ ಆ ಕೋಣ ಅರಸನ ಕುದುರೆಯನ್ನು ಕೊಂದುಬಿಡುತ್ತದೆ. ದೊರೆ ರೇಗಿ ಆ ಕೋಣನನ್ನು ಹಿಡಿದು ತರಿಸಿ ವಿವಿಧ ಕೊಲೆಯಿಂದ ಕೊಲ್ಲಿಸಿ, ಅದರ ಮಾಂಸವನ್ನು ಅಮೃತಮತಿಗೆ ಕೊಡಿಸುತ್ತಾನೆ. ಆ ಮಾಂಸದ ರುಚಿ ಕಂಡ ಅಮೃತಮತಿ ಬಾಣಸದಲ್ಲಿ ಕಟ್ಟಿದ್ದ ಹೋತನನ್ನೂ ತರಿಸಿ ಬೇಯಿಸಿ ತಿನ್ನುತ್ತಾಳೆ.

೬. ತಾಯಿ ಮಗ ಇಬ್ಬರೂ ಉಜ್ಜಯಿನಿಯ ಹೊಲಗೇರಿಯಲ್ಲಿ ಕೋಳಿ ಪಿಳ್ಳೆಗಳಾಗಿ ಹುಟ್ಟುತ್ತಾರೆ. ಯಶೋಮತಿ ಅವನ್ನು ಸಲಹಲು ಚಂಡಕರ್ಮನಿಗೆ ಕೊಡುತ್ತಾನೆ. ಚಂಡಕರ್ಮನು ಒಮ್ಮೆ ವನದಲ್ಲಿ ತಿರುಗುತ್ತಿದ್ದು ಮರದ ಕೆಳಗೆ ಅಕಂಪನ ಮುನಿಯನ್ನು ಕಂಡು ಅವನೊಡನೆ ಆತ್ಮತತ್ತ್ವ ಜಿಜ್ಞಾಸೆ ನಡಸುತ್ತಿರುತ್ತಾನೆ ಮುನಿ ಆತ್ಮದ ವಿಚಾರವನ್ನೂ ಜೈನತತ್ವವನ್ನೂ ವಿವರಿಸುತ್ತ, ಹಿಟ್ಟಿನ ಕೋಳಿಯನ್ನು ಬಲಿಯಿಟ್ಟು ಯಶೋಧರ ಚಂದ್ರಮತಿಯರು ಹಲವು ಪಾಡುಪಟ್ಟು ಕೊನೆಗೆ ಗೂಡಿನ ಕೋಳಿಗಳಾಗಿರುವ ವೃತ್ತಾಂತವನ್ನು ಅವಧಿಜ್ಞಾನದಿಂದ ಅರಿತು ಹೇಳುತ್ತಾನೆ. ಆ ಮಾತನ್ನು ಚಂಡಕರ್ಮನ ಬಳಿಯಿದ್ದ ಕೋಳಿಗಳು ಕೇಳಿ ಜಾತಿಸ್ಮರಗಳಾಗಿ ಮನಸ್ಸಿನಲ್ಲೆ ಅಹಿಂಸಾವ್ರತ ಧರಿಸಿ ನಲವಿನಿಂದ

ಕೆಲೆಯುತ್ತವೆ. ಅದೇ ವನದಲ್ಲಿ ಬೇರೊಂದೆಡೆ ಪರಿವಾರದೊಂದಿಗೆ ವಿಹರಿಸುತ್ತಿದ್ದ ಯಶೋಮತಿದೊರೆ ಮಡದಿ ಕುಸುಮಾವಳಿಗೆ ತನ್ನ ಶರವಿದ್ಯೆಯನ್ನು ಮೆರೆಯುವುದಕ್ಕಾಗಿ ದನಿ ಬಂದ ದಿಕ್ಕಿಗೆ ಬಾಣಬಿಟ್ಟು ಆ ಕೋಳಿಗಳನ್ನು ಕೆಡವುತ್ತಾನೆ.

೭. ಆ ಕೋಳಿಗಳು ಹಾಗೆ ಸತ್ತು ಕುಸುಮಾವಳಿಯಲ್ಲಿ ಯಶೋಮತಿಗೆ ಅಭಯರುಚಿ ಅಭಯಮತಿಗಳಾಗಿ ಹುಟ್ಟಿ, ಎಳವೆಯಲ್ಲಿ ಜೈನ ದೀಕ್ಷೆ ವಹಿಸುತ್ತಾರೆ.

## ಗ್ರಂಥವಿಮರ್ಶೆ

ಯಶೋಧರ ಚರಿತೆಯನ್ನು ಎರಡು ಭಾಗವಾಗಿ ವಿಂಗಡಿಸ ಬಹುದು : ಯಶೋಧರ ಅಮೃತಮತಿಯರ ಪ್ರಣಯ ಕಥೆ ; ಯಶೋಧರ ಚಂದ್ರಮತಿಯರ ಜನ್ಮಾಂತರಗಳ ಕಥೆ. ಮೊದಲನೆಯದು ಸಾಮಾನ್ಯ ವಾಗಿ ಎಲ್ಲ ಓದುಗರಿಗೂ ಒಪ್ಪಿ ಮೆಚ್ಚಿಕೆಯಾಗುತ್ತದೆ. ಎರಡನೆಯದು ಎಲ್ಲರಿಗೂ ಒಂದೇ ಸಮನಾಗಿ ಹಿಡಿಯುತ್ತದೆಂದು ಹೇಳುವುದಕ್ಕಿಲ್ಲ. ತನಿಯಾಗಿ ಒಂದೊಂದು ಜನ್ಮಾಂತರ ಕಥೆಯೂ ಸ್ವಾರಸ್ಯವಾಗಿವೆ ; ಎಲ್ಲದರ ಒಟ್ಟು ಕಟ್ಟಡವೂ ಕಲ್ಪನಾದೃಷ್ಟಿಯಿಂದ ಚಮತ್ಕಾರವಾಗಿವೆ. ಆದರೆ, ಆ ಕಥೆಗಳನ್ನೆಲ್ಲ ಕೂಡಿಸಿ ಪೋಣಿಸುವ ಮೂಲಸೂತ್ರವಾದ ಜನ್ಮಾಂತರ ತತ್ವ ಎಲ್ಲರಲ್ಲಿಯೂ ಒಂದೇ ಬಗೆಯ ಶ್ರದ್ಧೆ ಸಹಾನು ಭೂತಿಗಳನ್ನು ಹುಟ್ಟಿಸೀತೋ ಇಲ್ಲವೋ ! ಆದರೂ, ಯಾವುದೇ ಕಾವ್ಯ ವಾಗಲಿ ಅದರ ಅರ್ಥವನ್ನು ಸರಿಯಾಗಿ ತಿಳಿದುಕೊಂಡು ಅದರ ಸವಿ ಯನ್ನು ಸವಿಯಬೇಕಾದರೆ, ಆ ಹೊತ್ತಿಗಾದರೂ ನಮ್ಮ ಮನಸ್ಸನ್ನು ಅದಕ್ಕೆ ಅನುಗೊಳಿಸಿ ಒಂದು ಬಗೆಯ ಕಾವ್ಯಸಹಾನುಭೂತಿಯ ದೃಷ್ಟಿ ಯಿಂದ ನೋಡಬೇಕಾದದ್ದು ಅಗತ್ಯ. ಬರಿಯ ಮಾನಸಿಕ ಹಿಂಸೆಯೊಂದ ರಿಂದಲೇ ಏಳೇಳು ಜನ್ಮಗಳಲ್ಲಿ ತಾಯಿ ಮಕ್ಕಳಿಬ್ಬರೂ ಪಟ್ಟ ಪಾಡಿನ ಕಥನಕ್ಕೆ ಪಾಪಕಳಾಪಂಡಿತೆಯಾದ ಚಂಡಮಾರಿದೇವತೆಯ ಗುಡಿಯೂ ಹಿಂಸಾರಥಸಮತಿಯಾದ ಮಾರಿದತ್ತ ದೊರೆಯೂ ಬಲಿಗೆ ಒಡ್ಡಿದ ಜೀವ ರಾಶಿಗಳೂ ಹಿನ್ನೆಲೆಯಾಗಿವೆ. ಅಳಲ ಪಾಡಿನ ಕೊರಗು ಕಥೆಯ ಮುಡಿ ಯಾಗಿ ಬರುವ ಅಕಂಪನ ಗುರುಗಳ ಮಾತಿನ ಸೊದೆ ಬೆಂದೊಡಲಿಗೆ

ತಂಪೆರೆಯುತ್ತದೆ. ಜೈನ ಧರ್ಮದ ಹಿರಿಯ ತತ್ವಗಳ ತಿರುಳೂ ಹುರುಳೂ ಕಿರಿದರಲ್ಲಿ ಅಡಕವಾಗಿ, ಅವರ ಸರಳ ಸುಲಭಬೋಧೆ ಮನಮುಟ್ಟುತ್ತದೆ.

ಅಮೃತಮತಿಯ ಪ್ರಣಯ : ಅಮೃತಮತಿ ಯಶೋಧರ ಭೂಪಾಲನ ಏಕ ಮಾತ್ರ ಪತ್ನಿ ; ಅವನ ಮನಃಪ್ರಿಯೆ[1] ದೊರೆಯ ಮೀಸಲಳಿಯದ ಒಲವು ಅವಳದು. ಒಳಗಿನೊಲುಮೆಯ ಜತೆಗೆ ಹೊರಗಿನ ಚೆಲುವೂ ಇತ್ತು ದೊರೆಗೆ 'ನೋಡುವ ಕಣ್‌ಗಳ ಸಿರಿ' ಯಶೋಧರ. ತನ್ನ ಅರಸಾಳಿಕೆಯಲ್ಲಿ ದೊರೆಗೆ ಪ್ರೇಮ ವಿಹಾರಕ್ಕೆ ಬಿಡುವಿಲ್ಲವೆಂದಲ್ಲ. ಮನ್ಮಥನು ಬೇಟೆಗಾರನಾಗಿ ಅಮೃತಮತಿಯನ್ನು ದೀವಮಾಡಿ ಯಶೋಧರನನ್ನು ಗೋರಿಗೊಳಿಸಿ ಆಟವಾಡಿಸುತ್ತಿರುತ್ತಾನೆ. ಅಂಥ ಹೃದಯ ಪ್ರಿಯರ ಪರಿಶುದ್ಧ ಪ್ರೇಮಸುಧೆಯಲ್ಲಿಯೂ ವಿಷ ಬೀಳುತ್ತದೆ. ವಿಧಿಯ ವಿಲಾಸಕ್ಕೆ, ಅಣಕವಾಟಕ್ಕೆ ಅದಕ್ಕಿಂತ ತಕ್ಕ ರಂಗ ಬೇರೊಂದು ಬೇಕೆ ? ಕಟ್ಟೊಲುಮೆಯ ರಾಜದಂಪತಿಗಳು ಮೇಲು ಮಚ್ಚಿನಲ್ಲಿ ಮಲಗಿದ್ದರೆ ನಲ್ಸಿಶೆಯ ನಿಶ್ಶಬ್ದತೆಯನ್ನು ಭೇದಿಸಿಕೊಂಡು ನುಣ್‌ದನಿಯೊಂದು ಸುಳಿಯುತ್ತದೆ. ಗಜಶಾಲೆಯ ಮಾವುತನ ಇನಿಗೊರಲಿಂದ ಕೇವಲ ಸ್ವಸಂತೋಷಕ್ಕಾಗಿ ಹೊರಟ ಆ ನುಣ್‌ದನಿ ಯಶೋಧರ ಅಮೃತಮತಿಯರ ತಿಳಿಬಾಳಿನಲ್ಲಿ ಬಿತ್ತಿದ ದುರಂತ ಬೀಜವಾಗುತ್ತದೆ. ರಾಗ ಕಿವಿಮುಟ್ಟಿದೊಡನೆ ರಾಣಿಗೆ ನಿದ್ದೆ ತಿಳಿಯುತ್ತದೆ. ತಿಳಿದೊಡನೆ ಸವಿಸೋಕುತ್ತದೆ. ಸೋಕಿದೊಡನೆ ಮನಸೋಲುತ್ತದೆ. ಗೀತ 'ಮುಟ್ಟಿದ ಮನವನೆ ತೊಟ್ಟನೆ ಪಸಾಯದಾನ' ಕೊಟ್ಟುಬಿಡುತ್ತಾಳೆ[2]. ಎಂದೂ ಕೇಳದ ಆ ಹಾಳು ಹಾಡಿನ ಉಲಿ ಅಂದೂ ಕೇಳದಂತೆ ಏಕೆ ಅರಸಿಗೆ ನಿದ್ದೆ ಬಿಗಿಯಲಿಲ್ಲವೊ ! ಹಣೆಯ ಬರಹ ; ವಿಧಿ. ಕಣ್ಣಾಗಲಿ ಕಿವಿಯಾಗಲಿ ಮೋಹಕ ಸೌಂದರ್ಯದ ಸವಿಸೆಳವಿಗೆ ಸೋಲುವುದು ಸಹಜ. ಆದರೆ,

---

1 'ಜಸಹರ ಚರಿಉ', 'ಯಶಸ್ತಿಲಕ ಚಂಪೂ' ಮೊದಲಾದುವುಗಳ ಪ್ರಕಾರ ಅಮೃತಮತಿ ಪಟ್ಟದರಸಿಯಾದರೂ ಯಶೋಧರನಿಗೆ ತುಂಬಿದ ಅಂತಃಪುರ ಬೇರೆ ಉಂಟು.

2 'ಜಸಹರ ಚರಿಉ', 'ಯಶಸ್ತಿಲಕ' ಮೊದಲಾದುವುಗಳಲ್ಲಿ ಅಮೃತಮತಿ ಗಾನದಿಂದ ಮನಸೋಲುವ ಪ್ರಸ್ತಾಪವಿದ್ದಂತೆ ಕಾಣಲ್ಲ. ಅವಳೂ ಅಷ್ಟವಂಕನೂ ಜಾರಪ್ರೇಮದಲ್ಲಿದ್ದರೆಂಬುದನ್ನು ಮಾತ್ರ ಹೇಳಿದೆ. ಇದರಿಂದ ವಾದಿರಾಜ ಜನ್ನರ ಮಾರ್ಪಾಟಿನ ಮೇಲ್ಮೆ ಕಾಣುತ್ತದೆ.

ಮರುಗಳಿಗೆಯೇ ಎಚ್ಚತ್ತು ತನ್ನ ಅರಿವು ಮರಳದಿದ್ದರೆ, ಚೆದರಿ ಚೆಲ್ಲಿದ ಮನಸ್ಸು ಒಗ್ಗೂಡಿ ಸ್ಥೈರ್ಯ ನಿಲ್ಲದಿದ್ದರೆ, ಆತ್ಮನಾಶವೂ ನಿಶ್ಚಯ. ರೂಪು ಕಾಣದೆ ದನಿ ಮಾತ್ರ ಕೇಳಿ ಮೆಚ್ಚಿದ ನಲ್ಲನಿಗೆ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧವಾಗಿರುವ ಅರಸಿಯ ಸೋಲು ಅಂದಿನ ಅತಿ ನೂತ್ನ ಗೀತದ ನಿರ್ಭರವಮೋಹನ ಶಕ್ತಿಯನ್ನು ಮೆರೆಯುತ್ತದೆಯೋ, ಅಶಿಕ್ಷಿತ ಸತಿಯ ಆತ್ಮ ದೌರ್ಬಲ್ಯವನ್ನು ಸಾರುತ್ತದೆಯೋ ಹೇಳುವುದು ಕಷ್ಟ. ಒಂದು ಗಳಿಗೆಯ ಗಾನಕ್ಕೆ ಬಲಿ ಬೀಳುವಷ್ಟು ಹಗುರವಾಗಿತ್ತೆ ಅವಳ ನಿಡು ಬಾಳಿನೊಲವು? 'ಕೂಡುವ ತೋಳ್ಗಳ ಪುಣ್ಯ'ನ ತೋಳ ತಕ್ಕೆಯ ನೆನವೂ ಒಮ್ಮೆ ಹಿಡಿದು ತಡೆಯದೆ ಹೋಯಿತೆ ಮುಗ್ಧೆಯ ಮುಂಬರಿವ ಮನವನ್ನು? ಒಮ್ಮೆಯಾದರೂ ಒಳತೋಟಿ ಕಾಡಲಿಲ್ಲವೆ ಹೆಣ್ಣೆದೆಯನ್ನು? ಎಷ್ಟು ಹೇಳಿದರೇನು? ವಿಷಮ ಪರೀಕ್ಷೆಯಲ್ಲಿ, ವಿಷಘಳಿಗೆಯಲ್ಲಿ ಮನ ಸೋಲಬಿಟ್ಟಳು ಹೆಣ್ಣು; ಬಿದ್ದವಳು ಮತ್ತೇಳಲಿಲ್ಲ. ಕೆಳದಿ ಕೊಟ್ಟ ನೂತನ ನಲ್ಲನ ಕಹಿರೂಪನ್ನು ಕೇಳಿಯಾದರೂ ಯೋಚಿಸಬಾರದಾಗಿತ್ತೆ ಅಮೃತಮತಿ? ತಾನೆ ಕಣ್ಣಾರ ಕಂಡ ಗಜವೆಡಂಗನ ಭೀಕರ ರೂಪದ ವಿಕರ್ಷಣದಿಂದಲಾದರೂ ಮುನ್ನುಗ್ಗದೆ ನಿಲ್ಲಬಾರದಾಗಿತ್ತೆ? ಕಿವಿಬೇಟ ಕಣ್ಣಬೇಟಕ್ಕಿಂತ ಮೇಲು ಕೈಯಾಗಿ ಬಿಡುತ್ತದೆ. ಕೆಳದಿಯ ಮಾತು ಕೇಳಿದೊಡನೆ ಕಂಬನಿ ಮಿಡಿಯುತ್ತಾಳೆ; ಪುಳಿಂದನ ಕಣೆಗಟ್ಟಿ ನಿಂತ ವನಹರಿಣಿಯಂತೆ ಕ್ಷಣಮಾತ್ರ ಮೈಮರೆಯುತ್ತಾಳೆ; ನಿಜ. ಆದರೆ, ಮರುಗಳಿಗೆಯೇ ಮನಸ್ಸು ಕಲ್ಲುಮಾಡಿಕೊಳ್ಳುತ್ತಾಳೆ. ಕಿವಿಗೆ ನಂಬಿಸಿ ಕಣ್ಣಿಗೆ ಹುಸಿದ ಆ ದ್ರೋಹಿ ವಿಧಿಯಮೇಲಿನ ಸೇಡು ತೀರಿಸಿಕೊಳ್ಳುವುದ ಕ್ಕಾಗಿಯೋ ಎಂಬಂತೆ ಆ ಅಷ್ಟಾವಕ್ರನ ಕೊಂಕುನೋಟವನ್ನೆ ಕಣ್ಸವಿ ಮಾಡಿಕೊಂಡು ನಲಿಯುತ್ತಾಳೆ. ಮೊದಲೆ ಮನದಲ್ಲಿ ರೂಪಿಸಿಕೊಂಡಿದ್ದ ತನ್ನ ನಲ್ಲನ ಮುನ್‌ಚಿತ್ರದ ಮುರಿತದ ಆಘಾತದಿಂದ ಅಧೀರಳಾದ ಹೆಣ್ಣು ಕಣ್‌ಗೆಟ್ಟು, ಗತ್ಯಂತರವಿಲ್ಲದೆ, ತರ್ಕದ ಶರಣು ಹೊಗುತ್ತಾಳೆ. ಕಾರ್ಯ ಸಿದ್ಧಿಯಾದಮೇಲೆ ಕಾರಣದಿಂದ ಫಲವೇನು ಎಂದು ಬುದ್ಧಿಗೆ ಸಮಾಧಾನ ಕೊಡುತ್ತಾಳೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್' ಎಂದು ಮನ್ಮಥನನ್ನು ಮೂದಲಿಸುತ್ತಾಳೆ. ಕೇಳಿಲ್ಲವೆ ಕಾಮಕ್ಕೆ ಕಣ್ಣಿಲ್ಲವೆಂದು!

ಕೆಳಸರಿಯುತ್ತಿರುವವರು ಮತ್ತೆ ಮೇಲೇರುವುದಕ್ಕಿಂತ ಇನ್ನೂ ಕೆಳಜಾರುವುದು ಸುಲಭ. ಮೇಲೇರಬೇಕಾದರೆ ಪ್ರಯತ್ನಬೇಕು. ಕೆಳ ಸರಿಯದೆ ಇದ್ದೆಡೆಯೇ ತಡೆದು ನಿಲ್ಲುವುದಕ್ಕೂ ಕೊಂಚ ಪ್ರಯತ್ನಬೇಕು. ಆದರೆ, ಕೆಳಜಾರುತ್ತ ಹೋಗುವುದಕ್ಕೆ ಯಾವೊಂದು ಪ್ರಯತ್ನವೂ ಬೇಕಾಗಿಲ್ಲ. ಅಯತ್ನವಾಗಿಯೇ ಬೀಳಬಹುದು. ತಪ್ಪುದಾರಿಯಲ್ಲಿ ಒಂದೆರಡು ಹೆಜ್ಜೆ ಮುಂದಿಟ್ಟವರು ತಮ್ಮ ತಪ್ಪರಿತು ಹಿನ್ನಡೆದು ನೇರದಾರಿಗೆ ತಿದ್ದಿಕೊಳ್ಳುವುದಕ್ಕೆ ಸಾಕಷ್ಟು ಶಕ್ತಿಯಿಲ್ಲದೆ ಹೋದಾಗ, ಒಮ್ಮೊಮ್ಮೆ, ತಮ್ಮ ಆತ್ಮದೌರ್ಬಲ್ಯದ ಅರಿವಿನ ಭಾರದ ಪರಿಣಾಮ ವಾಗಿಯೋ ಎಂಬಂತೆ ಕಣ್‌ಗೆಟ್ಟು, ಕಟ್ಟುವರಿದು, ಇಮ್ಮಡಿ ಹುರಿಪಿನಿಂದ ತಪ್ಪುದಾರಿಯಲ್ಲೇ ಮುಂಬರಿವ ಒಂದು ಬಗೆಯ ಸೇಡು, ಮೊಂಡುತನ ಬಂದುಬಿಡುವುದುಂಟು. ಇಳಿಯ ಮುಳುಗಿದವರಿಗೆ ಚಳಿಯೇನು ಮಳೆಯೇನು !

ಅಷ್ಟವಂಕನ ಅಸಹ್ಯವಿಕಾರಕ್ಕೆ ಮೊದಲ ನೋಟದಲ್ಲಿಯೆ ಹೇಸದ ಅರಸಿ ಅವನ ಹಲವಿರುಳ ಕೂಟದಿಂದ ಜುಗುಪ್ಸೆಗೊಳ್ಳುವುದು ಅಸಾಧ್ಯದ ಮಾತು. 'ಬೇವನ್ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ' ಅಮೃತ ಮತಿಗೆ ಆ ವಿಕಟಾಂಗನ ಕೂಟದಿಂದ ಬರುಬರುತ್ತ ಅರಸನಲ್ಲಿ ಒಲವು ಬತ್ತುತ್ತದೆ. ಅರಸನು ಅವಳ ಪಾಲಿಗೆ ಪಾತಕನಾಗುತ್ತಾನೆ. ತೊನ್ನ ಬಡಿಕನು ತೋರಮುಡಿ ಹಿಡಿದೆಳೆದು ತೀಡುವ ಬಾರಿನೇಟು ಸುಕುಮಾ ರಿಯ ಎಳಮೈಗೆ ಹೂವಿಗಿಂತ ಮೃದುವಾಗಿರುತ್ತದೆ. ಆದರೂ, ಅಮೃತ ಮತಿಗೆ ಗಂಡನಲ್ಲಿ ಪ್ರೀತಿ ಹೋಗಿದ್ದರೂ ಇನ್ನೂ ದ್ವೇಷ ಹುಟ್ಟಿರುವುದಿಲ್ಲ. ಯಾವಾಗ ಹೋದಿರುಳಿನ ಕಿತ್ತಡವನ್ನು ಕೊಂಕುನುಡಿಗಳಿಂದ ಅರಸನು ತೆಗೆದು ಮೂದಲಿಸಿದನೋ ಆವಾಗ ದ್ವೇಷವೂ ಅರಸಿಯ ಮನವನ್ನು ಹೊಗುತ್ತದೆ. ತಪಕ್ಕೆ ನಡೆದ ಗಂಡನೊಡನೆ ತಾನೂ ನಡೆಯದೆ ಹಿಂದೆ ಮನೆಯಲ್ಲೇ ಉಳಿದುಕೊಂಡರೆ ಬರುವ ಜನನಿಂದೆಯ ಭೀತಿ ಬೇರೆ ಸೇರಿಕೊಳ್ಳುತ್ತದೆ ಈ ದ್ವೇಷದ ಜತೆಗೆ. ಹೀಗೆ ಹುರಿಗೊಂಡ ಈ ಎರಡೂ ಮನಃಕಷಾಯಗಳ ಅಲೆತದಿಂದ ಕೋಟಲೆಗೊಂಡು ದಿಕ್ಕುಗೆಟ್ಟ ಹೆಣ್ಣು ಕಲ್ಲೆದೆಯಾಗಿ ಕೊಲೆಗೂ ಸಿದ್ಧವಾಗುತ್ತಾಳೆ; ನಂಜಿಟ್ಟು ಗಂಡನನ್ನೂ ಅತ್ತೆಯನ್ನೂ ತೀರಿಸಿಬಿಡುತ್ತಾಳೆ. ಇನ್ನುಮುಂದೆ ಅರಮನೆಯಲ್ಲಿ

ಪತಿ ಯಶೋಧರನ ಹಂಸತೂಲಿಕಾತಲ್ಪ ಜಾರ ಅಷ್ಟವಂಕನಿಗೆ ಬಿಡು ವಾಗುತ್ತದೆ. ವಿಷಯಮಗ್ನಳಾದ ರಾಣಿಯ ನಾಲಗೆ ಮೆಲ್ಲಗೆ ಕಳ್ಳು ಬಾಡುಗಳ ಸವಿಗೂ ಸೋಲುತ್ತದೆ. ಮೈ ತೊನ್ನು ಹಿಡಿದು ಹುಳಿತರೂ ಕೊನೆಯವರೆಗೂ ಅಷ್ಟವಂಕನನ್ನು ಬಿಡದೆ ಕಟ್ಟಿಕೊಂಡು ಸಾಯುತ್ತಾಳೆ. ಮನ್ಮಥನಂಥ ಗಂಡನನ್ನೂ ಅಮೃತದಂಥ ಅತ್ತೆಯನ್ನೂ ಕೊಂದು ತೊನ್ನನ ಕೂಟದಲ್ಲಿರುವ ಅರಸಿಯ ಗುಟ್ಟು ಬಯಲಾಗಿ ಎಲ್ಲರ ಬಾಯಿಗೂ ಬರುತ್ತದೆ. 'ಈ ಕಿಸುಗುಳಿಯನ್ ಜವನುಮುಯ್ಯಲೇನ್ ಪೇಸಿದನೋ', 'ಪಾಪಂ ತಿನ್ನದು, ಪಾತಕಿ ಪುಟಿತೊಡಲ್ಲದೇನ್ ಸತ್ತಪಳೆ', 'ಇದೇನ್ ನಾಯಕನರಕಮೀಕೆಗೊಚ್ಚತಮಾಯ್ತೊ' ಎಂದು ಮುಂತಾಗಿ ತೊತ್ತಿಗರೆಲ್ಲರೂ ಭಯವಿಲ್ಲದೆ ಬಾಯಿಗೆ ಬಂದಂತೆ ಆಡಿ ಕೊಳ್ಳುವಷ್ಟು ಹಗುರವಾಗಿಬಿಡುತ್ತಾಳೆ ಯಶೋಧರನ ಪಟ್ಟದ ರಾಣಿ. ಕೊನೆಗೆ ಸಾಯುದೆಯೇ ಸತ್ತು ನರಕದಲ್ಲಿ ನರಳುತ್ತಾಳೆ. ಹೀಗೆ ಅಮೃತ ಮತಿಯಲ್ಲಿ ಒಂದು ರಾಜವ್ಯಕ್ತಿಯ ಅನುಕ್ರಮವಾದ ಅವಕರ್ಷವೂ ಪತನವೂ ಚಿತ್ರಿತವಾಗಿರುವುದನ್ನು ನೋಡಬಹದು.

ಮಿಕ್ಕ ಹಲವು ಕವಿಗಳು ಮೊದಲಿನಿಂದಲೂ ಅಮೃತಮತಿಯ ವಿಷಯ ಬಂದಾಗಲೆಲ್ಲ ಪಾತಕಿ, ಹೀನೆ, ಪಾಪಿಷ್ಠೆ, ವಿಷಮತಿ ಮೊದ ಲಾದ ವಿಶೇಷಣಗಳನ್ನೇ ತಡೆಬಡೆಯಿಲ್ಲದೆ ಪ್ರಯೋಗಿಸಿದ್ದಾರೆ. ಜನ್ನನೂ ಕೊನೆಕೊನೆಗೆ ಪಾದರಿ, ಪಾಣ್ಬೆ ಮೊದಲಾದ ಮಾತುಗಳನ್ನು ಬಳಸಿ ದ್ದಾನೆ. 'ಅವಳಣಕಕ್ಕೆ ಸವಣನುಂ ಸೈರಿಪನೆ' ಎಂದು ಯಶೋಧರನ ಚುಚ್ಚುನುಡಿಯ ಮೂದಲಿಕೆಯನ್ನು ಸಮರ್ಥಿಸಿದ್ದಾನೆ. ಆದರೂ ಆ ಮಾತುಗಳ ಬಳಕೆಯಲ್ಲಿ ಜನ್ನನ ಗಮನವಿದ್ದದ್ದು ಹೆಚ್ಚಾಗಿ ಅವುಗಳ ಮೂಲ ಅರ್ಥದ ಕಡೆಗೇ ಹೊರತು, ಉದ್ರೇಕ ಆಕ್ರೋಶ ತಿರಸ್ಕಾರಗಳ ಕಡೆಗಲ್ಲವೆಂದು ತೋರುತ್ತದೆ. ಅಮೃತಮತಿಯನ್ನು ಬಲುಪಾಲು ದೇವಿ, ಅರಸಿ ಎಂದು ಗೌರವದಿಂದಲೋ ಪೆಣ್ ಎಂದು ಮರುಕ ದಿಂದಲೊ ಕರೆದಿದ್ದಾನೆ. ಒಳಸೋತು ಜಾರಿದ ಹೆಣ್ಣನ್ನು ಅತಿನೊತ್ನ ಗೀತಪಾತನ ವಿಕಲಸ್ವಾಂತೆ ಎಂದು ಅರ್ಥಮಾಡಿಕೊಳ್ಳಹೋಗಿದ್ದಾನೆ. ಎಂದರೆ, ಅಮೃತಮತಿಯ ಪಾಪವನ್ನು ಉಪೇಕ್ಷೆಯಿಂದಾಗಲಿ ಲಾಘವ ದಿಂದಾಗಲಿ ಕಾಣುತ್ತಾನೆಂದಲ್ಲ. ದೋಷಖಂಡನೆಯ ಜತೆಗೆ, ಸೋತ

ಹೆಣ್ಣಿಗೆ ಸಹಾನುಭೂತಿಯನ್ನೂ ತೋರಿಸುವಂತೆ ಕಾಣುತ್ತದೆ. ದುರ್ಧರ ಸನ್ನಿವೇಶಕ್ಕೆ ಸಿಕ್ಕಿ ಹೃದಯದೌರ್ಬಲ್ಯದಿಂದ ಪತಿತರಾದವರನ್ನು ಕೇವಲ ಧರ್ಮದ ಪೀಠದಮೇಲೆ ಸುಖವಾಗಿ ಮಂಡಿಸಿ ಸುಗುಣೋನ್ಮತ್ತರಾಗಿ ಪ್ರತಿಷ್ಠೆಯಿಂದ ಜರೆದು ಧಿಕ್ಕರಿಸುವುದು ಕಷ್ಟವೇನೂ ಅಲ್ಲ. ಮಾನವ ದೌರ್ಬಲ್ಯಗಳನ್ನು ಅನುಕಂಪೆಯಿಂದ ಅರಿತು ಮನುಷ್ಯನಿಗೆ ಮರುಗು ವುದು ಕಷ್ಟ. ಜನ್ನನ ಮನಸ್ಸು ತನಗೇ ತಿಳಿಯದಂತೆ ಈ ಸಾಹಸಕ್ಕೆ ಎಳಸಿದಂತೆ ತೋರುತ್ತದೆ. 'ಪೆಣ್ ತಪ್ಪಿ ನಡೆಯೆ' ಕವಿಮನಸ್ಸು ಕನಲು ವುದಕ್ಕಿಂತ ಕೊರಗುತ್ತದೆ, ಕರಗುತ್ತದೆ. 'ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ'—ಒಟ್ಟಿನಲ್ಲಿ ಅಮೃತಮತಿಯ ವರ್ತನೆಯ ವಿಷಯದಲ್ಲಿ ಜನ್ನನ ದೃಷ್ಟಿ ಇದೇ ಎಂದು ತೋರುತ್ತದೆ.

ಯಶೋಧರ : ಯಶೋಧರನಿಗೆ ಮನುಷ್ಯ ಬಯಸಬಹುದಾದ ಸಮಸ್ತ ಸೌಭಾಗ್ಯವೂ ಇದೆ. ರೂಪು, ಯೌವನ, ಮೆಚ್ಚಿನ ಮಡದಿ, ರಾಜ್ಯಾಧಿಪತ್ಯ, ಸಂಪತ್ತು, ಕೀರ್ತಿ—ಎಲ್ಲವೂ ಅವನ ಪಾಲಿಗಿದೆ. ಇಷ್ಟಾದರೂ ಅವನ ಬಾಳು ರೌದ್ರಮಯವಾಗಿ ದುರಂತದಲ್ಲಿ ಮುಗಿಯು ತ್ತದೆ. ಅಮೃತಮತಿಯ ಮುಖದರ್ಪಣದಲ್ಲಿ ಯೌವನ ಭೂಷಾವಳಿ ಯನ್ನು ತಿದ್ದುವುದೇ ನೃಪಕುಲಶೇಖರನಿಗೆ ಭೋಗ, ವಿಲಾಸ, ವಿಹಾರ. ಅರಸಿಯಲ್ಲಿ ಯಶೋಧರನಿಗೆ ಇದ್ದ ನಣ್ಪು ಬರಿಯ ವ್ಯಾಮೋಹವಲ್ಲ; ತಿಳಿಯಾದ ಹಣ್ಣಾದ ಪ್ರೇಮ, ಮೀಸಲಳಿಯದ ಪರಿಶುದ್ಧ ದಾಂಪತ್ಯ ಪ್ರೇಮ. ಇಂಥ ಪ್ರೇಮವೂ ಪಲ್ಲಟಿಸಿಹೋಗುತ್ತದೆ. ಅಷ್ಟವಂಕ ಅಮೃತಮತಿಯರ ಪ್ರಣಯ ಪ್ರಸಂಗವನ್ನು ಕಣ್ಣಾರ ಕಂಡು, 'ನೀನುಟಿ ದೊಡೆ ಸಾವವಳ್; ಎನಗೆ ಮಿಕ್ಕ ಗಂಡರ್ ಸವಸೋದರರ್' ಎಂದು ರಾಣಿ ಬದಗನಿಗೆ ತಿಳಿಸುವ ನಂಬುಗೆಯ ನುಡಿಗಳನ್ನು ಕಿವಿಯಾರ ಕೇಳಿ ಅರಸನಿಗೆ ರೋಷಕ್ಕಿಂತಲೂ ಹೆಚ್ಚಾಗಿ ಜುಗುಪ್ಸೆ ಹುಟ್ಟಿರಬೇಕು. ಇಬ್ಬರನ್ನೂ ಸೀಳಿಹಾಕಿಬಿಡಬೇಕೆಂದು ಬಾಳು ನಿಮಿರಿ ತೋಳು ತೂಗಿ ಮನ ಕನಲಿದರೂ ಮರುಕ್ಷಣವೇ ಧೃತಿಗೊಳ್ಳುತ್ತಾನೆ. ಹುಳುಕರನ್ನು ಹೊಡೆಯಲೊಲ್ಲದೆ ಹೇಸಿ ಹಿಂದಿರುಗುತ್ತಾನೆ. ಮನೆಮೆಚ್ಚಿನ ಮಡದಿಯ ಘೋರ ದ್ರೋಹವನ್ನು ಕಂಡು ಬಾಳು ಬೇಸರವಾಗುತ್ತದೆ. ಹೆಣ್ಣು

ತಪ್ಪಿ ನಡೆದರೆ ಏನು ಮಾಡಬೇಕು? ಒಲವಿನ ಕೊಲೆಗೆ ಮದ್ದು ಒಡಲ ಕೊಲೆಯೇ? ತನ್ನೊಡನೆ ಮೈಯೆರಡು ಉಸಿರೊಂದಾಗಿ ಕೂಡಿ ಬಾಳಿದ ಹೆಣ್ಣನ್ನು ಹೆರತೋಳಿನಲ್ಲಿ ಕಂಡು, ಕನಲಿ ಕೊಲ್ಲದೆ, ಆ ಹದನಕ್ಕೆ ಹೇಸಿ, ತಪ್ಪಿ ನಡೆದ ಆ ಹೆಣ್ಣುಜೀವಕ್ಕೆ ಮರುಗುವ, ತನ್ನ ಜೀವಸ್ವರೂಪವೇ ಸೂರೆಹೋದಾಗಲೂ ಕದಲದ, ಜಾರದೆ, ತಾಳ್ಮೆಗೊಂಡ ಯಶೋಧರನ ಸಂಯಮ ದೊಡ್ಡದು. ಅರಸನ ಅಂದಿನ ನಡತೆಯನ್ನು ಬೇರೊಂದು ಬಗೆಯಾಗಿಯೂ ಅರ್ಥಮಾಡಿಕೊಳ್ಳಬಹುದು. ತನ್ನಲ್ಲಿ ಒಲವಿಂಗಿ ಬೇರೆಡೆ ಒಲವುಂಡು ಅಡ್ಡದಾರಿ ಹಿಡಿದ ಹೆಣ್ಣನ್ನು ಕೊಂದರೆ ತಾನೆ ಏನು ಬಂತು? ಕೊರಳಿಗೆ ಕೊಲೆ ಕಟ್ಟಿತೇ ಹೊರತು ಮನಕ್ಕೆ ನೆಮ್ಮದಿಯೆ? ಅವಳ ಒಡಲನ್ನು ತೀರಿಸಿದಂತಾಯಿತೇ ಹೊರತು ಒಲವನ್ನು ತಿದ್ದಿದಂತಾಯಿತೆ? ಒಲ್ಲದ ನಲ್ಲಳ ಒಲವನ್ನು ತನ್ನೆಡೆಗೆ ಮರಳಿಸಿದಂತಾಯಿತೆ? ಮೀಸಲಳಿದ ಎಂಜಲೊಲುಮೆ ಮರಳಿತಾದರೂ ಅದು ಸವಿಯೆ? ಬೇರಾದ ಬಗೆ ಬೆಸೆಯುವುದುಂಟೆ? ಮಡದಿಯ ಮನದ ಒಲುಮೆಗೆ ಒಡೆತನ ಕಳೆದುಕೊಂಡವನು ಅವಳ ಒಡಲಿಗೆ ಒಡೆತನ ಸಾಧಿಸಿ ಫಲವೇನು? ಅಂತೂ ಅಮೃತಮತಿಯ ಚರ್ಯೆ ಕಂಡು ಯಶೋಧರನಿಗೆ ಮನವೊಡೆದುಹೋಗುತ್ತದೆ. ಬೇಸರದಿಂದಲೊ ಹೇಸಿಗೆಯಿಂದಲೊ ನಿರ್ವೇಗದಿಂದಲೊ ಉದಾಸೀನತೆಯಿಂದಲೊ—ಇಲ್ಲವೆ ಈ ಎಲ್ಲವುಗಳಿಂದಲೂ—ಒಂದು ಬಗೆಯ ಉದಾರ ಬುದ್ಧಿ ಬಂದು ಹೆಣ್ಣನ್ನು, ಅವಳ ಪಾಡು ಅವಳದು ಎಂದುಕೊಂಡು, ಆ ಇರುಳೇನೊ ಕೊಲ್ಲದೆ ಬಿಟ್ಟು ಬಿಡುತ್ತಾನೆ. ಆದರೆ, ಆ ಔದಾರ್ಯದಲ್ಲಿ ಕೊಂಚ ಕೊರತೆಯಿದೆ. ಮಾರನೆಯ ಬೆಳಗ್ಗೆ ಮೂದಲಿಕೆಯ ನುಡಿಗಳು ತನ್ನನ್ನೇ ಮೀರಿ ಬಾಯಿ ತಪ್ಪಿ ಬಂದುಬಿಡುತ್ತವೆ. ' ಅವಳಣಕಕ್ಕೆ ಸವಣನುಂ ಸೈರಿಪನೆ ' ಎಂದು ಕವಿ ಹೇಳಿದ್ದರೂ, ದೊರೆ ನೋಯಿಸುವುದಕ್ಕೆ ಇಷ್ಟವಿದ್ದು ಹೊಡೆಯುವುದಕ್ಕೆ ಹೆದರಿದವನಂತೆ ಆಡುತ್ತಾನೆ. ಆದರೂ, ಯಶೋಧರನು ಉದ್ದಕ್ಕೂ ಔನ್ನತ್ಯ, ಔದಾರ್ಯ, ಗಾಂಭೀರ್ಯ, ಸಂಯಮಗಳಿಂದಲೇ ವರ್ತಿಸುತ್ತಾನೆ ಎನ್ನಬೇಕು. ತನ್ನ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಮಾತ್ರವಲ್ಲದೆ, ಮಡದಿಯ ಮಾನ ಕಳೆಯದಿರುವುದಕ್ಕಾಗಿಯೂ ದೊರೆ ತನ್ನ ನಿರ್ವೇಗಕ್ಕೆ ಕನಸಿನ ನೆವ ತೆಗೆದು

ಹಡೆದ ತಾಯಿಗೆ ಸುಳ್ಳು ಹೇಳುತ್ತಾನೆ. ಅಲ್ಲದೆ, ಈ ಅಪಮಾನಕ್ಕೆ ಹೇಗೆ ಬಾಯಿಕೊಡುವುದು? ಯಾರಿಗೆ ಹೇಳಿಕೊಳ್ಳಬಹುದು? ನಲ್ಲೆಣಿಕೆಯಿಂದ ನುಡಿದ ಆ ಮರೆನುಡಿಯೇ ಪಾಪಬೀಜವಾಗಿ ಬಿಡುತ್ತದೆ. 'ವಂಚನೆಯೆಲ್ಲಿಯುಮೊಳ್ಪು ಮಾಡಲಾಱದು ಕಡೆಯೊಳ್' ಎಂಬ ಸತ್ಯ ಕೆಟ್ಟಮೇಲೆ ಹೊಳೆಯುತ್ತದೆ. ತಾಯಿ ತಪ್ಪು ತಿಳಿದುಕೊಂಡು ಬಲಿಯ ಪ್ರಸಂಗವನ್ನು ತಂದೊಡ್ಡಿದಾಗ ಕೂಡ ಹಿಮ್ಮೆಟ್ಟಲು ಧೈರ್ಯ ಸಾಲದೆಯೊ ಮನ ಬಾರದೆಯೊ ನಿಜವನ್ನು ಮರಸಿಯೇ ಬಿಡುತ್ತಾನೆ. ಮಾನಸಿಕ ಹಿಂಸೆಯೂ ಪಾಪವೆಂದು ಅರಿತಿದ್ದರೂ ಗತ್ಯಂತರವಿಲ್ಲದೆ ಕಣ್‌ಗೆಟ್ಟು ಪಾಪಕ್ಕೆ ಬೀಳುತ್ತಾನೆ. 'ಮೇಗಂ ಬಗೆವೊಡೆ ವಧೆ ಹಿತಮಾಗದು ಮರ್ತ್ಯಂಗೆ', 'ಜೀವದಯೆ ಜೈನ ಧರ್ಮಂ', 'ಮಾಡಿದೊಡೆನ್ನೊಂದು ಗತಿಗೆ ಕೇಡು' ಎಂದು ತಿಳಿದಿದ್ದರೂ ಇರುಳು ಕಂಡ ಬಾವಿಗೆ ಹಗಲು ಬಿದ್ದಂತೆ 'ಶಾಂತಮನ'ನಾದ ಯಶೋಧರನು 'ತಮಮನಪ್ಪುಕಯ್ದನ್' ತಾಯ ಮೋಹದಿಂದ. ಹಿಟ್ಟಿನ ಕೋಳಿಯ ತಲೆ ನಿಜವಾಗಿ ಕೂಗಲಿ ಬಿಡಲಿ; ಅದರ ತಲೆ ಚಿಗಿದೊಡನೆ ಯಶೋಧರನ ಆತ್ಮಸಾಕ್ಷಿ ಕೆರಳಿ ಒಳಗಿನ ನೋವಿನ ದನಿ ಹೊರಗಿವಿಗೆ ಕೇಳಿಸಿದಂತಾಗಿರಬೇಕು. 'ಅಮೃತಮತಿಯೆಂಬ ಪಾತಕಿಯ ಮಾಯೆ ಬನಮಾಯ್ತು, ಚಂದ್ರಮತಿ ಮಾತೆಯ ಮಾತೆಮಗೆ ಬಲೆಯಾಯ್ತು, ಹಿಂಸನಮಮೋಘ ಶರವಾಯ್ತು, ಕೆಡೆದುದಾತ್ಮ ಕುರಂಗಂ' ಎಂದು 'ಮನಂ ಮರುಗುವಿನಂ' ನೋಯುವ ದೊರೆಯ ಇರವನ್ನು ಕಂಡು ಮರುಗದೆ ಇರುವುದಕ್ಕಾದೀತೆ? ಮನ ಒಡೆದುಹೋಗಿದೆ; ಮನೆಯನ್ನು ತೊರೆದುಹೋಗುವುದರಲ್ಲಿದ್ದಾನೆ. ಆಗಲೂ ತನಗೆ ತಪ್ಪಿದ ಹೆಣ್ಣಿನಮೇಲೆ ಒಂದು ಬಗೆಯ ಮರುಕವಿದ್ದೇ ಇದೆ. ಹೆಣ್ಣ ಮನವನ್ನು ನೋಯಿಸಲೊಲ್ಲದೆ ಕೊನೆಯಾತಣಕ್ಕೆ ಒಪ್ಪುತ್ತಾನೆ. ಅವನ ಆ ಒಳ್ಳೆಯ ಗುಣವೇ ಅವನ ಮೃತ್ಯುವಾಗಿ ಬಿಡುತ್ತದೆ. ಜನ್ಮ ಜನ್ಮಗಳು ತೊಳಲಿ ಬಳಲಿ, ನೊಂದು ನವೆದು, ಕೊನೆಗೆ ಬಿಡುಗಡೆ ಕಾಣುತ್ತಾನೆ.

ಹಿಂಸೆ, ಪಾಪ: ಮನುಷ್ಯನಲ್ಲಿರುವ ಹಿಂಸನಪ್ರವೃತ್ತಿಯೇ, ಒಂದು ದೃಷ್ಟಿಯಲ್ಲಿ, ಅವನ ಸರ್ವ ಪಾಪಗಳಿಗೂ ಮೂಲಕಾರಣವೆನ್ನಬಹುದು. ತನ್ನ ಪ್ರತಿಯೊಂದು ನಡೆ ನುಡಿ ನೆನವಿನಲ್ಲಿಯೂ ಸರ್ವಭೂತಹಿತಕ್ಕೆ

ಸಂಪೂರ್ಣ ಗಮನಕೊಡುವವನು ಪಾಪಕ್ಕೆ ಬೀಳಲಾರನು. 'ದಯವೇ ಧರ್ಮಕ್ಕೆ ಮೂಲ' ಎಂಬ ವಚನ ಅಕ್ಷರಶಃ ನಿಜ. 'ಭಲರೆ! ನೃಪೇಂದ್ರಾ ದಯೆಯೊಳ್ ನೆಲೆಗೊಳಿಸಿದೆ ಮನಮನ್ . . . ಧರ್ಮಪಥದೊಳ್ ಸಲೆಸಂದಪೆ' ಎಂದು ಅಭಯರುಚಿ ಮಾರಿದತ್ತನಿಗೆ ಅಭಯ ನುಡಿಯುವುದು ಈ ಧೈರ್ಯದಿಂದಲೇ. ಕೇಡೆಸಗುವ ಬುದ್ಧಿ ಕೊಂಚವೂ ಇಲ್ಲದಾಗ ಹಿಂಸಾಪ್ರವೃತ್ತಿಯೇ ಇರುವುದಿಲ್ಲ. ಹಿಂಸಾಪ್ರವೃತ್ತಿಯ ನಿರ್ಮೂಲನವೇ ಅಹಿಂಸಾಧರ್ಮ. ಜೀವದಯೆ ಅಥವಾ ಅಹಿಂಸೆ ಪ್ರಪಂಚದ ಎಲ್ಲಾ ಧರ್ಮಗಳಲ್ಲಿಯೂ ಒಂದು ಮುಖ್ಯ ತತ್ವವಾಗಿದ್ದರೂ, ಜೈನ ಧರ್ಮಕ್ಕೆ ಅದು ಮೊದಲು ಮತ್ತು ಮೂಲಾಧಾರ. ಅಹಿಂಸೆ ಅಥವಾ ಪಾಪ ಎರಡು ತೆರನಾಗಿರಬಹುದು : ಮಾನಸಿಕ, ಕಾಯಿಕ. ಮಾನಸಿಕ ಹಿಂಸೆಯಿಂದ ತನಗೆ ಕೇಡು. ಕಾಯಿಕ ಹಿಂಸೆಯಿಂದ ತನಗೂ ಇತರರಿಗೂ ಕೇಡು. ಅಂತೂ, ಹಿಂಸೆ ಮಾನಸಿಕವಾಗಲಿ ಕಾಯಿಕವಾಗಲಿ ಆತ್ಮನಾಶವೇನೋ ನಿಶ್ಚಯ. ಎಷ್ಟೋವೇಳೆ, ಒಂದು ಕೃತ್ಯ ಪಾಪವಾಗುವುದೂ ಪುಣ್ಯವಾಗುವುದೂ ಆ ಕೃತ್ಯದ ಹಿಂದಿರುವ ಭಾವನೆಯಿಂದ, ಮನೋಧರ್ಮದಿಂದ. ಅಜ್ಞಾನದಿಂದ, ಅದೇ ಧರ್ಮವೆಂಬ ಮೂಢ ಭಾವನೆಯಿಂದ ಹಿಂಸೆ ನಡೆಯಬಹುದು—ಮಾರಿದತ್ತನಲ್ಲಿಯಂತೆ. ಪಾಪವೆಂದುತಿಳಿದು ತಿಳಿದೂ ನಡೆಯಬಹುದು—ಯಶೋಧರನಲ್ಲಿಯಂತೆ. ಅಜ್ಞಾನ ಅಥವಾ ಮೂಢಭಾವನೆ ಕಾರಣವಾಗಿದ್ದರೆ ಜ್ಞಾನೋದಯವಾಗಿ ಎಚ್ಚೆತ್ತುಕೊಳ್ಳುವುದು ಒಂದು ಬಗೆಯಲ್ಲಿ ಸುಲಭ— 'ಕಲಿಯನ್ ಮೂದಲಿಸಿದಂತೆ ದೇವನೆಯಾದ,' 'ಹಿಂಸಾರಭಸಮತಿ' ಯಾಗಿದ್ದ ಮಾರಿದತ್ತನ ಪರಿವರ್ತನವೇ ಸಾಕ್ಷಿ. ಜ್ಞಾನವಿದ್ದರೂ ಬಲವಿಲ್ಲದೆ ಬಲಿಬಿದ್ದರೆ ಪ್ರಾಯಶ್ಚಿತ್ತ ಬಹು ಕಠಿನ—ತಾಯೊಡಗೂಡಿ ಏಳೇಳು ಜನ್ಮ ತೊಳಲಿದ ಯಶೋಧರನ ಪಾಡೇ ಸಾಕ್ಷಿ. ಅಂತೂ, ಒಂದು ಬಗೆಯಿಂದಲ್ಲದಿದ್ದರೆ ಮತ್ತೊಂದು ಬಗೆಯಿಂದ, ಬೇಗ ಅಲ್ಲದಿದ್ದರೆ ತಡೆದಾದರೂ, ಅಹಿಂಸೆಯನ್ನು ಸಾಧಿಸಿದ ಹೊರತು ಮನುಷ್ಯನಿಗೆ ಮುಕ್ತಿಯಿದ್ದಂತೆ ತೋರಲಿಲ್ಲ.

ವ್ಯಕ್ತಿಯ ಆತ್ಮಪರಿಪಾಕ ಬೇಗನೆ, ಸುಲಭವಾಗಿ, ಆಗಬಹುದು. ಜನತೆಯ ಆತ್ಮ ಎಚ್ಚರಬೇಕಾದರೆ ಕಷ್ಟ, ಕಾಲ ಹಿಡಿಯುತ್ತದೆ.

ರಕ್ತ ಮಾಂಸ ಪೂಜೆಯಿಂದ ಕುಂಕುಮ ಕುಸುಮ ಪೂಜೆಗೆ ಜನತೆ ತಿದ್ದಿ ತಿರುಗಬೇಕಾದರೆ ಎಷ್ಟು ಕಾಲ ಹಿಡಿದಿರಬೇಕು ? ಎಷ್ಟು ಸಾಧನೆ ನಡೆದಿರಬೇಕು ? ಉಗ್ರಭೈರವರೂ ರುದ್ರಶೂಲಿಯರೂ ಶಿವಶಂಕರರಾಗಿ, ಚಂಡಿಚಾಮುಂಡಿಯರೂ ದುರ್ಗಿಕಾಳಿಯರೂ ಶಿವೆ ಮಂಗಳೆಯರಾಗಿ ಪರಿಣಮಿಸಬೇಕಾದರೆ ಎಷ್ಟು ಯುಗಗಳು ಮರಳಿದುವೊ, ಲೋಕ ಎಷ್ಟು ಯಾತನೆ ಸಂಕಟಗಳನ್ನು ಅನುಭವಿಸಿತೊ, ಎಷ್ಟು ಹುತಾತ್ಮ ರನ್ನು ಬಲಿಕೊಟ್ಟಿತೊ ಬಲ್ಲವರು ಯಾರು ? ಚಂಡಮಾರಿದೇವತೆಯ ಪಾಷಾಣಹೃದಯ ಮೃದುವಾಗಬೇಕಾದರೆ ಅನಾದಿಕಾಲದಿಂದ ಬಸಿದ ಅನಂತ ಜೀವಿಗಳ ಬಿಸಿ ರಕ್ತದ ಕೋಡಿ ಹರಿಯಬೇಕಾಯಿತು ; ಕಲ್ಲೆದೆ ಕರಗಬೇಕಾದರೆ ಮಹಾರಾಜ ಯಶೋಧರ ಮಹಾನುಭಾವನ ಏಳು ಜನ್ಮಗಳ ಪಾಡು ನೋವುಗಳ ಕಥಾಮೃತವನ್ನು ಸುದತ್ತಾಚಾರ್ಯರ ಗುರುಪ್ರಸಾದ ಸುಧೆಯೊಡನೆ ಬೆರಸಿ ಎರೆಯಬೇಕಾಯಿತು. ಮಾನವನ ಅಧ್ಯಾತ್ಮ ಚರಿತ್ರೆಯೆಲ್ಲ ಹಿಂಸೆಯಿಂದ ಅಹಿಂಸೆಗೆ, ರಕ್ತದಾಹ ಕ್ರೌರ್ಯ ದಿಂದ ಶಾಂತಿ ಪ್ರೇಮಗಳಿಗೆ ತಿರುಗಿದ, ತಿರುಗುತ್ತಿರುವ, ಆತ್ಮಪರಿವರ್ತ ನದ ಪರಿಪಾಕದ ಕಥೆಯೇ ಆಗಿದೆ.

ಪಾಪಕ್ಕೆ ಪ್ರಾಯಶ್ಚಿತ್ತವೇನೋ ತಪ್ಪದು. ಆದರೆ, ಯಾವ ಪಾಪಕ್ಕೆ ಎಷ್ಟು ಪಾಪಕ್ಕೆ, ಯಾವ ಪ್ರಾಯಶ್ಚಿತ್ತ, ಎಷ್ಟು ಪ್ರಾಯಶ್ಚಿತ್ತ ? ಎಂದಿನ ಪಾಪಕ್ಕೆ ಎಂದು ಪ್ರಾಯಶ್ಚಿತ್ತ ? ಪ್ರಾಯಶ್ಚಿತ್ತಕ್ಕೆ ಕೊನೆ ಮೊದಲು ಉಂಟೆ ? ವ್ಯಕ್ತಿಯ ಅಥವಾ ಜನತೆಯ ಜೀವನದಲ್ಲಿ ಎಲ್ಲೋ ಎಂದೋ ಅರಿವಿಲ್ಲದೆ ಎಚ್ಚರವಿಲ್ಲದೆ ಇಟ್ಟ ಒಂದು ತಪ್ಪು ಹೆಜ್ಜೆಯ ಫಲ ವಾಗಿ ಅನಂತವಾಗಿ ' ಕರ್ಮಮೀಪರಿ ಮಱುಗೆ ಮಱುಯಿಕ್ಕು'ತ್ತ ಹೋದರೆ ಮನುಷ್ಯನಿಗೆ ಮುಕ್ತಿ ಎಲ್ಲಿ, ಎಂದು ? ಮಾಡಿದ ತಪ್ಪಿಗೆ ಉಂಡು ನೋಯ ಬೇಕು, ನೊಂದು ಮರುಗಬೇಕು. ಆ ನೋವಿನಲ್ಲಿ, ಮರುಕದಲ್ಲಿ ಅರಿವು ಮೂಡಬೇಕು. ಆ ಅರಿವು ಆತ್ಮವನ್ನು ಎಚ್ಚರಿಸಬೇಕು. ಹಾಗೆ ಎಚ್ಚತ್ತ ಆತ್ಮ ಪುಣ್ಯಾಂಬುವಿನಲ್ಲಿ ಮಿಂದು ಪರಿಶುದ್ಧವಾಗಬೇಕು. ಆ ಪುಣ್ಯಾಂಬು ತನ್ನೊಂದು ಆತ್ಮಪ್ರಸನ್ನತೆಯಾಗಬಹುದು ; ತನ್ನ ಭಾಗ್ಯ ದೇವತೆಯ ಕರುಣೆ, ಕೃಪೆ, ಪ್ರಸಾದ ಆಗಬಹುದು. ಅರಿತೂ ಅರಿಯದೆ ಹಿಟ್ಟಿನ ಕೋಳಿಯಿಟ್ಟು ಸಂಕಲ್ಪ ಹಿಂಸೆ ಮಾಡಿ ಪಾಪಕ್ಕೆ ಬಲಿಯಾದ

ಯಶೋಧರ ಚಂದ್ರಮತಿಯರ ಏಳು ಜನ್ಮಗಳ ಪಾಡು, ನೋವುಗಳು ಅಕಂಪನ ಗುರುವಿನ ತತ್ವಬೋಧಾಮೃತದ ಎರೆತದಿಂದ ಆತ್ಮಜ್ಞಾನ ಫಲ ಕೊಡುತ್ತವೆ.

ಮಹನೀಯರ ನೋವೂ ಮಹಿಮೆಯುಳ್ಳದ್ದು. ಅವರ ನೋವು ಆತ್ಮಕಲ್ಯಾಣವನ್ನು ಮಾತ್ರವಲ್ಲದೆ ಲೋಕಕಲ್ಯಾಣವನ್ನೂ ಸಾಧಿಸುತ್ತದೆ. ಯಶೋಧರ ಚಂದ್ರಮತಿಯರು ಪಾಡುಪಟ್ಟು ಗಳಿಸಿದ ಪುಣ್ಯಾರ್ಜನೆ ಯನ್ನು ಧಾರೆಯೆರೆದು ಮಾರಿದತ್ತ ರಾಜನನ್ನು ಮಾತ್ರವಲ್ಲದೆ ರಾಜ ಪುರದ ಜನತೆಯನ್ನೂ, ಮಾನವ ಜನತೆಯನ್ನು ಮಾತ್ರವಲ್ಲದೆ ದೇವತೆ ಚಂಡಮಾರಿಯನ್ನೂ 'ಸ್ಪೈಪನ್ ಪೇಟ್ಟು ಧರ್ಮಕ್ಕೆ ತಂದು' ಉದ್ಧರಿ ಸುತ್ತಾರೆ. ಅವರ ಪುಣ್ಯದ ಫಲವಾಗಿ 'ಜಿನಮತನಂದನದೊಳ್ ದಾನ ಲತೆ ದಯಾರಸದೆ ಜಗಂ ಹಂದರೆನೆ' ಹಬ್ಬುತ್ತದೆ.

## ಏನ್ಷಂಟ್ ಮ್ಯಾರಿನರ್

ಯಶೋಧರ ಕಥೆಯ ಸಂದರ್ಭದಲ್ಲಿ ಹಿಂಸಾಪಾಪ ಮತ್ತು ಪ್ರಾಯಶ್ಚಿತ್ತವನ್ನು ಕುರಿತ ಇಂಗ್ಲಿಷ್ ಕವಿತೆಯೊಂದನ್ನು ನೆನಪಿಗೆ ತಂದುಕೊಳ್ಳಬಹುದು. ಅದು ಕೋಲ್‌ರಿಜ್ ಕವಿಯ 'ಏನ್ಷಂಟ್ ಮ್ಯಾರಿನರ್ (ಪುರಾತನ ನಾವಿಕ)' ಎಂಬ ಕವಿತೆ. ನಾವಿಕನೊಬ್ಬನು ತನ್ನ ಹಡಗಿಗೆ ಹಾರಿಬಂದ ಅರಿಯದ ಹಕ್ಕಿಯೊಂದನ್ನು ನಿಷ್ಕಾರಣವಾಗಿ ಕೊಂದು, ಆ ಪಾಪದ ಫಲವಾಗಿ 'ಸಾವು ಬದುಕು'ಗಳ ಆಟದ ಕೈ ಗೊಂಬೆಯಾಗಿ ಪಡಬಾರದ ಪಾಡುಗಳನ್ನೆಲ್ಲ ಪಟ್ಟು, ಕೊನೆಗೆ ತನ್ನಲ್ಲಿಯೆ ಹುಟ್ಟಿದ ಮರುಕ ಭೂತದಯೆಗಳಿಂದಲೂ ಭಗವಂತನ ಕೃಪಾಪ್ರಸಾದ ದಿಂದಲೂ ಪುನೀತನಾದ ಕಥೆಯನ್ನು ಅದರಲ್ಲಿ ಹೇಳಿದೆ. ಆ ಕವಿತೆಯ ಭರತವಾಕ್ಯ : 'ಮನುಷ್ಯ, ಪಕ್ಷಿ, ಮೃಗ—ಎಲ್ಲವನ್ನೂ ಯಾವನು ಚೆನ್ನಾಗಿ ಪ್ರೀತಿಸುತ್ತಾನೊ ಅವನು ಚೆನ್ನಾಗಿ ದೇವರನ್ನು ಪ್ರಾರ್ಥಿಸು ತ್ತಾನೆ. ಕಿರಿದು, ಹಿರಿದು—ಎಲ್ಲವನ್ನೂ ಯಾವನು ಚೆನ್ನಾಗಿ ಪ್ರೀತಿ ಸುತ್ತಾನೊ ಅವನು ಚೆನ್ನಾಗಿ ಪ್ರಾರ್ಥಿಸುತ್ತಾನೆ. ನಮ್ಮನ್ನು ಪ್ರೀತಿಸುವ ಮೆಚ್ಚಿನ ದೇವ ಎಲ್ಲವನ್ನೂ ಸೃಷ್ಟಿಸಿದ್ದಾನೆ, ಎಲ್ಲವನ್ನೂ ಪ್ರೀತಿಸುತ್ತಾನೆ.'

ಏನ್ಷಂಟ್ ಮ್ಯಾರಿನರ್: ಪುರಾತನ ನಾವಿಕನೊಬ್ಬನು ಮೂವರು ಮದುವೆ ನಿಬ್ಬಣಿಗರನ್ನು ಕಾಣುತ್ತಾನೆ; ಒಬ್ಬನನ್ನು ಹಿಡಿದು ನಿಲ್ಲಿಸುತ್ತಾನೆ. ಆ ಹಳೆಯ ಕಡಲಾಳಿನ ಕಣ್ಣ ನೋಟಕ್ಕೆ ಬೆರಗುನಿಂತು ನಿಬ್ಬಣಿಗ ಅವನ ಕಥೆಯನ್ನು ಕೇಳಲು ಕಟ್ಟುಬೀಳುತ್ತಾನೆ. ಹಡಗು ಒಳ್ಳೆಯ ಗಾಳಿ ಹವಗಳಿಂದ ಹೇಗೆ ತೆಂಕಲು ಸಾಗಿತೆಂದು ನಾವಿಕ ಹೇಳುತ್ತಾನೆ ನಿಬ್ಬಣಿಗನಿಗೆ ಮದುವೆ ಗೀತ ಕೇಳಬರುತ್ತದೆ; ಆದರೆ, ನಾವಿಕ ತನ್ನ ಕಥೆಯನ್ನು ಮುಂದುವರಿಸುತ್ತಾನೆ. ಹಡಗು ಬಿರುಗಾಳಿಗೆ ಸಿಕ್ಕಿ ದಕ್ಷಿಣ ಧ್ರುವಕ್ಕೆ ಸೆಳೆಯುತ್ತದೆ. ಆ ನೀರ್ಗಲ್ಲ ನಾಡಿನಲ್ಲಿ ಭೀಕರವಿಕಾರ ಧ್ವನಿಗಳು; ಯಾವ ಪ್ರಾಣಿಯ ಸುಳಿವೂ ಇಲ್ಲ. ಆ ಹೊತ್ತಿಗೆ ಕಡಲಕೋಳಿಯೊಂದು ಮಂಜುಮುಸುಕನ್ನು ತೂರಿ ಬರುತ್ತದೆ. ಅದರ ಸಂತೋಷಗಳಿಂದ ಅದನ್ನು ಬರಮಾಡಿಕೊಳ್ಳುತ್ತಾರೆ. ಹಕ್ಕಿ ಒಳ್ಳೆಯ ಶಕುನವಾಗುತ್ತದೆ; ಹಡಗಿನ ಜತೆಯಲ್ಲಿಯೇ ಬರುತ್ತದೆ. ಹಡಗು ತೇಲು ನೀರ್ಗಲ್ಲನ್ನೂ ಮುಸುಕುಮಂಜನ್ನೂ ಸೀಳಿಕೊಂಡು ಬಡಗಲುಕಡೆ ಸಾಗುತ್ತದೆ. ಇದ್ದಕ್ಕಿದ್ದ ಹಾಗೆ ಆ ಪುರಾತನ ನಾವಿಕನು ಆ ಶುಭಶಕುನದ ಅರಿಯದ ಹಕ್ಕಿಯನ್ನು ಅನಾತಿಥ್ಯದಿಂದ ಧರ್ಮ ಮೀರಿ ಕೊಂದುಬಿಡುತ್ತಾನೆ. ಒಳ್ಳೆಯ ಅದೃಷ್ಟ ತಂದ ಹಕ್ಕಿಯನ್ನು ಕೊಂದದ್ದಕ್ಕಾಗಿ ಕಡಲ ಕೆಳೆಯರು ಆ ಪುರಾತನ ನಾವಿಕನನ್ನು ಬೈದು ಕೂಗಾಡುತ್ತಾರೆ. ಆದರೆ, ಮಂಜು ಕರಗಿ ತಿಳಿದೊಡನೆಯೇ ಅವನು ಮಾಡಿದ್ದು ಸರಿಯೆನ್ನುತ್ತಾರೆ; ಅದರಿಂದ ಅವನ ಪಾಪದಲ್ಲಿ ಅವರೂ ಭಾಗಿಗಳಾಗುತ್ತಾರೆ. ಒಳ್ಳೆಯ ಗಾಳಿ ಬೀಸುತ್ತಲೇ ಇವೆ. ಹಡಗು ಶಾಂತಸಾಗರ ಸೇರಿ ಬಡಗಲು ಸಾರುತ್ತದೆ. ಹಡಗು ಇದ್ದಕ್ಕಿದ್ದ ಹಾಗೆ ನಿಂತುಹೋಗುತ್ತದೆ. ಕಡಲಕೋಳಿಯ ಕೊಲೆಗೆ ಪ್ರಾಯಶ್ಚಿತ್ತ ಮೊದಲಾಗುತ್ತದೆ. ಭೂತವೊಂದು ಬೆನ್ನು ಹತ್ತಿದೆ; ಈ ಗ್ರಹದ ಅದೃಶ್ಯ ನಿವಾಸಿಗಳಲ್ಲೊಂದು; ಸತ್ತವರ ಪ್ರೇತವಲ್ಲ, ಸ್ವರ್ಗ ದೂತವಲ್ಲ. ಕಪ್ಪಲ ಕೆಳೆಯರು ತಮ್ಮ ಕಡು ಸಂಕಟದಲ್ಲಿ ತಪ್ಪನ್ನೆಲ್ಲ ಪುರಾತನ ನಾವಿಕನ ತಲೆಗೆ ಕಟ್ಟ ಬಯಸುತ್ತಾರೆ. ಅದರ ಗುರುತಾಗಿ, ಸತ್ತ ಕಡಲಹಕ್ಕಿಯನ್ನು ಅವನ ಕೊರಳಿಗೆ ತೂಗಹಾಕುತ್ತಾರೆ. ಪುರಾತನ ನಾವಿಕನು ದೂರ ಬಾನಿನಲ್ಲಿ ಏನನ್ನೋ ನೋಡುತ್ತಾನೆ. ಹತ್ತಿರ ಬಂದಾಗ ಹಡಗಿದ್ದಂತೆ ಕಾಣುತ್ತದೆ. ನೆತ್ತರ ದಂಡ ಕೊಟ್ಟು ಬತ್ತಿದ ಬಾಯಿಂದ ಮಾತಿನ ಸರೆ ಬಿಡಿಸುತ್ತಾನೆ. ನಲಿವಿನ ಮಿಂಚು; ಬೆನ್ನ ಹಿಂದೆಯೇ ಘೋರ. ಗಾಳಿಯಿಲ್ಲದೆ ಅಲೆಯಿಲ್ಲದೆ ಹಡಗು ಸಾಗಿ ಬರುತ್ತಿದೆಯೇ! ಹಡಗಿನ ಒಡಲ ಪಂಜರ ಮಾತ್ರವಿದ್ದಂತೆ ತೋರುತ್ತದೆ ಅದು ಅವನಿಗೆ. ಅದರ ಪಟ್ಟಿಗಳು ಇಳಿನೇಸರ ಮುಖದ ಮೇಲಿನ ಕಂಬಿಗಳಿದ್ದಂತೆ ಕಾಣುತ್ತವೆ. ನೆರಳು-ಹೆಣ್ಣು, ಅವಳ ಸಾವು-ಗೆಳತಿ; ಮತ್ತೆ ಯಾರೂ ಇಲ್ಲ ಆ ಪಂಜರದ ಹಡಗಿನಲ್ಲಿ. ಕಪ್ಪಲಂತೆ ಕಲವಾಸಿಗಳು. ಮೃತ್ಯುವೂ ಮೃತ್ಯುಸೆರೆಯ ಜೀವವೂ ಹಡಗಿನ ನಾವಿಕರ ಪಾಲನ್ನು ತೀರ್ಮಾನಿಸಿದ್ದಾರೆ; ಅವಳು (ಎರಡನೆಯವಳು) ಪುರಾತನ ನಾವಿಕನನ್ನು ಪಡೆಯುತ್ತಾಳೆ. ನೇಸರಂಗಳದಲ್ಲಿ ಹಿಂಬೆಳಕಿಲ್ಲ. ತಿಂಗಳು ಮೂಡುತ್ತಲೇ ಒಬ್ಬೊಬ್ಬರಾಗಿ ಅವನ ಕಪ್ಪಲಕೆಳೆಯರು ಸತ್ತು ಕಡೆಯುತ್ತಾರೆ. 'ಮೃತ್ಯುಸೆರೆಯ ಜೀವ'ಳು ತನ್ನ ಕೆಲಸ ಪ್ರಾರಂಭಿಸುತ್ತಾಳೆ ಪುರಾತನ ನಾವಿಕನ ಮೇಲೆ. ನಿಬ್ಬಣಿಗನಿಗೆ ಭೂತವೊಂದು ಮಾತಾಡುತ್ತಿರುವಂತೆ ಭಯವಾಗುತ್ತದೆ. ಆದರೆ, ಪುರಾತನ ನಾವಿಕನು ತಾನು ಸದೇಹ ಜೀವಿಯೆಂದು ನೆಚ್ಚಿಕೆಕೊಡುತ್ತಾನೆ. ತನ್ನ ಘೋರ ಪ್ರಾಯಶ್ಚಿತ್ತವನ್ನು ಹೇಳತೊಡಗುತ್ತಾನೆ. ಕಡಲುಸಿರಿಗಳನ್ನು ನಿಂದಿಸುತ್ತಾನೆ. ಅಷ್ಟೊಂದು ಮಂದಿ ಸತ್ತು ಕೆಡೆದು ಅವು ಮಾತ್ರ ಬದುಕಿವೆಯೆಂದು ಹೊಟ್ಟೆ ಉರಿಯುತ್ತದೆ. ಸತ್ತವರ ಕಣ್ಣಲ್ಲಿ ಬದುಕಿ ಕಾಣುತ್ತಿದೆ ಅವನಿಗೆ ಶಾಪ. ತನ್ನ ಆ ಏಕಾಕಿ ಸ್ಥಿತಿಯಲ್ಲಿ, ಜಡ ನಿಶ್ಚಲಾವಸ್ಥೆಯಲ್ಲಿ ಪರಿವ

ತಿಂಗಳನ್ನೂ ಸಾಗುವ ಚುಕ್ಕಿಗಳನ್ನೂ ಹಂಬಲಿಸಿ ನೋಡುತ್ತಾನೆ. ನೀಲಿಬಾನೆಲ್ಲ ಅವಕ್ಕೆ ಇದೆ ; ವಿಹಿತವಿಶ್ರಾಂತಿ, ಸ್ವದೇಶ, ಸ್ವಂತಮನೆ ಅವಕ್ಕೆ ಉಂಟು. ನಿರೀಕ್ಷಿಸಿದ ಒಡೆಯರು ಬಂದಂತೆ, ತಮ್ಮ ಬರವನ್ನು ಸಾರಿಡದೆ, ಮನೆ ಸೇರುತ್ತವೆ. ಆದಗೂ ಅವುಗಳ ಆಗಮನದಲ್ಲಿ ಒಂದು ಮುಗ್ಧಸಂತೋಷವಿದೆ. ಹೆಗ್ಗಡಲನಲ್ಲಿಯ ದೇವಸೃಷ್ಟಿಯ ಪ್ರಾಣಿಗಳನ್ನು ತಿಂಗಳ ಬೆಳಕಿನಲ್ಲಿ ನೋಡುತ್ತಾನೆ. ಅವುಗಳ ಚೆಲುವು! ಅವುಗಳ ಸುಖ! ಮನಸ್ಸಿನಲ್ಲಿಯೇ ಅವನ್ನು ಹರಸುತ್ತಾನೆ. ಮಂತ್ರದ ಕಟ್ಟು ಸಡಿಲುತ್ತದೆ. ಜಗನ್ಮಾತೆಯ ಕೃಪಾಪ್ರಸಾದದಿಂದ ಮಳೆಗರೆದು ಪುರಾತನ ನಾವಿಕ ಗೆಲವಾಗುತ್ತಾನೆ. ದನಿಗಳನ್ನು ಕೇಳುತ್ತಾನೆ. ಬಾನು ಬುವಿ ಎಲ್ಲೆಲ್ಲೂ ವಿಚಿತ್ರ ದೃಶ್ಯಗಳನ್ನೂ ಚಲನಗಳನ್ನೂ ನೋಡುತ್ತಾನೆ. ಹಡಗಿನ ನಾವಿಕರ ದೇಹಗಳೆಲ್ಲ ಸಚೇತನವಾಗುತ್ತವೆ. ಹಡಗು ಕದಲಿ ಸಾಗುತ್ತದೆ; ಮನುಷ್ಯರ ಆತ್ಮಗಳಿಂದಲ್ಲ; ಭೂಮಿಯ ಜೆಂತರಗಳಿಂದಾಗಲಿ ನಡುಬಾನ ಜೆಂತರಗಳಿಂದಾಗಲಿ ಅಲ್ಲ ; ಭಾಗ್ಯದೇವತೆಯ ಪ್ರಸಾದದಿಂದ ಬಂದ ಸ್ವರ್ಗೀಯಭೂತಗಳ ದಿವ್ಯಗಣದಿಂದ. ದಕ್ಷಿಣಧ್ರುವದ ಏಕಾಕಿ ಭೂತ ಆ ದಿವ್ಯಗಣದ ಆಜ್ಞೆಯಂತೆ ಹಡಗನ್ನು ವಿಷುವದವರೆಗೆ ಸಾಗಿಸುತ್ತದೆ. ಆದರೆ, ಇನ್ನೂ ಅದರ ಸೇಡು ಶಮನವಾಗಿಲ್ಲ. ದಕ್ಷಿಣಧ್ರುವ ಭೂತದ ಜತೆಭೂತಗಳು—ಭೂಮಿಯ ಅದೃಶ್ಯ ನಿವಾಸಿಗಳು—ಆ ಸೇಡಿನಲ್ಲಿ ಭಾಗವಹಿಸುತ್ತವೆ. ಅವುಗಳಲ್ಲಿ ಒಂದು ಮತ್ತೊಂದಕ್ಕೆ ಹೇಳುತ್ತದೆ : ಪುರಾತನ ನಾವಿಕನಿಗೆ ದೀರ್ಘವಾದ ಕಷ್ಟವಾದ ಪ್ರಾಯಶ್ಚಿತ್ತ ವಿಧಿಸಿದೆಯೆಂದು. ನಾವಿಕನನ್ನು ಒಂದು ಅಲೌಕಿಕ ಸುಪ್ತಿಯಾದ ಜೊಂಪ ಮುಸುಕುತ್ತದೆ ; ಏಕೆಂದರೆ, ಮನುಷ್ಯಜೀವ ತಡೆದುಕೊಳ್ಳಬಲ್ಲುದಕ್ಕಿಂತ ಹೆಚ್ಚು ವೇಗದಲ್ಲಿ ಆ ದಿವ್ಯಶಕ್ತಿ ಹಡಗನ್ನು ಬಡಗಲು ಒಯ್ಯುತ್ತಿದೆ. ಅಲೌಕಿಕಚಲನೆ ತಡೆದು ಮಂದವಾಗುತ್ತದೆ. ನಾವಿಕನು ತಿಳಿದು ಎಚ್ಚರುತ್ತಾನೆ. ಅವನ ಪ್ರಾಯಶ್ಚಿತ್ತ ಮತ್ತೆ ಪ್ರಾರಂಭವಾಗುತ್ತದೆ. ಶಾಪ ಕೊನೆಗೆ ತೀರುತ್ತದೆ. ಪುರಾತನ ನಾವಿಕನಿಗೆ ತವರುನಾಡು ಕಾಣಿಸುತ್ತದೆ ಸ್ವರ್ಗೀಯಭೂತಗಳು ಮೃತದೇಹಗಳನ್ನು ಬಿಟ್ಟು ಬಂದು ತಮ್ಮ ನೈಜ ಜ್ಯೋತೀರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಕಾಡಿನ ಬೈರಾಗಿ ಬೆರಗಾಗಿ ಕಡಲಬಳಿ ಸಾರುತ್ತಾನೆ. ಇದ್ದಕ್ಕಿದ್ದಂತೆ ಹಡಗು ಮುಳುಗಿಹೋಗುತ್ತದೆ. ಪುರಾತನ ನಾವಿಕನು ಕರ್ಣಧಾರನ ದೋಣಿಯಲ್ಲಿ ಬದುಕಿಕೊಳ್ಳುತ್ತಾನೆ. ಪುರಾತನ ನಾವಿಕನು ಬೈರಾಗಿಯನ್ನು ಪಾಪವಿಮೋಚನೆಕೊಡಬೇಕೆಂದು ಶ್ರದ್ಧೆಯಿಂದ ಬೇಡಿಕೊಳ್ಳುತ್ತಾನೆ. ಅಲ್ಲಿಂದ, ಜೀವನದ ಪ್ರಾಯಶ್ಚಿತ್ತ ನಾವಿಕನ ಬೆನ್ನು ಹತ್ತುತ್ತದೆ. ಮುಂದೆ ಯಾವಾಗಲೂ ಅವನ ಬಾಳಿನುದ್ದಕ್ಕೂ ಒಂದು ನೋವು ಅವನನ್ನು ನಾಡಿಂದ ನಾಡಿಗೆ ಸುತ್ತುತ್ತಿರುವಂತೆ ಪೀಡಿಸುತ್ತದೆ. ದೇವರು ಸೃಷ್ಟಿಸಿ ಪ್ರೀತಿಸುವ ಸಮಸ್ತವಸ್ತುವನ್ನೂ ಪ್ರೀತಿಯಿಂದಲೂ ಗೌರವದಿಂದಲೂ ಕಾಣುವಂತೆ ತನ್ನೊಂದು ಸ್ವಂತ ಉದಾಹರಣೆಯಿಂದ ಉಪದೇಶಮಾಡುವಹಾಗೆ ಆ ನೋವು ಪೀಡಿಸುತ್ತದೆ.

ಮೇಲಿನ ಕಥೆಯಿಂದ ಹೊರಪಡುವ ಮುಖ್ಯ ಅಂಶವೆಂದರೆ: ಹಿಂಸೆಗೆ, ಕೊಲೆಗೆ, ಪಾಪಕ್ಕೆ ಶಿಕ್ಷೆ ತಪ್ಪದು. ಆದರೆ ಆ ಶಿಕ್ಷೆ ಅನಂತವಲ್ಲ. ಪ್ರಾಯಶ್ಚಿತ್ತಪಡೆದ ಪಾಪಿಗಳಿಗೆ ದೇವರ ಕೃಪಾಪ್ರಸಾದದಿಂದ ಬಿಡುಗಡೆ ಉಂಟು. ಅರಿತೋ ಅರಿಯದೆಯೋ ಒಮ್ಮೆ ಇಟ್ಟ ತಪ್ಪು ಹೆಜ್ಜೆಯಿಂದ ಮತ್ತೆಂದೂ ಮೇಲೇರದ ಬೀಳೇ ಆಳ ಗತಿಯಾದರೆ, ಅವನಿಗೆ

ಬಿಡುಗಡೆ ಎಲ್ಲಿ? ನಿರ್ದಯರಕ್ತದಾಹ ದೇವತೆಗಳದೇ ಶಾಶ್ವತಸರ್ವಾಧಿಕಾರವಾಗಿ ಬಿಟ್ಟರೆ ಮನುಷ್ಯನಿಗೆ ಮುಕ್ತಿಯೆಲ್ಲಿ? ಎಲ್ಲೋ ಎಂತೋ ಎಂದೋ ಮರುಕ ಮೂಡಬೇಕು, ಕಲ್ಲು ಕರಗಬೇಕು. ಕೃಪಾ ಪ್ರಸಾದದ ಪಾವನಾಮೃತ ಕರೆಯಬೇಕು, ನೊಂದೆದೆಗೆ ಸೊದೆಯೆರೆಯಬೇಕು, ಬೆಂದೆದೆಗೆ ತಂಪೆರೆಯಬೇಕು. ನ್ಯಾಯಬೇಕು, ನಿಯಮಬೇಕು ; ನಿಜ. ಆದರೆ, ನಿರ್ದಯ ನ್ಯಾಯವಲ್ಲ, ಪಾಷಾಣ ನಿಯಮವಲ್ಲ. ಕರುಣೆಯಲ್ಲಿ ಮಿಂದು ಹದಗೊಂಡ ನ್ಯಾಯ, ದಯಾರ್ದ್ರಧರ್ಮ. ಈ ಆಸೆಯೊಂದಿಲ್ಲದಿದ್ದರೆ ಆಳ ಬಾಳೆಲ್ಲ ಬರಡು, ಬರಿಯ ಹುಸಿ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೂ ಇದೆ. ಪಾಪಪ್ರಾಯಶ್ಚಿತ್ತತತ್ವದ ಪ್ರತಿಪಾದನೆಗೆ ಜನ್ಮಾಂತರತತ್ವ ಅನಿವಾರ್ಯವಾಗಿ ಆವಶ್ಯಕವಲ್ಲ. 'ಪುರಾತನ ನಾವಿಕ'ನಲ್ಲಿಯಂತೆ ಪಾಪಿ ಇಲ್ಲಿಯೇ ಒಂದೇ ಮೆಯ್ಯಲ್ಲೇ ನರಕವನುಭವಿಸಿ ಮುಕ್ತಿಯನ್ನೂ ಕಾಣಬಹುದು.

## ಇತರ ಯಶೋಧರ ಗ್ರಂಥಗಳು

1. ಯಶೋಧರನ ವಿಷಯವಾಗಿ ಈಗ ನಮಗೆ ತಿಳಿದುಬಂದಿರುವ ಮಟ್ಟಿಗೆ ಮೊತ್ತಮೊದಲು ಗ್ರಂಥರೂಪದಲ್ಲಿ ಕಾಣಬರುವುದು ಹರಿಭದ್ರನ 'ಸಮರಾಇಚ್ಚ ಕಹಾ' (ಸಮರಾದಿತ್ಯಕಥಾ) ಎಂಬ ೮ನೆಯ ಶತಮಾನದ ಪ್ರಾಕೃತ ಗ್ರಂಥದಲ್ಲಿ. ಇದು ಗದ್ಯ ಗ್ರಂಥ. ಅಲ್ಲಲ್ಲಿ ನಡು ನಡುವೆ ಕೆಲವು ಪದ್ಯಗಳೂ ಹೆಣೆದುಕೊಂಡಿವೆ. ಗದ್ಯದ ಪ್ರಾಕೃತವನ್ನು ಜೈನ ಮಹಾರಾಷ್ಟ್ರೀ ಎಂಬ ಪ್ರತ್ಯೇಕ ಹೆಸರಿನಿಂದ ಒಮ್ಮೊಮ್ಮೆ ಕೆಲವರು ಕರೆಯುವುದುಂಟು. ಪದ್ಯಗಳು ಸಾಮಾನ್ಯ ಜೈನ ಪ್ರಾಕೃತದಲ್ಲಿ ಬರೆದಿವೆ. ಪೀಠಿಕೆಯಲ್ಲಿ ಪುರಾತನರದೆಂದು ಹೇಳಿ, ಕಥಾವಸ್ತುವನ್ನು ಸಂಕ್ಷೇಪವಾಗಿ ನಿರೂಪಿಸುವ ಕೆಲವು ಪದ್ಯಗಳನ್ನು ಎತ್ತಿಕೊಟ್ಟಿದ್ದಾನೆ. ಇದರಿಂದ, ಹರಿಭದ್ರನು ಕಥೆಗಳನ್ನು ಸ್ವಂತವಾಗಿ ಕಲ್ಪಿಸಿ ಕಟ್ಟಲಿಲ್ಲವೆಂದೂ ಬಲು ಹಿಂದಿನಿಂದ ಬಂದ ಪ್ರಸಿದ್ಧ ಕಥೆಗಳಿಗೆ ಒಂದು ಸಾಹಿತ್ಯರೂಪ ಕೊಟ್ಟನೆಂದೂ ತಿಳಿಯಬಹುದು. ಗ್ರಂಥವನ್ನು ಬರೆದದ್ದು ಜೈನ ಧರ್ಮ ನಿರೂಪಣೆಗಾಗಿ. ಕವಿಯೆ ಹೇಳಿರುವಂತೆ 'ಸಮರಾಇಚ್ಚಕಹಾ' ಧರ್ಮಕಥೆ. ಇದರ ಕಥೆಗಳಲ್ಲಿ ಬರುವ ನಾಯಕ ನಾಯಕಿಯರೆಲ್ಲರೂ ಕೊನೆಗೆ ಸಂಸಾರ

ತೊರೆದು ಸಂನ್ಯಾಸದಲ್ಲಿ ಬಿಡುಗಡೆ ಕಾಣುವ ಮಹಾವ್ಯಕ್ತಿಗಳು. ಒಬ್ಬೊಬ್ಬರ ಬಾಳಿನಲ್ಲೂ ಪ್ರಾಚೀನಕರ್ಮ ಹೇಗೆ ಹೆಣೆದುಕೊಂಡಿದೆ, ಈ ಕರ್ಮವಶದಿಂದ ಹೇಗೆ ಜನ್ಮಾಂತರಗಳು ಬರುತ್ತವೆ, ಕ್ರಮೇಣ ಪಾಪ ಕ್ಷಯವಾಗಿ ಹೇಗೆ ಮುಕ್ತಿ ದೊರೆಯುತ್ತದೆ ಎಂಬುದನ್ನೆ ಪ್ರತಿಯೊಂದು ಕಥೆಯಲ್ಲೂ ವಿವರಿಸಿದೆ. ಸಾಮಾನ್ಯವಾಗಿ ಪ್ರತಿಯೊಬ್ಬರ ಭವಾವಳಿಯಲ್ಲಿಯೂ ಅವರವರ ಒಂಬತ್ತು ಜನ್ಮಗಳ ಕಥೆ ಬರುತ್ತದೆ.

ಯಶೋಧರ ದೊರೆ ಒಂದು ಹಗಲು ತನ್ನ ತಲೆಯಲ್ಲಿ ಒಂದು ನರೆಗೂದಲನ್ನು ಕಂಡು, ಅದೇ ನಿರ್ವೇಗಕಾರಣವಾಗಿ, ಸಂನ್ಯಾಸಿಯಾಗಲು ತೀರ್ಮಾನಿಸುತ್ತಾನೆ. ಇರುಳು ಅವನ ಹೆಂಡತಿ ಹಾಸಿಗೆ ಬಿಟ್ಟು ಮುದಿಗೂನನೊಬ್ಬನಲ್ಲಿಗೆ ಕದ್ದು ಹೋಗುವುದನ್ನೂ, ಅಲ್ಲಿ ಆ ಪಾಪಿ ಅವಳನ್ನು ಬೈದು ಹೊಡೆಯುವುದನ್ನೂ, ಅವಳು ಆ ಅವಮಾನವನ್ನೆಲ್ಲಾ ತಾಳಿಕೊಂಡು ತನ್ನನ್ನು ಅವನಿಗೆ ಅರ್ಪಿಸಿಕೊಳ್ಳುವುದನ್ನೂ ಕಣ್ಣಾರ ಕಂಡು ಅಸಹ್ಯವಾಗಿ, ಅವನ ಮೊದಲ ತೀರ್ಮಾನ ಮತ್ತೂ ದೃಢವಾಗಿ ಬಿಡುತ್ತದೆ. ತಾಯನ್ನು ಒಪ್ಪಿಸುವುದಕ್ಕಾಗಿ ಒಂದು ಸಣ್ಣ ಸುಳ್ಳನ್ನು ಸೃಷ್ಟಿಸುತ್ತಾನೆ. ತಾನು ಸಂನ್ಯಾಸ ತಗೆದುಕೊಂಡಂತೆ ಕನಸು ಬಿತ್ತೆಂದು ಹೇಳುತ್ತಾನೆ. ತಾಯಿ ತಲ್ಲಣಿಸಿ ಪರಿಹಾರಕ್ಕಾಗಿ ಸಂನ್ಯಾಸಿ ವೇಷದಲ್ಲಿ ಕುಲದೇವತೆಗೆ ಹಲವು ಬಲಿಗಳನ್ನು ಕೊಟ್ಟು ಶಾಂತಿ ಮಾಡಿಕೊಳ್ಳುವಂತೆ ಬೋಧಿಸುತ್ತಾಳೆ. ಮಗನಿಗೆ ಪ್ರಾಣಿಹತ್ಯ ಇಷ್ಟವಿಲ್ಲದೆ, ಕೊನೆಗೆ ತಾಯ ಪ್ರೀತ್ಯರ್ಥವಾಗಿ ಒಂದು ಹಿಟ್ಟಿನ ಕೋಳಿಯನ್ನು ಬಲಿಕೊಟ್ಟು, ಅದರ 'ಮಾಂಸ' ಪ್ರಸಾದವನ್ನು ತಿನ್ನುತ್ತಾನೆ. ಈ ಮಾನಸಿಕ ಪಾಪದ ಫಲವಾಗಿ ಅವನೂ ಅವನ ತಾಯೂ ನವಿಲು, ಎರಲೆ, ಮೀನು ಮೊದಲಾದ ಹಲವು ಹುಟ್ಟುಗಳನ್ನು ತಳೆದು, ಕೊನೆಗೆ ಕೋಳಿಮರಿಗಳಾಗಿ ಹುಟ್ಟಿ ತಮ್ಮ ಪೂರ್ವ ಜನ್ಮಗಳನ್ನೆಲ್ಲ ಸ್ಮರಿಸಿಕೊಂಡು, ಮುಂದೆ ರಾಣಿಯೊಬ್ಬಳ ಹೊಟ್ಟೆಯಲ್ಲಿ ಅವಳಿಮಕ್ಕಳಾಗಿ ಹುಟ್ಟಿ ಎಳವೆಯಲ್ಲೆ ಅಣ್ಣತಂಗಿಯರಿಬ್ಬರೂ ಜೈನಭಿಕ್ಷುಗಳಾಗಿ, ಕಡೆಗೆ ಇಬ್ಬರೂ ಸ್ವರ್ಗದಲ್ಲಿ ದೇವತೆಗಳಾಗುತ್ತಾರೆ.

II. (೧) 'ತ್ರಿಷಷ್ಟಿಲಕ್ಷಣ ಮಹಾಪುರಾಣ' ಎಂಬ ೯ನೆಯ ಶತಮಾನದ ಸಂಸ್ಕೃತ ಗ್ರಂಥದಲ್ಲಿ ಯಶೋಧರ ಕಥೆ ಬರುತ್ತದೆ. ಈ ಗ್ರಂಥವನ್ನು ಸಂಕ್ಷೇಪವಾಗಿ 'ಮಹಾಪುರಾಣ' ಎಂದು ಕರೆಯುವುದು ವಾಡಿಕೆ. ಇದರಲ್ಲಿ ಆದಿಪುರಾಣ, ಉತ್ತರ ಪುರಾಣ ಎಂದು ಎರಡು ಭಾಗಗಳಿವೆ. ಆದಿಪುರಾಣದ ಮೊದಲ ೪೨ ಅಧ್ಯಾಯಗಳನ್ನು ಬರೆದವನು ಜಿನಸೇನ. ಅದರ ಕೊನೆಯ ೫ ಅಧ್ಯಾಯಗಳೂ ಇಡಿಯ ಉತ್ತರ ಪುರಾಣವೂ ಅವನ ಶಿಷ್ಯ ಗುಣಭದ್ರ ಬರೆದುವು. ಈ ಮಹಾಪುರಾಣದಲ್ಲಿ ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ಬಲದೇವರು, ೯ ವಾಸುದೇವರು, ೯ ಪ್ರತಿವಾಸುದೇವರು—ಹೀಗೆ ೬೩ ಶಲಾಕಾಪುರುಷರ

ಚರಿತ್ರೆ ಅಡಕವಾಗಿದೆ. ಈ ಮಹಾಪುರಾಣವನ್ನು ಮೊದಲು ಮಹಾವೀರ ಜಿನನು ಗೌತಮಗಣಧರನಿಗೆ ಹೇಳಿದ್ದಾಗಿಯೂ, ತರುವಾಯ ಆ ಮುನಿ ಅದನ್ನು ಶ್ರೇಣಿಕ ಮಹಾರಾಜನಿಗೆ ಹೇಳಿದ್ದಾಗಿಯೂ ಪ್ರತೀತಿ. ವಾದಿರಾಜನ ' ಯಶೋಧರ ಚರಿತ ' ಕ್ಕೆ ಗುಣಭದ್ರನ ಈ ಉತ್ತರ ಪುರಾಣದಲ್ಲಿಯ ಕಥೆಯೆ ಮೂಲ.

(೨) ' ತಿಸಟ್ಠಿ ಮಹಾಪುರಿಸ ಗುಣಾಲಂಕಾರ' ಎಂಬ ಮತ್ತೊಂದು ಮಹಾಪುರಾಣ ಅಪಭ್ರಂಶಭಾಷೆಯಲ್ಲಿದೆ[1]. ಇದು ೧೦ನೆಯ ಶತಮಾನದ ಗ್ರಂಥ. ಇದರಲ್ಲಿಯೂ ಆದಿಪುರಾಣ, ಉತ್ತರಪುರಾಣ ಎಂದು ಎರಡು ಭಾಗವಿದೆ. ಇದನ್ನು ಬರೆದ ಪುಷ್ಫಯಂತ ಅಥವಾ ಪುಷ್ಪದಂತನೇ ' ಜಸಹರ ಚರಿಉ ' ಎಂಬ ಹೆಸರಿನ ಯಶೋಧರ ಚರಿತೆಯೊಂದನ್ನು ಪ್ರತ್ಯೇಕವಾಗಿ ಅಪಭ್ರಂಶಭಾಷೆಯಲ್ಲಿ ಬರೆದಿದ್ದಾನೆ.

III. 'ಯಶಸ್ತಿಲಕ' ಚಂಪು ಜೈನರಲ್ಲಿ ಬಹು ಪ್ರಸಿದ್ಧವಾದ ಚಂಪು. ಇದನ್ನು ಬರೆದವನು ೧೦ನೆಯ ಶತಮಾನದ ಮಧ್ಯದಲ್ಲಿದ್ದ ಸೋಮದೇವ ಸೂರಿ. ಇವನು ದಿಗಂಬರ ಜೈನ. ಇವನ ಚಂಪುವಿಗೆ ಮೂಲ ಗುಣ ಭದ್ರನ ಉತ್ತರಪುರಾಣದಲ್ಲಿಯ ಯಶೋಧರ ಕಥೆ. ಸಾಂಪ್ರದಾಯಿಕ ಮಹಾಕಾವ್ಯ ಲಕ್ಷಣಗಳನ್ನೆಲ್ಲಾ ಒಳಕೊಂಡ ಈ ಯಶಸ್‌ತಿಲಕ ಚಂಪು ಬಹು ವಿಸ್ತಾರವಾದ ಪ್ರೌಢಗ್ರಂಥ. ಇದನ್ನು ಬಲು ಹುರುಡಿನಿಂದ ಬರೆದಂತೆ ಕಾಣುತ್ತದೆ. ಕೇವಲ ಸರಸಕಾವ್ಯದೃಷ್ಟಿಯೊಂದರಿಂದಲೇ ನೋಡುವುದಾದರೆ, ಸುಂದರ ಲಘುಕಾವ್ಯ ವಸ್ತು ಯಾವಾಗಲೂ ಎಲ್ಲರ ಕೈಯಲ್ಲೂ ಒಂದೇಸಮನಾಗಿ ಸೌಂದರ್ಯ ಸ್ವಾರಸ್ಯಗಳು ಕೆಡದೆ ಹಿಗ್ಗಿ ಹೆಣೆಯ ಬರಲಾರದು ಎಂಬುದಕ್ಕೆ ಈ ಚಂಪು ನಿದರ್ಶನವಾಗ ಬಹುದಾಗಿದೆ. ಇದರಲ್ಲಿಯ ಹಲವು ಅಧ್ಯಾಯಗಳು ಕಥೆಗೆ ಅಷ್ಟಾಗಿ ಆವಶ್ಯಕವಿಲ್ಲದೆ ಕೇವಲ ನೀತಿ ನಿರೂಪಣೆಗಾಗಿಯೂ ಮತ ತತ್ತ್ವ ಪ್ರತಿ ಪಾದನೆಗಾಗಿಯೂ ಮೀಸಲಾಗಿ ಹೋಗಿವೆ. ಒಟ್ಟಿನಲ್ಲಿ, ಈ ಚಂಪು ಪ್ರೌಢಪಂಡಿತರಿಗೆ ಬಲು ಮೆಚ್ಚುಗೆಯಾಗುವುದಾದರೂ ಕೇವಲ ಕಾವ್ಯಾ ನಂದದ ಸವಿಯೊರತೆಯನ್ನೇ ಅರಸುವವರಿಗೆ ಬೇಸರವಾಗುತ್ತದೆ.

---

1. ಈ ಮಹಾಪುರಾಣದ ಮೂಲ ' ದೃಷ್ಟಿವಾದ ' ದ ಮೂರನೆಯ ಭಾಗವಾದ ' ಪ್ರಥಮಾನುಯೋಗ '.

ಭರತ ವರ್ಷದಲ್ಲಿ ಯೌಧೇಯ ಜನಪದ; ಅದಕ್ಕೆ ರಾಜಪುರ ರಾಜಧಾನಿ. ಅಲ್ಲಿ ಹರಿವಂಶದ ಚಂಡಮಹಾಸೇನನ ಮಗ ಮಾರಿದತ್ತ ಕಿರಿಯಂದಿನಲ್ಲೆ ಸಿಂಹಾಸನಕ್ಕೆ ಬಂದು ರಾಜ್ಯವಾಳುತ್ತಿರುತ್ತಾನೆ. ರಾಜನಿಗೆ ವಿದ್ಯೆ ಬುದ್ಧಿ ಅಷ್ಟಷ್ಟೆ; ಕೆಟ್ಟ ಸಹವಾಸ. ವಿಷಯಲಂಪಟನಾದ ಈ ದೊರೆಗೆ ಮೂರು ಹೊತ್ತೂ ಭೋಗಲಾಲಸಕೇಳಿಗಳೆ. ಆಂಧ್ರ, ಕೇರಳ, ಚೋಳ, ಸಿಂಹಳ, ಕರ್ನಾಟ, ಸೌರಾಷ್ಟ್ರ, ಕಾಂಭೋಜ, ಪಲ್ಲವ, ಕಳಿಂಗಾದಿ ದೇಶಗಳ ವಿಲಾಸಿನಿಯರಲ್ಲಿ ಕ್ರೀಡಿಸಿ ಸ್ಮರನನ್ನೂ ಮೀರಿಸಿ ಮೆರೆಯುತ್ತಿರುತ್ತಾನೆ ಮಾರಿದತ್ತ. ವಿದ್ಯಾಧರಲೋಕವನ್ನು ಗೆದ್ದುಕೊಡುವ ಕತ್ತಿಯ ಸಿದ್ಧಿಗಾಗಿಯೂ ಅದರ ಫಲವಾಗಿ ಬರುವ ಖೇಚರಿಯರ ಲೋಚನಾವಲೋಕನಾದಿ ಭೋಗಪ್ರಾಪ್ತಿಗಾಗಿಯೂ ಕುಲಾಚಾರ್ಯನಾದ ವೀರಭೈರವನ ಪ್ರೇರಣೆಯಿಂದ ಕುಲದೇವತೆಯಾದ ಚಂಡಮಾರಿಗೆ ಪಶುಬಲಿ ನರಬಲಿ ಕೊಡಲು ಅನುವಾಗುತ್ತಾನೆ. ಆ ಹೊತ್ತಿಗೆ ಆ ಪಟ್ಟಣದ ಬಳಿಯ ಹೊರವನದಲ್ಲಿ ಬಂದಿಳಿದಿದ್ದ ಜೈನಯತಿ ಸುದತ್ತಾಚಾರ್ಯರು ಊರೊಳಗೆ ನಡೆಯಲಿರುವ ಪ್ರಾಣಿವಧೆಯನ್ನು ಅವಧಿ ಜ್ಞಾನದಿಂದ ಅರಿತು, ಅವರಿಗೆ ಧರ್ಮೋಪದೇಶ ಬುದ್ಧಿ ಹುಟ್ಟುತ್ತದೆ. ತನ್ನ ಶಿಷ್ಯಕುಲಕ್ಕೆ ಸೇರಿದ ಅಭಯರುಚಿ ಅಭಯಮತಿ ಎಂಬ ಮುನಿಕುಮಾರ ಯುಗಳದಿಂದ ಅಂದು ಆ ರಾಜಪುರದ ದೇವತೆಗಳಿಗೆ ಉಪಶಮ ಅಥವಾ ಸಮ್ಯಕ್ತ್ವ ಬರುತ್ತದೆಂದು ಅವಧಿಯಿಂದ ತಿಳಿದು ಆ ಅಣ್ಣತಂಗಿಯರನ್ನು ಚರಿಗೆಗಾಗಿ ಕಳಿಸುತ್ತಾರೆ. ಆ ಅವಳಿಗಳು ಕುಸುಮಾವಳಿಯ ಮಕ್ಕಳು. ಕುಸುಮಾವಳಿ ಮಾರಿದತ್ತನ ತಂಗಿ, ಯಶೋಮತಿಯ ಪಟ್ಟದರಸಿ. ಯಶೋಮತಿ ಯಶೋಧರನ ಮಗ. ಮಕ್ಕಳಿಬ್ಬರಿಗೂ ಪೂರ್ವಜನ್ಮ ಸ್ಮೃತಿಯುಂಟಾಗಿ, ಸಂಸಾರದ ಅಸಾರತೆಯಿಂದ ಬಾಲ್ಯದಲ್ಲಿಯೇ ವೈರಾಗ್ಯ ಹುಟ್ಟಿ ಸುದತ್ತಾಚಾರ್ಯರಲ್ಲಿ ಮುನಿವಟುಗಳಾದವರು. ಆ ಮಕ್ಕಳನ್ನು ವಧೆಗಾಗಿ ಮನುಷ್ಯ ಯುಗಳವನ್ನು ಹುಡುಕಾಡುತ್ತಿದ್ದ ಮಾರಿದತ್ತನ ಭಟರು ಹಿಡಿದುಕೊಂಡು ಹೋಗುತ್ತಾರೆ. ವಟುಗಳನ್ನು ಕಂಡೊಡನೆ ಮಾರಿದತ್ತನಿಗೆ ಆನಂದಬಾಷ್ಪ ಸುರಿಯುತ್ತದೆ; ತನ್ನ ತಂಗಿಯ ಮಕ್ಕಳಿರಬಹುದೆ ಎಂಬ ಶಂಕೆ ಬರುತ್ತದೆ. ಕೊಲೆಗೆ ಎತ್ತಿದ ಕತ್ತಿಯನ್ನು ಕೆಳಗಿಟ್ಟು ಅವರ ಕಥೆ ಹೇಳಬೇಕೆಂದು ದೊರೆ ಕೇಳುತ್ತಾನೆ. ಯಶೋಧರ ಚರನಾದ ಅಭಯಮತಿ ಹೇಳಿದ ಕಥೆ ಕೇಳಿ ಅವರು ತನ್ನ ತಂಗಿಯ ಮಕ್ಕಳೆಂದು ತಿಳಿದು ಸಂತೋಷಪಡುತ್ತಾನೆ. ಕೊನೆಗೆ ಮಾರಿದತ್ತನೆ ಅಲ್ಲದೆ ಅವನ ಕುಲದೇವತೆ ಚಂಡಮಾರಿಯೂ ಹಿಂಸಾಧರ್ಮ ಬಿಟ್ಟು ಜೈನಧರ್ಮ ಸ್ವೀಕರಿಸುತ್ತಾಳೆ.

ಈ ಚಂಪುವಿನ ವಿಸ್ತಾರ ವಿಲಂಬಶೈಲಿಗೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು : ಉಜ್ಜಯನಿಯಲ್ಲಿ ಆಳುತ್ತಿದ್ದ ಯಶೌಘಮಹಾರಾಜನು ನರೆ ಕೂದಲು ಕಂಡು ಸಂಸಾರದಲ್ಲಿ ವೈರಾಗ್ಯಹುಟ್ಟಿ ತಪಸ್ಸಿಗೆ ಹೋಗಲು ನಿಶ್ಚಯಿಸಿದ್ದರಿಂದ, ಅವನ ಮಗ ಯಶೋಧರನು ರಾಜ್ಯ ಸ್ವೀಕರಿಸಿ ಅವನೂ ಅವನ ಹೆಂಡತಿ ಅಮೃತಮತಿಯೂ ಅನ್ಯೋನ್ಯ ಪ್ರೇಮದಿಂದ ಕೂಡಿಕೊಂಡಿದ್ದರು ಎಂಬಲ್ಲಿಯವರೆಗಿನ ಕಥೆಯನ್ನು ಬಲು ಸೊಗಸಾಗಿಯೂ ಅಚ್ಚುಕಟ್ಟಾಗಿಯೂ ವಾದಿರಾಜನು ಸುಮಾರು ೨೦ ಸಣ್ಣ ವೃತ್ತಗಳಲ್ಲಿಯೂ ಜನ್ನನು ಸುಮಾರು ೨೦ ಕಂದಗಳಲ್ಲಿಯೂ ಹೇಳಿ

ದ್ದಾರೆ. ಇಷ್ಟನ್ನೇ ಸೋಮದೇವನು ಸುಮಾರು ೮೦೦ ಪದ್ಯಗಳಲ್ಲಿಯೂ ನಡುನಡುವೆ ವಿಪುಲವಾಗಿ ಬರುವ ದೀರ್ಘಗದ್ಯಗಳಲ್ಲಿಯೂ ಹಿಗ್ಗಲಿಸಿ ಹೊಸೆದಿದ್ದಾನೆ. ಚಂಡಮಾರಿದೇವತೆಯ ಮುಂದೆ ಕತ್ತಿ ಹಿಡಿದು ನಿಂತಿರುವ ಮಾರಿದತ್ತನನ್ನು ಹರಸಬೇಕಾದ ಅಭಯರುಚಿಯ ಬಾಯಲ್ಲಿ ವಾದಿರಾಜನು 'ಸರ್ವಸತ್ವಹಿತೋ ಯಸ್ತು ಸರ್ವಲೋಕಸುಖಪ್ರದಃ। ವಿದಧ್ಯಾಸ್ತೇನ ಧರ್ಮೇಣ ರಾಜನ್ ರಾಜನ್ವತೀಂ ಕ್ಷಿತಿಂ' ಎಂದೂ, ಜನ್ನನು 'ನೃಪವರ ನಿರ್ಮಲಧರ್ಮದಿಂದೆ ಪಾಲಿಸು ಧರೆಯನ್' ಎಂದೂ ನುಡಿಸುತ್ತಾರೆ. ಇದೇ ಸನ್ನಿವೇಶದಲ್ಲಿ ಸೋಮದೇವಸೂರಿ ಅಭಯರುಚಿಯ ಬಾಯಲ್ಲಿ ಹಲವು ಪದ್ಯಗಳನ್ನೂ ಅಭಯಮತಿಯ ಬಾಯಲ್ಲಿ ಹಲವು ಪದ್ಯಗಳನ್ನೂ ಹೇಳಿಸಿದ್ದಾನೆ. ಅಷ್ಟೇ ಅಲ್ಲ. ಅಭಯಮತಿಯ ಬಾಯಲ್ಲಿ ಬರುವ ಮಾತುಗಳು ಎಳೆಯ ಹೆಣ್ಣಿಗೆ, ಅದರಲ್ಲಿಯೂ ಮುನಿಶಿಷ್ಯೆಗೆ, ಕೇವಲ ಅನುಚಿತವಾದುವು.

IV. ಜಸಹರ ಚರಿಉ (ಯಶೋಧರ ಚರಿತ) ೧೦ನೆಯ ಶತಮಾನದ ಅಪಭ್ರಂಶ ಕಾವ್ಯ. ಅದನ್ನು ಬರೆದವನು 'ತಿಸಟ್ಠಿ ಮಹಾಪುರಿಸಗುಣಾಲಂಕಾರ'ವನ್ನೂ 'ನಾಗಕುಮಾರ ಚರಿಉ'ವನ್ನೂ ಬರೆದು ಪ್ರಸಿದ್ಧನಾಗಿರುವ ಪುಪ್ಫಯಂತ ಅಥವಾ ಪುಷ್ಪದಂತ[1]. ಬಲುಹಿಂದಿನಿಂದಲೂ ಈ ಗ್ರಂಥದ ಎರಡು ಪಾಠಗಳು ಸಮಪ್ರಚಾರದಲ್ಲಿದ್ದಂತೆ ಕಾಣುತ್ತದೆ: ೧. ಸೇನಗಣದವರಲ್ಲಿ ಪ್ರಚಾರವಿದ್ದ ಪಾಠ; ೨. ಬಲಾತ್ಕಾರಗಣದವರಲ್ಲಿ ಪ್ರಚಾರವಿದ್ದ ಪಾಠ. ಸೇನಗಣಪಾಠವೇ ಪುಷ್ಪದಂತ ಬರೆದ ಮೂಲಪಾಠ. ಬಲಾತ್ಕಾರಗಣದ ಪಾಠದಲ್ಲಿ ಹೆಚ್ಚಾಗಿರುವ ಅಂಶಗಳು ತರುವಾಯ ಗಂಧವ್ವ (ಗಂಧರ್ವ) ನೆಂಬವನು ೧೪ನೆಯ ಶತಮಾನದ ಆದಿಯಲ್ಲಿ ಸೇರಿಸಿದ್ದು. ಆ ಅಂಶಗಳನ್ನು ಅದೇ ವಿಷಯದ ವತ್ಸರಾಜನ ಗ್ರಂಥದಿಂದ ತೆಗೆದು ಸೇರಿಸಿದ್ದಾಗಿ ಗಂಧರ್ವನೇ ಹೇಳಿದ್ದಾನೆ. ಮೂಲದಲ್ಲಿಲ್ಲದೆ ಹೀಗೆ ಹೆಚ್ಚಾಗಿ ಸೇರಿರುವ ಅಂಶಗಳು ಮೂರು:

---

1 ಈ ಪುಷ್ಪದಂತ ವೈದಿಕ ಬ್ರಾಹ್ಮಣನಾಗಿ ಹುಟ್ಟಿ ದಿಗಂಬರ ಜೈನಧರ್ಮವನ್ನು ಸ್ವೀಕರಿಸಿದವನು. ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನ ಮಂತ್ರಿಯಾಗಿದ್ದ ಭರತನ ಮತ್ತು ಅವನ ತರುವಾಯ ಅವನ ಮಗ ನನ್ನನ ಆಶ್ರಯದಲ್ಲಿ ಮಾನ್ಯಖೇಟದಲ್ಲಿ ನೆಲಸಿದ್ದನು.

(೧) ಕಾಪಾಲಿಕಾಚಾರ್ಯನಾದ ಭೈರವಾನಂದನು ಮಾರಿದತ್ತನ ರಾಜಧಾನಿಗೆ ಬಂದು ಕಾಪಾಲಿಕಮತದ ಪ್ರಚಾರ ನಡಸುತ್ತಿರುವುದು; ಈ ಸುದ್ದಿ ದೊರೆಯು ಕಿವಿಮುಟ್ಟಿ, ಅವನಿಂದ ಕರೆ ಬಂದು, ಭೈರವಾನಂದ ಅರಮನೆಗೆ ಹೋಗುವುದು; ಮಾರಿದತ್ತ ತನಗೆ ಖೇಚರವಿದ್ಯೆ ಸಿದ್ಧಿಸಬೇಕೆಂದು ಕೇಳಲು ಆ ಕಾಪಾಲಿಕನು ಸಾಧಿಸಿಕೊಡುವುದಾಗಿ ಹೇಳಿ, ಅದಕ್ಕಾಗಿ ಚಂಡಮಾರಿದೇವತೆಯನ್ನು ಪಶುಬಲಿ ನರಬಲಿಯಿಂದ ಪೂಜಿಸುವಂತೆ ಪ್ರೇರಿಸುವುದು. (೨) ಯಶೋಧರನ ಮದುವೆಯ ವಿಸ್ತಾರ ವರ್ಣನೆ. (೩) ಗೋವರ್ಧನವರ್ತಕ, ಚಂಡಮಾರಿದೇವತೆ, ಭೈರವಾನಂದ, ಮಾರಿದತ್ತ—ಇವರ ಭವಾಂತರಗಳನ್ನು ಸುದತ್ತಾಚಾರ್ಯರು ಮಾರಿದತ್ತನಿಗೆ ಹೇಳುವುದು.

ಈ ಗ್ರಂಥದಲ್ಲಿ ೪ ಪರಿಚ್ಛೇದಗಳೂ ಒಟ್ಟು ೧೩೮ ಕಡವಕಗಳೂ ಇವೆ. ಸಾಮಾನ್ಯವಾಗಿ ಒಂದೊಂದು ಕಡವಕದಲ್ಲಿಯೂ ಸುಮಾರು ೧೦–೧೫ ಸಾಲುಗಳಿವೆ; ೨೫–೩೦ ಸಾಲುಗಳ ಕಡವಕಗಳೂ ಕೆಲವು ಮಾತ್ರವುಂಟು. ಪ್ರತಿ ಕಡವಕದ ಕೊನೆಯಲ್ಲಿಯೂ ಒಂದು ಘತ್ತಾ ಇದೆ. ಈ ಕಾವ್ಯದಲ್ಲಿ ಬಳಸಿರುವ ಹಲವು ದೇಶೀ ಛಂದಸ್ಸುಗಳ ವೈವಿಧ್ಯ ಬಹಳ ಸೊಗಸಾಗಿದೆ. ಈ ಛಂದಸ್ಸುಗಳು ಕನ್ನಡದ ರಗಳೆಗಳ ರೀತಿಯವು. ಒಟ್ಟು ಶೈಲಿಯೂ ಅಲ್ಲಲ್ಲಿ ಬರುವ ವರ್ಣನೆ ಅಲಂಕಾರಗಳೂ ಬಲು ಚೆನ್ನಾಗಿವೆ.

V. ವಾದಿರಾಜನ ಯಶೋಧರ ಚರಿತೆ: ೧೧ನೆಯ ಶತಮಾನದ ಆದಿಭಾಗದಲ್ಲಿದ್ದ ವಾದಿರಾಜಸೂರಿ[1] ಸಂಸ್ಕೃತದಲ್ಲಿ ನಾಲ್ಕು ಸರ್ಗಗಳ ಯಶೋಧರ ಚರಿತೆಯೊಂದನ್ನು ಬರೆದಿದ್ದಾನೆ. ಇದಕ್ಕೆ ಮೂಲ ಗುಣಭದ್ರನ ಉತ್ತರ ಪುರಾಣದಲ್ಲಿಯ ಯಶೋಧರ ಕಥೆ. ಈ ಕಾವ್ಯದಲ್ಲಿ ಒಟ್ಟು ೩೦೦ಕ್ಕಿಂತ ಕಡಮೆ ಪದ್ಯಗಳಿವೆ. ಮೊದಲನೆಯ ಸರ್ಗ ಅನುಷ್ಟುಪ್ಪಿನಲ್ಲೂ ಎರಡನೆಯದು ಉಪಜಾತಿವೃತ್ತದಲ್ಲೂ ಮೂರನೆಯದು ಸ್ವಾಗತವೃತ್ತದಲ್ಲೂ ನಾಲ್ಕನೆಯದು ವಂಶಸ್ಥ ಮತ್ತು ಉಪಜಾತಿ ವೃತ್ತಗಳಲ್ಲೂ ಬರೆದಿವೆ. ಕವಿ ಕಾವ್ಯದ ಕೊನೆಯಲ್ಲಿ 'ಯಶೋಧರ ಚರಿತ ಮಹಾಕಾವ್ಯ' ಎಂದು ಹೇಳುತ್ತಾನೆ. ವಿಷಯಮಹತ್ವದಿಂದ

1 ಇವನಿಗೆ ಕನಕಸೇನ ವಾದಿರಾಜನೆಂದೂ ಹೆಸರು.

ಅದು ಮಹಾಕಾವ್ಯವೇ ಹೊರತು, ಸಂಪ್ರದಾಯಮಾರ್ಗದ ಮಹಾ ಕಾವ್ಯ ಲಕ್ಷಣಗಳೆಲ್ಲವನ್ನೂ ಒಳಕೊಂಡಿಲ್ಲ. ಉದ್ದಾಮ ಶೈಲಿಯ ಪ್ರೌಢ ಮಹಾಕಾವ್ಯಗಳಲ್ಲಿ ಬರುವ ಅಷ್ಟಾದಶವರ್ಣನೆಗಳು ಅಲ್ಲಿಲ್ಲ. ಕೇವಲ ಕೃತಕ ಕವಿಸಮಯಗಳು, ವಿಚಿತ್ರಾಲಂಕಾರ ಚಮತ್ಕಾರಗಳು, ಅನಾ ವಶ್ಯಕ ಆಗಂತುಕ ವರ್ಣನೆಗಳು ಇಲ್ಲ. ಭಾಷೆ ಸರಳವಾಗಿಯೂ ಸುಲಭವಾಗಿಯೂ ಇದೆ. ಸೋಮದೇವಸೂರಿಯ ಯಶಸ್ತಿಲಕ ಚಂಪು ವಿನ ಹೆಗ್ಗಾಡುಬೆಳವಳಿಗೆಯ ತರುವಾಯ, ವಾದಿರಾಜಸೂರಿಯ ಕಸಿ ಮಾಡಿದ ಕೈತೋಟ ಆವಶ್ಯಕವಾಗಿತ್ತು, ಅನಿವಾರ್ಯವಾಗಿತ್ತು. ವಾದಿ ರಾಜನ 'ಯಶೋಧರ ಚರಿತೆ' ಮುದ್ದುಶೈಲಿಯ ಸುಂದರ ಲಘುಕಾವ್ಯ. ಜನ್ನನ ಯಶೋಧರ ಚರಿತೆಗೆ ಇದೇ ಮೂಲ ಮತ್ತು ಮಾದರಿಯಾಗಿರು ವಂತೆ ತೋರುತ್ತದೆ

VI. ಸಂಸ್ಕೃತದಲ್ಲಿ ಇನ್ನೂ ಎಷ್ಟೋ ಕವಿಗಳು ಯಶೋಧರ ಕಥೆ ಯನ್ನು ತೆಗೆದುಕೊಂಡು ದೊಡ್ಡದಾಗಿಯೋ ಚಿಕ್ಕದಾಗಿಯೋ ಬರೆ ದಿದ್ದಾರೆ. ಆ ಪ್ರತಿಯೊಂದರ ವಿವರವಿಚಾರವನ್ನು ಇಲ್ಲಿ ಮಾಡದೆ ಅಡಕ ಪಟ್ಟಿಯನ್ನು ಮಾತ್ರ ಕೊಟ್ಟಿದೆ :

೧. ವಾಸವಸೇನನ ೮ ಸರ್ಗಗಳ ಕಾವ್ಯ: ಬಲುಪಾಲು ಅನು ಷ್ಟುಪ್ ಛಂದಸ್ಸು; ಪೂರ್ವದಲ್ಲಿ ಪ್ರಭಂಜನ ಹರಿಸೇನಾದಿಗಳಿಂದ ಉಕ್ತ ವಾದಕಥೆಯನ್ನೆ ತನ್ನ ಬಾಲಭಾಷೆಯಲ್ಲಿ ಬರೆಯಲು ಉದ್ಯುಕ್ತನಾದ್ದಾಗಿ ವಾಸವಸೇನನು ಗ್ರಂಥಾರಂಭದಲ್ಲಿ ಹೇಳುತ್ತಾನೆ[1].

೨. ಸಕಲಕೀರ್ತಿಯ ೮ ಸರ್ಗಗಳ ಕಾವ್ಯ ; ಅನುಷ್ಟುಪ್ ಛಂದಸ್ಸು ; ಕ್ರಿ.ಶ. ೧೫ನೆಯ ಶತಮಾನದ್ದಿರಬಹುದು.

೩. ಸೋಮಕೀರ್ತಿ ಮುನಿಯ ೮ ಸರ್ಗಗಳ ಕಾವ್ಯ : ಕ್ರಿ.ಶ. ೧೪೭೬ರಲ್ಲಿ ಬರೆದದ್ದು.

೪ ಮಾಣಿಕ್ಯಸೂರಿಯ ೧೪ ಸರ್ಗಗಳ ಕಾವ್ಯ ; ಕ್ರಿ.ಶ. ೧೩೫೦ರಲ್ಲಿ ಬರೆದದ್ದು ; ಪೂರ್ವ ಕವಿಗಳಲ್ಲಿ ಹರಿಭದ್ರನನ್ನು ಸ್ಮರಿಸಿ ದ್ದಾನೆ.

---

1 ಪುಷ್ಪದಂತನ 'ಜಸಹರ ಚರಿಉ' ವಿನಲ್ಲಿ ಜಸಹರನ ಮದುವೆಯ ವರ್ಣನೆ ಯನ್ನು ಸೇರಿಸಿದ ಕವಿ ಗಂಧರ್ವನು ಆ ಪ್ರಕರಣವನ್ನು ವಾಸವಸೇನನಿಂದ ತಗೆದು ಕೊಂಡೆದ್ದೆಂದು ತಾನೇ ಹೇಳಿದ್ದಾನೆ.

೫. ಪದ್ಮನಾಭನ ೯ ಸರ್ಗಗಳ ಕಾವ್ಯ : ಕಾಲ ಗೊತ್ತಿಲ್ಲ.

೬. ಪೂರ್ಣದೇವನ ೩೧೧ ಪದ್ಯಗಳ ಕಾವ್ಯ : ಕಾಲ ಗೊತ್ತಿಲ್ಲ.

೭. ಕ್ಷಮಾಕಲ್ಯಾಣನ ೮ ಅಧ್ಯಾಯಗಳ ಗದ್ಯಕಾವ್ಯ : ಗ್ರಂಥಾರಂಭದಲ್ಲಿ ಹರಿಭದ್ರನ ಪ್ರಾಕೃತ ಕಾವ್ಯವನ್ನೂ ಇತರರ ಸಂಸ್ಕೃತ ಪದ್ಯಕಾವ್ಯಗಳನ್ನೂ ಅನುಸರಿಸಿ ತಾನು ಗದ್ಯದಲ್ಲಿ ಬರೆದದ್ದಾಗಿ ಹೇಳುತ್ತಾನೆ. ಕ್ರಿ.ಶ. ೧೭೮೨ರಲ್ಲಿ ಬರೆದದ್ದು.

ಇವರಲ್ಲದೆ ಮಲ್ಲಿಭೂಷ, ಬ್ರಹ್ಮ, ನೇಮಿದತ್ತ, ಶ್ರುತಸಾಗರ, ಹೇಮಕುಂಜರ ಮೊದಲಾದ ಇನ್ನೂ ಹಲವು ಕವಿಗಳು ಯಶೋಧರ ಕಾವ್ಯಗಳನ್ನು ಬರೆದಿದ್ದಾರೆ.

VII. ಸಂಸ್ಕೃತ ಪ್ರಾಕೃತಗಳಲ್ಲೆ ಅಲ್ಲದೆ ಹಲವು ಪ್ರಾಂತ (ದೇಶ) ಭಾಷೆಗಳಲ್ಲಿಯೂ ಯಶೋಧರ ಕಥೆ ಬರೆದಿರುವುದಾಗಿ ಮೊದಲೆ ಹೇಳಿದೆ. ಅವುಗಳಲ್ಲಿ ಮುಖ್ಯವಾದುವು :

೧. ತಮಿಳು ಯಶೋಧರ ಕಾವ್ಯ : ಇದು ಯಾವ ಕಾಲದ್ದು, ಯಾರು ಬರೆದದ್ದು ಎಂದು ಸರಿಯಾಗಿ ಗೊತ್ತಿಲ್ಲ. ಕ್ರಿ.ಶ ೧೦–೧೧ನೆಯ ಶತಮಾನದ್ದಿರಬಹುದೆಂದು ಊಹೆ. ವಾದಿರಾಜನೇ ಇದರ ಕರ್ತೃವೂ ಆಗಿರಬಹುದೆಂದೂ ಒಬ್ಬಿಬ್ಬರ ಊಹೆ. ಈ ಕಾವ್ಯ ೫ ಸರ್ಗಗಳಾಗಿ ವಿಭಾಗವಾಗಿ, ಒಟ್ಟು ೩೨೦ ಪದ್ಯಗಳಿವೆ. ಪದ್ಯಗಳು ಸಾಮಾನ್ಯವಾಗಿ ವೃತ್ತಛಂದಸ್ಸಿನಲ್ಲಿವೆ. ಕಥೆಯ ಓಟ ಹೆಚ್ಚು ಕಡಮೆ ವಾದಿರಾಜನ ಸಂಸ್ಕೃತ ಯಶೋಧರ ಚರಿತೆಯನ್ನೇ ಅನುಸರಿಸಿ ಜನ್ನನ ಯಶೋಧರ ಚರಿತೆಯನ್ನು ಹೋಲುತ್ತದೆ. ಕಥನಶೈಲಿ ಸರಳವಾಗಿಯೂ ಸುಲಭವಾಗಿಯೂ ಇದೆ.

೨. ಗುಜರಾತೀ ಭಾಷೆಯಲ್ಲಿ ಹಲವು ಯಶೋಧರ ಚರಿತೆಗಳು ಸಿಕ್ಕಿವೆ. ಜಿನಚಂದ್ರಸೂರಿ (ಸುಮಾರು ಕ್ರಿ.ಶ. ೧೬ನೆಯ ಶತಮಾನ), ದೇವೇಂದ್ರ, ಲಾವಣ್ಯರತ್ನ (೧೬ನೆಯ ಶ. ಮಾ.), ಮನೋಹರದಾಸ (೧೭ನೆಯ ಶ. ಮಾ.) ಮೊದಲಾದವರು ಬರೆದಿದ್ದಾರೆ.

೩. ಪಂಡಿತ ಲಕ್ಷ್ಮೀದಾಸನು ಹಿಂದಿಯಲ್ಲಿ ಒಂದು ಯಶೋಧರ ಚರಿತೆ ಬರೆದಿದ್ದಾನೆ. ಇದರ ಕಾಲ ಕ್ರಿ.ಶ ೧೮ನೆಯ ಶತಮಾನದ ಆದಿಭಾಗ. ಪದ್ಮನಾಭನ ಮಾದರಿಯನ್ನು ಹಿಡಿದು ರಚಿಸಿದ್ದಾಗಿ ಹೇಳುತ್ತಾನೆ.

VIII. ಕನ್ನಡದಲ್ಲಿ ಹಲವು ಯಶೋಧರ ಚರಿತೆಗಳಿವೆ. ಜನ್ನನೆ ತನ್ನ ಕಾವ್ಯಾರಂಭದಲ್ಲಿ 'ಕ್ಷಿತಿಯೊಳ್ ಸಂಸ್ಕೃತದಿನ್ ಪ್ರಾಕೃತದಿನ್ ಕನ್ನಡದಿನ್ ಆದ್ಯರ್ ಆರ್ ಈ ಕೃತಿಯನ್ ಮಾಡಿದರ್–ಅವರ್ಗಳ ಸನ್ಮತಿ ಕೈಗುಡುಗೆಮಗೆ' ಎಂದು ಹೇಳಿದ್ದಾನೆ. ಆ ಕನ್ನಡ ಕೃತಿ ಯಾವುದೊ ಇನ್ನೂ ಬೆಳಕಿಗೆ ಬಂದಂತೆ ಕಾಣಲಿಲ್ಲ ಜನ್ನನ ತರುವಾಯ ಹಲವರು ಯಶೋಧರ ಕಥೆಯನ್ನು ಕುರಿತು ಬರೆದಿದ್ದಾರೆ.

೧. ಪದುಮ(ನಾಭ)ನು ಭಾಮಿನೀ ಷಟ್ಪದಿಯಲ್ಲಿ ನಾಲ್ಕು ಸಂಧಿಗಳ ಕಾವ್ಯ ಬರೆದಿದ್ದಾನೆ. ಒಟ್ಟು ೪೦೦ಕ್ಕೆ ಮೇಲ್ಪಟ್ಟು ಪದ್ಯಗಳಿವೆ. ಈಗ ದೊರೆತಿರುವ ಪ್ರತಿಯಲ್ಲಿ ಕೆಲವು ಓಲೆಗಳು ಕಳಚಿ ಹೋಗಿವೆ, ಕೆಲವು ಹರಿದು ಹೋಗಿವೆ. ಪ್ರತಿಯಲ್ಲಿ 'ಱ' ಇದೆ. ಕವಿಯ ಕಾಲ ಸರಿಯಾಗಿ ತಿಳಿಯದು. ೧೫–೧೬ನೆಯ ಶತಮಾನವಿರಬಹುದು. ಜನ್ನನ ಕೃತಿಯನ್ನು ಪದುಮನಾಭ ನೋಡಿರಬೇಕೆನ್ನುವುದಕ್ಕೆ ಹಲವು ನಿದರ್ಶನಗಳಿವೆ. ಚಂಪೂಕಾವ್ಯಗಳಲ್ಲಿ ಕಂಡುಬರುವ ವರ್ಣನೆ, ಅಲಂಕಾರ, ಶೈಲಿ ಮೊದಲಾದುವುಗಳ ಅನುಕರಣೆ ಅಲ್ಲಲ್ಲಿ ಕಂಡುಬರುತ್ತದೆ. ಮಹಾಕಾವ್ಯಗಳಲ್ಲಿ ಚಿರಪರಿಚಿತವಾದ ಅಷ್ಟಾದಶ ವರ್ಣನೆ ಇದೆ; ಕೆಲವು ಕೊಂಚ ನೀಳವಾಗಿವೆ, ಕೆಲವು ಶಾಸ್ತ್ರಕ್ಕಾದರೂ ಇವೆ. ಆದರೆ, ಇವುಗಳ ಹೊರೆಯಿಂದ ಓಟಕ್ಕೆ ಅಷ್ಟೇನೂ ತೊಡಕಿಲ್ಲ, ಕುಂಟಿಲ್ಲ. ಕಾವ್ಯ ಚೆನ್ನಾಗಿ ತಿಳಿಯಾಗಿ ಬರೆದಿದೆ. ಕವಿ ತನ್ನನ್ನು 'ವರ್ಣಕವಿ ತಿಲಕ' ಎಂದು ಕರೆದುಕೊಂಡಿದ್ದಾನೆ. ಕವಿಯ ವಿಷಯವನ್ನು ತಿಳಿಸುವ ಕೆಲವು ಪದ್ಯಗಳನ್ನೂ ಪದ್ಯಭಾಗಗಳನ್ನೂ ಕೆಳಗೆ ಎತ್ತಿಕೊಟ್ಟಿದೆ :

. . . ಹೊಯ್ಸಳನಾ ಮಂಡಳವರಿಯ ರಾಜ . . . ಡು
ದೋರಸಮುದ್ರದೊಳಗೆ
ಅಖಂಡಿತ ತಪೋನಿಧಿ ನಿಧಾನವ ಪಡೆದನಾ ಮುನಿಯು ॥

. . . ಗುರು ಶ್ರುತಕೀರ್ತಿ . . . ಬೆಸಸೆ ಕವಿ ಪದುಮನಾಭನು . . .
ವಿರಚಿಸಲು ಮನದಂಡನಲ್ಲದೆ । ವಿರಚಿಸು ವೆನೆಂಬವಗೆ ಸೂರೆಯೆ
ಸರಸ ಕವಿಗಳು ಮುನ್ನೆ ರಚಿಸಿದ ಕೃತಿಗೆ ಪ್ರತಿಯೆನಲು ॥

ಚತುರ ಕವಿಜನ ಜನಕರೆನ್ನೀ । ಕೃತಿಯ ತಿರ್ದುಗೆ ಕೇಳಿ ಪದಪ
ದ್ಧತಿಯ ತೋಱುಗೆ ಸಲೆ ಯಶೋಧರರಾಯ ಚರಿತೆಯೊಳು ॥

ಹೀನರೆಂದೆನಿಪ ಪ್ರಥಮಗುಣ | ಸ್ಥಾನವರ್ತಿಗಳೆನುತಿರೆ ಕೈ
ಯಾನ ಜಿನಮತದವರನಲ್ಲದೆ ಬಗೆದು ಮಿಗೆ ಹೊಗಳಾ ॥

ದಾನನಿಧಿ ಬ್ರತನಿಧಿ ವಿಮಳಸು | ಜ್ಞಾನನಿಧಿ ಗುಣನಿಧಿ ದಯಾನಿಧಿ
ಮಾನನಿಧಿ ಸಮ್ಯಕ್ತ್ವರತ್ನಾಕರ ಸುಕವಿ ಪದುಮ ॥

ಸಕಲ ಮುನಿಜನ ಬೆಸಸೆ ಕರ್ನಾ | ಟಕದ ಭಾಷೆಯೊಳೊಪ್ಪೆ ಜಿನಪದ
ಭಕುತಿ ಸುಲಲಿತ ಪದವೆಸೆವ ಗತಿ ಪದವ ಮುಂದಿಡಲು
ಸುಕರ ಕವಿಗಳು ಮುನ್ನ ಪೇಳಿದ | ಸುಕಥೆಯೆಂಬ ಸುವರ್ಣರಂಗದೊ
ಳೊಸೆ[1]ದು ನರ್ತಿಪ ರಂಭೆಯೊಡನಾ ಸಿಂಬೆ ನಲಿವಂತೆ ॥

. . . ಜಿನಮುನಿ ಶ್ರುತಕೀರ್ತಿ ತ್ರೈವಿದ್ಯದೇವರ ಸುತ ಕವಿ ಪದುಮನಾಭ
ವಿಭು ವಿರಚಿತ ಯಶೋಧರನು ॥
. . . ಜೈನರು ಕೊಂಡು ಪಾಲಿಸುತಿರ್ಕೆ ಜೀವದಯಾಷ್ಟಮಿ ಕಥೆಯು ॥

## ಇವನ ಕೃತಿಯಲ್ಲಿಯ ಮಾರಿಗುಡಿ ವರ್ಣನೆಯಿಂದ ಕೆಲವು ಪದ್ಯಗಳು :

ಪುರದ ದಕ್ಷಿಣಭಾಗದೊಳು ಯಮ | ಪುರವಿದೆಂದೆನೆ ಚಂಡಮಾರಿಯ
ಪುರ ಭಯಂಕರ ಜಡಜನಂಗಳಿಗದ್ಭುತವಿದೆಂದೆನಲು
ಕರಿಯ ದಂತದ ಕಂಬಬೋದಿಗೆ | ಹರಿಯ ಮೂಳೆಯ ಹಲಗೆ ಹಟ್ಟಗೆ
ನರರ ಮೂಳೆಯ ಕಲಕಾಳಿಕೆಯ ಮುಚ್ಚಣವು ॥

ಸುತ್ತುಗೋಡೆಯ ಮೇಲೆ ತನೆಯೆನೆ | ತೆತ್ತಿಸಿದ ಪಂದಲೆಗಳೋಳಿಯ
ಸುತ್ತಿ ಜೋಲುವ ಕರುಳಮಾಲೆಯ ನೆಣದ ಗೊಂಡೆಯಕೆ
ಮುತ್ತಿ ಮುಸುರುವ ಹದ್ದುಕಾಗೆಯ | ಮೊತ್ತ ಬಳಸಿರೆ ನರಕಗಾಮಿಯ
ನಿತ್ತ ಬರಹೇಳೆಂದು ಕರೆವಂತುಲವ ಭೈರವರು ॥

ಕೊಱೆದ ಖಂಡದ ಕೃತಕ ಗಿರಿಗಳು | ಮುಱಿದ ಹಲುಗಳ ರಾಶಿಗಳು ತಲೆ
ಪಱಿದ ಮುಂಡದ ಬಣಬೆಗಳು ಕಳನೆಣದ ಬಾವಿಗಳು
ಜುರಿತು ದೊಱ್ರನೆ ಸುರಿವ ರಕುತದ | ತೊಱೆಗಳದ್ಭುತ ರೌದ್ರ ರಸ ಕಣ್
ದೆಱೆಯಲೊಱೆಗಟ್ಟಿತ್ತು ನರಕದ ಗಂಡನದು ಕೇಳು ॥

ಅಗೆದು ಹೂಳಿಸಿಕೊಂಬ ಬಸುಱಿಂ | ತೆಗೆವ ಜಂತ್ರದ ಮೊಯಿಗಳಲ ಸೂ
ಜಿಗಳ ಸಂಧಿಸಿಕೊಂಬ ಗರಳವನುಂಬ ಕೆಂಡದೊಳು
ಹೊಗುವ ಹಾಳವ ಮೊಗೆವ ಸೂಲನ | ನೆಗೆವ ತರೆಗಳ ಬಿಗಿವ ಚರ್ಮವ
ನುಗಿವ ವೀರರು ಮುಂಡೆ ನರಕವ ಹೊಗುವುದಕೆ ಕುಱುಹು ॥

---

1 ಪ್ರಾಸ ತಪ್ಪಿದೆ.

ವಸುಧೆಯೊಳಗಣ ಜೀವರಾಶಿಗ | ಳಸುವ ಸುಂಗಿದಡಕ್ಕಟೀ ತೆಳು
ವಸುಱು ತೀವದು ನೋಲ್ ಪಾಪಿಯು ರೂಪನೆಂಬಂತೆ
ಮಿಸುಗೆ ಬರಿಯೆಲು ಚಂಡಮಾರಿಯ | ನೊಸೆದು ನಂಬದ ಪಾತಕರು ಸಲು
ವ ಸುಗತಿಯು ಬಲದಂತೆ ಬೆನ್ನನ ಪತ್ತಿದದು ನೋಡ ||

'ಕೋಟಿಸಿರವ ಬಲಿಗೊಡಲು' ತಂದಿದ್ದ ಪ್ರಾಣಿಗಳು 'ಮಾರಿಯ ಕಾಡಿನೊಳು ನೆರೆದಳುತ ಕರುಣದ ಕೋಡಿವರಿಸಲು' 'ಹರುಷ ಕ್ಷೆಮಿಗೆ ಮಾರಿದತ್ತನು' 'ಕರಿ ತುರಗ ರಥ ಬಲ ಸಹಿತ' 'ನೆಲ ಬಿರಿದು ಬಾಯ್ ಬಿಡೆ ನರಕವೆಂಬಾ ಪುರಕೆ ನಡೆವಂತೆ' 'ಪೊಱಮಟ್ಟನು ಪುರೋಹಿತ ಮಂತ್ರಿಗಳು ಸಹಿತ'. ಮಾರಿದತ್ತನು 'ತೀರ್ಥಪ್ರಸಾದವ ತಂದು ಕೊಟ್ಟಡೆ ತನ್ನ ತರೆಗವತಂದನಾ ಜೀವಿಗಳ ತಲೆಗೆ ತಂದ'.

೨. ಚಂದಣವರ್ಣಿಯ ಯಶೋಧರ ಕಥೆ : ಇದಕ್ಕೆ ಜೀವದಯಾಷ್ಟಮಿಯ ಕಥೆಯೆಂದೂ ಹೆಸರು. ಭಾಮಿನೀ ಷಟ್ಪದಿಯಲ್ಲಿದೆ; ಸಂಧಿ ವಿಭಾಗವಿಲ್ಲ; ಒಟ್ಟು ೧೦೮ ಪದ್ಯಗಳು. ಕವಿಯ ಕಾಲ ದೇಶ ಒಂದೂ ಗೊತ್ತಿಲ್ಲ. ೧೫–೧೭ನೆಯ ಶತಮಾನವಿರಬಹುದು. ಈ ಗ್ರಂಥದಿಂದ ಕವಿಯ ವಿಷಯ ತಿಳಿಯಬರುವುದು ಅರ್ಧ ಪದ್ಯದಲ್ಲಿ ಮಾತ್ರ : 'ಶ್ರುತ ಮುನೀಶ್ವರವರ ತನೂಭವ ಜಿತವಾದನ ಶುಭಚಂದ್ರ ಮುನಿಪನ ಸುತನು ಚಂದಣವರ್ಣಿ ರಚಿಸಿದ ಕಥೆ ಯಶೋಧರನಾ'. ಇದೇ ಕವಿ ಚಂಪುವಿನಲ್ಲಿ ಬರೆದಿರುವ ನಂದೀಶ್ವರದ ನೋಂಪಿಯ ಕಥೆಯಿಂದ ಕವಿಯ ವಿಷಯ ಹೇಳುವ ಕೆಲವು ಪದ್ಯಗಳನ್ನು ಇಲ್ಲಿ ಗಮನಿಸಬಹುದು.

ಜಿನವರ ಸತ್‌ಪುರಾಣತತಿಯಂ ಪರಮಾಗಮಮಂ ರಥಾಂಗಭೃನ್‌
ಮನಸಿಜ ಸೀರಿ ಪಾಂಡುತನಯಾದಿ ಕಥಾನ್ವಿತಮಂ ಸುಕಾವ್ಯಮಂ
ಮುನಿನದುಪಾಸಕಾಚರಣಮಂ ಸಲೆ ಪೇಳ್ದ ಕವೀಶ ಭಾಸ್ಕರರ್‌
ಜನವಿನುತರ್‌ ಮದೀಯ ಮತಿಪದ್ಮಿನಿಗೀಗೊಲವಿಂ ವಿಕಾಸಮಂ

ರತಿಪತಿಮಾನಮರ್ದಿ ಜಗವಾಗಮವಾರುಧಿ ಪಾರದೃಶ್ವನಂ
ನುತಗುಣರತ್ನ ರೋಹಣಶಿಲೋಚ್ಚಲ ಭವ್ಯ ಸರೋಜ ಭಾಸ್ಕರ
ಶ್ರುತಮುನಿರಾಜಸೂನು ನತಭವ್ಯಜನಾಮರಧೇನು ಭೂಮಿವಿ
ಶ್ರುತಶುಭಚಂದ್ರಯೋಗಿ ಸಲೆ ಕೀರ್ತಿಯನಾಳ್ವೆಸೆದಂ ಧರಿತ್ರಿಯೊಳ್‌

ಆ ಶುಭಚಂದ್ರಾಹ್ವಯ ಯೋ | ಗೀಶಾತ್ಮಜ ಚಂದಣಾಖ್ಯವರ್ಣಿಬುಧಸ್ತೋ
ಮಾಶಯ ಹರವಂ ರಚಿಸಿದ | ನೀಶುಭ ನಂದೀಶ್ವರಾಖ್ಯ ಸದ್‌ವ್ರತ ಕಥೆಯಂ

೩. ಯಶೋಧರ ಸಾಂಗತ್ಯ : ಕವಿಯ ಹೆಸರು ಗೊತ್ತಿಲ್ಲ ; ಕಾಲ ಸುಮಾರು ಕ್ರಿ. ಶ. ೧೬೫೦. ಒಟ್ಟು ಮೂರು ಸಂಧಿಗಳೂ ೩೨೮ ಸಾಂಗತ್ಯಗಳೂ ಇವೆ. ಜನ್ನನ ಯಶೋಧರ ಕಥೆಯನ್ನೇ ಜನರಿಗೆ ಸುಲಭವಾಗಿ ತಿಳಿಯುವಂತೆಯೂ ಹಾಡಿಕೊಳ್ಳಲು ಅನುಕೂಲವಾಗು ವಂತೆಯೂ ಸಾಂಗತ್ಯದಲ್ಲಿ ಬರೆದಂತೆ ಕಾಣುತ್ತದೆ.

೪. ಜೀವದಯಾಷ್ಟಮಿಯ ನೋಂಪಿಯ ಕಥೆ :

ಮಿಕ್ಕವರಲ್ಲಿರುವಂತೆಯೇ ಜೈನರಲ್ಲಿಯೂ ಹಳೆಯಂದಿನಿಂದಲೂ ಹಲವು ನೋಂಪಿಗಳು ಆಚರಣೆಯಲ್ಲಿವೆ. ವ್ರತ ಎನ್ನುವುದಕ್ಕೆ ಅಚ್ಚ ಕನ್ನಡ ಮಾತಾದ ಈ ನೋಂಪಿ ಜೈನರಲ್ಲಿ ಹೆಚ್ಚು ಬಳಕೆ. ಈ ಎಷ್ಟೋ ನೋಂಪಿಗಳ ವಿಷಯದಲ್ಲಿ ಅವುಗಳನ್ನು ಆಚರಿಸುವ ವಿಧಾನಮಾತ್ರ ವಲ್ಲದೆ, ಅವುಗಳ ಸಂಬಂಧವಾದ ಕಥೆಗಳೂ ಬೆಳೆದು ಬಂದಿವೆ. ಇವು ಗಳಿಗೆ ನೋಂಪಿಯ ಕಥೆಗಳು ಎಂದು ಹೆಸರು. ಕನ್ನಡದ ಈ ನೋಂಪಿಯ ಕಥೆಗಳನ್ನೆಲ್ಲಾ ಒಬ್ಬನೇ ಕರ್ತೃವಾಗಲಿ ಒಂದೇ ಕಾಲದಲ್ಲಾಗಲಿ ಒಂದೇ ಬಗೆಯಲ್ಲಾಗಲಿ ಬರೆದಂತೆ ತೋರುವುದಿಲ್ಲ. ಬಲುಪಾಲು ಕಥೆಗಳು ವಚನ (ಗದ್ಯ) ರೂಪದಲ್ಲಿವೆ. ಕೆಲವು ಪದ್ಯರೂಪದಲ್ಲಿವೆ (ಉದಾಹರಣೆಗೆ : ಚಂದಣವರ್ಣಿಯ ನಂದೀಶ್ವರದ ನೋಂಪಿಯ ಕಥೆ ಒಂದು ಚಂಪೂ ಗ್ರಂಥ). ಈ ಬರಹಗಳ ಕಾಲ ೧೫–೧೭ನೆಯ ಶತಮಾನ ಗಳಿರಬಹುದು. ಸಾಮಾನ್ಯವಾಗಿ ಪ್ರತಿಯೊಂದು ನೋಂಪಿಯನ್ನೂ ಕುರಿತು ಮೊದಲು ಯಾರು ಯಾರಿಗೆ ಉಪದೇಶಮಾಡಿದರು, ಯಾರು ಆಚರಿಸಿ ಫಲಸಿದ್ಧಿ ಪಡೆದರು, ಆಚರಣೆಯ ದಿನ ಯಾವುದು, ಕ್ರಮ ಹೇಗೆ —ಇವೇ ಮೊದಲಾದ ಸಂಗತಿಗಳನ್ನು ಹೇಳಿದೆ. ನಾಲ್ಕು ಸಾಲಿನಿಂದ ಹಿಡಿದು ನಲವತ್ತು ಓಲೆಗಳ ವರೆಗಿನ ವಿವಿಧ ವಿಸ್ತಾರದ, ಬರಿಯ ಶುಷ್ಕ ಕ್ರಮ ವಿಧಾನ ಮಾತ್ರದಿಂದ ಹಿಡಿದು ರಸವತ್ತಾದ ಕಥನದ ವರೆಗಿನ ವಿವಿಧ ಸ್ವರೂಪದ ಕಥೆಗಳಿವೆ ಈ ಬರಹಗಳಲ್ಲಿ. ಕೆಲವಂತೂ ಸಾಹಿತ್ಯ ದೃಷ್ಟಿಯಿಂದ ಬಲು ಸೊಗಸಾಗಿವೆ, ಸ್ವಾರಸ್ಯವಾಗಿವೆ. ಇಂಥವುಗಳಲ್ಲಿ ಯಶೋಧರನ ವೃತ್ತಾಂತ ಬರುವ ಜೀವದಯಾಷ್ಟಮಿಯ ನೋಂಪಿಯ ಕಥೆ ಒಂದು[1].

---

1 ಅನುಬಂಧ ನೋಡಿ.

ಜನರು ಪಶುಬಲಿ ನರಬಲಿ ಕೊಟ್ಟು ದುರ್ಗಾಷ್ಟಮಿಯನ್ನು ಹಿಂಸಾರೂಪದಲ್ಲಿ ಆಚರಿಸುತ್ತಿದ್ದದ್ದನ್ನು ಕಂಡು ಜೈನರು ಅಹಿಂಸಾ ರೂಪದ ಜೀವದಯಾಷ್ಟಮಿಯ ನೋಂಪಿಯನ್ನು ಆಚರಣೆಗೆ ತಂದಿರಬಹುದೆಂದೂ, ಅಹಿಂಸಾತತ್ವ ಬೋಧಿಸುವ ಯಶೋಧರವೃತ್ತಾಂತವನ್ನು ಅದಕ್ಕೆ ಹೊಂದಿಸಿಕೊಂಡಿರಬಹುದೆಂದೂ ಕೆಲವರ ಅಭಿಪ್ರಾಯ.

---

# ಯಶೋಧರ ಚರಿತೆ

## ಒಂದನೆಯ ಅವತಾರ

ಪುರುದೇವಾದಿಗಳೊಲಿಸಿದ
ಪರಮಶ್ರೀ ವಧುವನೊಲಿಸಿಯುಂ ಪರವನಿತಾ
ನಿರಪೇಕ್ಷಕನೆನಿಸಿದ ದೇ
ವರ ದೇವಂ ಕುಡುಗೆ ಸುವ್ರತಂ ಸುವ್ರತಮಂ ೧

ಕ್ಷಿತಿಯೊಳ್ ಸಂಸ್ಕೃತದಿಂ ಪ್ರಾ
ಕೃತದಿಂ ಕನ್ನಡದಿನಾದ್ಯರಾರ್ ಈ ಕೃತಿಯಂ
ಕೃತಿಮಾಡಿದರವರ್ಗಳ ಸನ್
ಮತಿ ಕೈಗುಡುಗೆಮಗೆ ಸರಸ ಪದ ಪದ್ಧತಿಯೊಳ್ ೨

ಶ್ರಾವಕಜನದುಪವಾಸಂ
ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿಗ
ಳ್ಗೀ ವಸ್ತುಕಥನದಿಂದುದ್
ಭಾವಿಸೆ ಕವಿಭಾಳಲೋಚನಂ ವಿರಚಿಸಿದಂ ೩

ಪರೆವುದು ದುರಿತತಮಿಸ್ರಂ
ಪೊರೆಯೇಱುವುದಮಳದೃಷ್ಟಿಕುವಳಯವನಮಾ
ಚರಿಪ ಜನಕ್ಕೆ ಯಶೋಧರ
ಚರಿತ ಕಥಾಶ್ರವಣಮೆಂಬ ಚಂದ್ರೋದಯದೊಳ್ ೪

ಶ್ರೀಪಾರ್ಶ್ವಾಭರಣಂ ಧರೆಗುತ್
ಕರ್ಷವಿಳಾಸನದ ಭೂಮಿ ಸಕಳಜನಕ್ಕಂ
ಹರ್ಷಮನೀವುದು ಭಾರತ
ವರ್ಷದಯೋಧ್ಯಾ ಸುವಿಷಯದೊಳ್ ರಾಜಪುರಂ ೫

ಅದು ಪಿರಿಯ ಸಿರಿಯ ಬಾಳ್ಮೊದ
ಲದು ಚಾಗದ ಭೋಗದಾಗರಂ ಸಕಲ ಸುಖ
ಕ್ಕದು ಜನ್ಮಭೂಮಿಯೆನಿಸಿದು
ದದನಾಳ್ವಂ ಮಾರಿದತ್ತನೆಂಬ ನೃಪಾಲಂ ೬

ಆ ಪುರದ ತೆಂಕವಂಕದೊ
ಳಾಪೊತ್ತುಮನೇಕ ಜೀವಹತಿ ತನಗೆ ಸುಖೋ
ದ್ದೀಪನಮೆನಿಸುವ ಪಾಪಕ
ಳಾಪಂಡಿತೆ ಚಂಡಮಾರಿ ದೇವತೆಯಿರ್ಪಳ್ ೭

ತನಗರಸು ವೆರಸು ಪುರಜನ
ಮನಿತು[1]ಮಿಷಂ[1]ಚೈತ್ರಮೆಂಬ ತಿಂಗಳೊಳಖಿಲಾ
ರ್ಚನೆ ವೆರಸು ಜಾತ್ರೆ ನೆರೆಯದೊ
ಡನಿತುಮನೊರ್ಮೊದಲೆ ವಿಳಯದೊಳ್ ನೆರೆಯಿಸುವಳ್ ೮

ಆ ದೇವಿಯ ಜಾತ್ರೆಗೆ ಮೊಳೆ
ವೋದೆಳವೆಱೆ ಸಿರದ ಗಾಳಮುರಿಯುಯ್ಯಲೆ ಕೈ
ವೋದಸುಕೆ ಕೋಕಿಲಧ್ವನಿ
ಘೂದಲೆಯುಲಯಾಗೆ ಬಂದುದಂದು ಬಸಂತಂ ೯

1 ವರಂ (ಸ)

ಸಿಸಿರಮನೆ ಪಿಡಿದು ಪರಕೆಗೆ
ವಸಂತನಲವೋರ್ದ ಮಾವಿನಡಿಮಂಚಿಕೆಯೊಳ್
ಕುಸುರಿದಱಿದಡಗಿನಂತೆವೊ
ಲೆಸೆದುವು ತದ್ವನದೊಳುದಿರ್ದ ಮುತ್ತದ ಮುಗುಳ್ಗಳ್ ೧೦

ಮಾರಿ ಮಲಯಾನಿಳಂ ನವ
ನೀರಜ ವನಮೆಂಬ ಕೆಂಡದೊಳ್ ದಂಡನಮ
ಸ್ಕಾರದೆ ಬಂದಪನಿತ್ತವ
ಧಾರಿಪುದೆಂಬಂತಿರುಲಿದುವರಗಿಳಿ ಬನದೊಳ್ ೧೧

ಅಂತು ದೊರೆವೆತ್ತು ಬಂದ ವ
ಸಂತದೊಳಾ ಮಾರಿದತ್ತನುಂ ಪುರಜನಮುಂ
ತಂತಮಗೆ ಚಂಡಮಾರಿಗೆ
ಸಂತಸಮಂ ಮಾಡಲೆಂದು ಜಾತ್ರೆಗೆ ನೆರೆದರ್ ೧೨

ಸುರಿಗಿಱಿದರ್ಚನೆಯಾಡುವ
ಪರಕೆಯನೊಪ್ಪಿಸುವ ಲಕ್ಕಲೆಕ್ಕದ ಲೆಂಕರ್
ವೆರಸು ಬಲ[1]ಗೊಂಡು[1] ದೇವಿಯ
ಚರಣಂಗಳ್ಗಱಗಿ ರಂಗಮಂಟಪದೆಡೆಯೊಳ್ ೧೩

ನಿಂದು ನರಪತಿ ತಳಾಱಿಂ
ಗೆಂದಂ ನೀನ್ ಬರಿಸು ಮನುಜಯುಗಮಂ ಮುನ್ನಂ
ಕೊಂದರ್ಚಿಸುವೆಂ ಪೂಜೆಯೊ
ಳೆಂದಿನ ಪರಿ ತಪ್ಪೆ ದೇವಿ ತಪ್ಪದೆ ಮಾಣಳ್ ೧೪

1 ವಂದು (ಗ)

ತಡವಾದಪ್ಪುದು ಪೌರರ್
ಕುಡವೇಟ್ಪುದು ಪಲವು ಜೀವರಾಶಿಯ ಬಲಿಯಂ
ನಡೆಯೆನೆ ಹಸಾದವಾಗಳೆ
ಪಿಡಿತಾರದೆ ಪ್ರಾಣರೆನ್ನ ಕಿಂಕರರೆನುತುಂ ೧೫

ಕಿಱುವರೆಯದ ಶುಭಲಕ್ಷಣ
ದಱಿಕೆಯ ಸತ್ಕುಲದ ಮರ್ತ್ಯಯುಗಲಕಮಂ ತಾನ್
ಅಱಿಸಲ್ ಬಳರಿಯ ಬನದಿಂ
ಪೊಱಮಟ್ಟಂ ಚಂಡಕರ್ಮನೆಂಬ ತಳಾಱಂ ೧೬

ಇತ್ತಲ್ ಬಟಿಕ್ಕ ಪಂಚಶ
ತೋತ್ತಮ ಯತಿಸಮಿತಿ ವೆರಸು ಗಮನಪ್ರಾಯ
ಶ್ಚಿತ್ತ ನಿಮಿತ್ತಂ ಬಂದು ಸು
ದತ್ತಾಚಾರ್ಯರ್ ಪುರೋಪವನಮಂ ಸಾರ್ದರ್ ೧೭

ಆವರ ಗುಣಮವರ ಸಂಯಮ
ಮವರ ತಪಶ್ಚರಣಮೆಂಬುದವರಿವರಳವ
ಲ್ಲವರ ಪೆಸರ್ಗೊಂಡ ನಾಲಗೆ
ಸವಿದಱಿಯದು ಬಟಿಕ ತಾಯ ಮೊಲೆವಾಲ್ವನಿಯಂ ೧೮

ಮುನಿಸಮುದಾಯ ಸಮೇತಂ
ವಿನೇಯಜನ ವನಜವನ ದಿವಾಕರನಂತಾ
ಮುನಿಪನುಪವಾಸಮಂ ಪ
ರ್ವ ನಿಮಿತ್ತಂ ತಳೆದು ಬಟಿಕ ಬಾಲಕಯುಗಮಂ ೧೯

ಚರಿಗೆಗೆ ಬೀೞ್ಕೊಡೆ ಗುರುಗಳ
ಚರಣಕ್ಕಾ ಯುಗಳಮೆಱಗಿ ಪೋಱಮಟ್ಟಾಗಳ್
ತರುಣ ವನಹರಿಣ ಯುಗಮುಂ
ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ ೨೦

ಅಭಯರುಚಿಯಭಯಮತಿಯುಂ
ಉಭಯಮನಾ ಪಾಪಕರ್ಮನೊಯ್ವೆಡೆಯೊಳ್ ಮ
ತ್ತಭಯರುಚಿ ತಂಗೆಗೆಂದಪ
ನಭೀತೆಯಾ[1]ಗೆಲಗೆ[1] ತಾಯು ಮರಣದ ದೆಸೆಯೊಳ್ ೨೧

ನಿಯತಿಯನಾರ್ ಮೀಱಿದಪರ್
ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ ಕೇಳ್
ನಯವಿದೆ ಪೆತ್ತ ಪರೀಷಹ
ಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೇ ೨೨

ಅಣ್ಣನ ಮಾತಂ ಮನದೊಳ್
ತಿಣ್ಣಂ ತಳೆದೆಂದಳನುಜೆ ಮಾಡಿದುದಂ ನಾ
ಮುಣ್ಣದೆ ಪೋಕುಮೆ ಭಯಮೇ
ಕಣ್ಣ ಭವಪ್ರಕೃತಿವಿಕೃತಿ ನಾವಱಿಯದುದೇ ೨೩

ಎನಿತೊಳವಪಾಯಕೋಟಿಗ
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ
ಟ್ಟನೆ ಪೊತ್ತು ಸುಖಮನಱಸುವ
ಮನುಜಂ ಮೊರಡಿಯೊಳೆ ಮಾದುಪಟಮಱಸದಿರಂ ೨೪

---

1 ಗು ಗಡ (ಸ)

ಬೇಡಿದ ಕಾಡೊಳ್ ಮಱೆಯಾ
ಯ್ತೀಡಾಡುವಮಿದಱ ಪೊಱೆಯನೆನಗಂ ನಿನಗಂ
ಮೂಡುವ ಮುಟುಗುವ ದಂದುಗ
ಮಾಡಿದ ಹೊಲನುಂಡ ಮರ್ದು ಕಂಡ ವಿಚಾರಂ ೨೫

ಇಂತಿಂತೊರ್ವರನೊರ್ವರ್
ಸಂತೈಸುತ್ತುಂ ನೃಪೇಂದ್ರತನುಜಾತರ್ ನಿ
ಶ್ಚಿಂತಂ ಪೊಕ್ಕರ್ ಪಸಿದ ಕೃ
ತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ ೨೬

ತಳಮನುಡಿದಿಡುವ ಕಣ್ಣಂ
ಕಳೆದೇಱಿಪ ಕರುಳ ತೋರಣಂಗಟ್ಟುವ ಕಾ
ಲ್ಗಳನುರಿಪಿ ನೆತ್ತರಾ ಕೂ
ಟ್ಗಳನಡುತಿಹ ವೀರರೆತ್ತ ನೋಡ್ಪೊಡಮದಱೊಳ್ ೨೭

ತಾಳುಗೆಯನುರ್ಚಿ ನೆತ್ತಿಯ
ಗಾಳಂ ಗಗನೊದೊಳೆಟಲ್ವ ವಾರಿಯ ಬೀರರ್
ಪಾಳಿಯೊಳೆಸೆದರ್ ಪಾಪದ
ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ ೨೮

ಆಡು ಕುಱಿ ಕೋಟಿ ಕೋಣನ
ಕೂಡಿದ ಪಿಂಡೊಳಱೆ ಪೆಳಱೆ ಮಾರ್ದನಿಯಿಂದಂ
ಕೂಡೆ ಬನಮಟ್ಟುದುರ್ವರೆ
ಬೀಡೆಯಿನೆರ್ದೆಯೊಡೆದುದವಱ ಕೋಟಲೆಗಾಗಳ್ ೨೯

ದೆಸೆದೆಸೆಗೆ ನರಶಿರಂ ತೆ
ತ್ತಿಸಿ ಮೆಱೆದುವು ಮದಿಲೊಳಚ್ಚೆ ಪೇರಡಗಿನ ಪೆರ್
ಬೆಸನದೆ ಪೊಱಗಣ ಜೀವ
ಪ್ರಸರಮುಮಂ ಪಲವು ಮುಖದಿನವಳೋಕಿಪವೊಲ್ ೩೦

ಭೈರವನ ಜವನ ಮಾರಿಯ
ಮೂರಿಯವೊಲ್ ನಿಂದ ಮಾರಿದತ್ತಂ ಲಲಿತಾ
ಕಾರರ ಧೀರರ ಬಂದ ಕು
ಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ ೩೧

ಅರಸನ ಕೆಲಬಲದವರ್ಗಳ್
ಪರಸಿರೆ ಪರಸಿರೆ ನೃಪೇಂದ್ರನಂ ನೀವೆನೆ ಮಂ
ದರಧೀರನಭಯರುಚಿ [1]ನೃಪ
ವರ ನಿರ್ಮಲ[1] ಧರ್ಮದಿಂದೆ ಪಾಲಿಸು ಧರೆಯಂ ೩೨

ಎಂದು ಪರಸಿದೊಡೆ ಪೊಯ್ಯದೆ
ನಿಂದು ನೃಪಂ ಮನದೊಳೆಂದನೀ ದೇಗುಲಮಂ
ಬಂದು ಪುಗಲೊಡನೆ ಜೀವಂ
ನಿಂದಱಿಯದು ಮುನ್ನಮಿನ್ನರಂ ಕಂಡಱಿಯೆಂ ೩೩

ಕಿಟ್ಟ ಕರವಾಳ್ಗಮೆನಗಂ
ಮಿಟ್ಟಿನಿಂತಿರ್ದ ಮಾರಿಗಂ ಬೆದಱದೆ ನಿಂ
ದಟ್ಟಿಯನೆ ನುಡಿದರಿವರ ನೆ
ದಟ್ಟೆ ಕರಂ ಪಿರಿದು ಧೀರರಕಟ ಕುಮಾರರ್ ೩೪

[1] ನಿರ್ಮಲ ದಯೆಯಿಂ (ಸ)

ಜವಳಿವೆಱ ಮನುಜ ರೂಪದಿ
ನವನಿಯೊಳೊಗೆದಂತೆ ಕಾಂತಿ ಮೆಱೆದಪುದಿಂದಿಂ
ತಿವರ್ಗಳ ಚೆಲ್ವಿಕೆ ಕಣ್ಗಳ
ತವರಾಜಮನಿಂದು ಕಂಡೆನೀ ಬಾಲಕರಂ ೨೫

ಆವ ಕುಲಮಾರ ತನಯರಿ
ದಾವೆಡೆಯಿಂ ಬಂದಿರೇಕೆ ಬಾಲ್ಯದೊಳೀ ಭಿ
ಕ್ಷಾವೃತ್ತಿಯೆಂದು ಬೆಸಗೊಳೆ
ಭೂವರ ಕೇಳೆಂದು ಕುವರನಂದಿಂತೆಂದಂ ೨೬

ಧರ್ಮಪರರ್ಗಲ್ಲದೆಮ್ಮಯ
ನಿರ್ಮಲಚಾರಿತ್ರಮಿಂಬುಕಯ್ಯದು ನಿನಗಾ
ಧರ್ಮದ ಪೋದ ಪೊಲಂಬದು
ನರ್ಮದೆಯಿಂ ಗೆಂಟದೇಕೆ ಕೇಳ್ದಪೆಯೆಮ್ಮಂ ೨೭

ಆ ಮಾತನ್ನೆಗಮಿರ್ಕೆಲೆ
ಭೂಮೀಶ್ವರ ನಿನಗೆ ಪಥ್ಯಮಾವುದದಂ ಮಾ
ಡಾಮೂಲಚೂಲಮೆಮಗೆ ತ
ಳಾವಲಕಂ ಭವನಿಬದ್ಧಮಟಲಿಸಿತೆಮ್ಮಂ ೨೮

ಗುಣಿಗಳ ಗುಣರತ್ನ ವಿಭೂ
ಷಣಮೆಸೆವುದೆ ವಿಕಳಹೃದಯರಾದವರ್ಗೆ ನೃಪಾ
ಗ್ರಣಿ ಪೇೞ್ ತುಪ್ಪೇಱಿದ ದ
ರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ ೨೯

ಇಂತೆಂಬುದುಮಾ ಕುವರನ
ದಂತಪ್ರಭೆಯೆಂಬ ಶೀತಕರನುದಯದಘ
ಧ್ವಾಂತೌಘ ಮಧುಪ ಮಾಲಿಕೆ
ಯಂ ತೊಲಗಿ[1]ಸೆ[1] ಮುಗಿದುದವನ ಕರ ಸರಸಿರುಹಂ ೪೦

ಧನಮಂ ಕಂಡ ದರಿದ್ರನ
ಮನದವೊಲೆಱಗಿದುವು ಪರಿಜನಂಗಳ ನೊಸಲಾ
ವಿನಯನಿಧಿಗಾ ಕುಮಾರಕ
ನನುರಾಗದೆ ಮಾರಿದತ್ತವಿಭುಗಿಂತೆಂದಂ ೪೧

ಭಲರೆ ನೃಪೇಂದ್ರಾ ದಯೆಯೊಳ್
ನೆಲೆಗೊಳಿಸಿದೆ ಮನಮನಮಮ ನೀನ್ ಕೇಳ್ದುದು ಸತ್
ಫಲಮಾಯ್ತು ಧರ್ಮಪಥದೊಳ್
ಸಲೆ [2]ನಿಂ[2]ದಪೆ ಕಾಲಲಬ್ಧಿ ಪೊಲಗೆಡಿಸುವುದೇ ೪೨

ಎಂತು ಬೆಸಗೊಂಡೆ ಬೆಸಗೊಂ
ಡಂತಿರೆ ದತ್ತಾವಧಾನನಾಗು ಜಯಶ್ರೀ
ಕಾಂತೆಯುಮಂ ಪರಮಶ್ರೀ
ಕಾಂತೆಯುಮಂ ನಿನಗೆ ಕುಡುಗುಮೀ ಸತ್‌ಕಥನಂ ೪೩

ಶ್ರೀಮತ್‌ತೀರ್ಥಾಧಿಪನ ವದನಾಂಭೋಜದಿಂ ಸರ್ವಭಾಷಾ
ಸಾಮಾನ್ಯಂ ಶ್ರೀವಚನಮೊಗೆದತ್ತಾ ವಚೋಮಾರ್ಗದಿಂ ಮ
ತ್ತಾಮುಂ ಕಂಡುಂಡುದಱ ಕಥೆಯಂ ಪೇೞ್ದಪೆಂ ಕೇಳಿಮೆಂದಾ
ಭೂಮೀಶಂಗಂದಭಯರುಚಿಯಿಂತೆಂದು ಪೇೞಲ್ ತಗುಳ್ದಂ ೪೪

---

1 ಸಿ (ಸ, ಗ. ಚ). 2 ಸಂ (ಗ).

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ
ರಭಸ ಮತಿಗೆ ಸಯ್ಪಂ ಪೇೞ್ದು ಧರ್ಮಕ್ಕೆ ತಂದೀ
ಶುಭಕಥನಮನತ್ಯಾನಂದದಿಂ ಕೇಳ್ವ ಭವ್ಯ
ಪ್ರಭುಸಭೆಗೆಸೆದಿರ್ಕುಂ ಮಂಗಳಂ ಶ್ರೀ ವಿಲಾಸಂ ೪೫

## ಎರಡನೆಯ ಅವತಾರ

ಆ ಕಥೆ ಮತ್ತೆಂತೆಂದೊಡೆ
ಳಾಕಾಂತೆಗವಂತಿ ವಿಷಯಮಾಸ್ಯದವೊಲ್ ಶ್ರೋ
ಭಾಕರಮಾಯ್ತುದಱೊಳ್ ನಾ
ಸಾಕುಟ್ಮಳದಂತೆ ಮೆಱೆವುದುಜ್ಜೇನಿ ಪುರಂ ೧

ಆ ಪುರದರಸಂ ನತಭೂ
ಮೀಪಾಲರ ಮಕುಟಮಸ್ತಕದೆ ನಿಜ ತೇಜೋ
ರೂಪಕಮೆ ಪದ್ಮರಾಗದ
ದೀಪದವೊಲ್ ಮೆಱೆವಿನಂ ಯಶೌಘಂ ಮೆಱೆವಂ ೨

ದೊರೆವಡೆದ ಯಶೌಘನ ಭೂ
ವರತಿಳಕನ ಕಣ್ಗಳಂಗರಕ್ಕರ್ ಮನವಾ
ಭರಣಂ ರಾಜ್ಯಶ್ರೀ ಸಹ
ಚರಿಯೆನೆ ಸಂದತ್ತು ಚಂದ್ರಮತಿಗರಸಿತನಂ ೩

ಅನಿತೆಸೆವ ಚಂದ್ರಮತಿಗಂ
ಜನಪತಿಗಂ ಪುಟ್ಟಿದಂ ಯಶೋಧರನೆಂಬಂ
ಜನಮೋಹನಬಾಣಂ ಕ
ರ್ಬಿನ ಬಿಲ್ಗಂ ನನೆಯ ನಾರಿಗಂ ಪುಟ್ಟಿದವೊಲ್ ೪

ನೋಡುವ ಕಣ್ಗಳ ಸಿರಿ ಮಾ
ತಾಡುವ ಬಾಯ್ಗಳ ರಸಾಯನಂ ಸಂತಸದಿಂ
ಕೂಡುವ ತೋಳ್ಗಳ ಪುಣ್ಯಂ
[1]ನಾಡಾಡಿಯೆ ರೂಪು[1] ಕುವರ ವಿದ್ಯಾಧರನಾ ೫

[1] ನಾಡಾಡಿಯ ರೂಪೆ (ಸ, ಗ)

ಎಳವೆಳ್ದಿಂಗಳ್ ನನೆಗಣೆ
ಮಳಯಾನಿಳನಿಲ್ಲಿ ಮೂವರೊಳಗಾರೊ ಕುತೂ
ಹಳಮಾದಪುದೆನ್ನದ ಕ
ಣ್ಣೊಳವೆ ಯಶೋಧರ ಕುಮಾರನಂ ಕಾಣಲೊಡಂ ೬

ಅಮೃತಮತಿ ಗಡ ಯಶೋಧರ
ನ ಮನಃಪ್ರಿಯೆ ಆಕೆ ದೀವಮಾಗೆ ಪುಳಿಂದಂ
ಸುಮನೋಬಾಣಂ ತದ್‌ಭೂ
ರಮಣನನೊಲಿದಂತೆ ಗೋರಿಗೊಳಿಸುತ್ತಿರ್ಕುಂ ೭

ನರೆಯೆಂಬ ಹೊಱಸು ಮೊಗಮಂ
ಬರಮನೆಯಂ ಪೊಕ್ಕೊಡಂಗನಾಲೋಕನಮಂ
ಬರಸೆಂತಿರ್ದಪನೆಂದಾ
ನರನಾಥಂ ತೊಱೆದನಖಿಳ ವಿಷಯಾಮಿಷಮಂ ೮

ಧರಣೀಭಾರಕ್ಕೆ ಯಶೋ
ಧರನನೊಡಂಬಡಿಸಿ ನೂರ್ವರರಸುಗಳೊಡನಾ
ದರದಿಂ ಕಂಬಂದಪ್ಪಿದ
ಕರಿಯಂತೆ ತಪೋವನಕ್ಕೆ ನಡೆದನಿಳೇಶಂ ೯

ಅಳವಡೆ ಭುಜದೊಳ್‌ ಮೃಗಮದ
ತಿಳಕದವೊಲ್ ಸಕಲ ಧರಣಿ ಯೌವನಭೂಷಾ
ವಳಿಯೆನೆ ತಿರ್ದುವನಾ ನೃಪ
ಕುಲಶೇಖರನಮೃತಮತಿಯ ಮುಖದರ್ಪಣದೊಳ್ ೧೦

ಅವನಿಪನೊರ್ಮೆ ಸಭಾಮಣಿ
ಭವನದಿನಂಬರ ತರಂಗಿಣೀ ಪುಳಿನಮನೇ
ಱುವ ಹಂಸನಂತೆ ಶಯ್ಯಾ
ಧವಳ ಪ್ರಾಸಾದತಳಮನೇಱಿದನರಸಾ ೧೧

ಅಮೃತಮತಿ ಸಹಿತಮಾ ಚಂ
ದ್ರಮತಿಯ ಸುತನಂತು ಮೆಱೆವ ದವಳಾರದೊಳ
ಭ್ರಮು ವೆರಸಭ್ರಗಜಂ ವಿ
ಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸೆಗುಂ ೧೧*

ಹೃದಯಪ್ರಿಯರಂತೊಱಗಿದ
ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮ
ಟ್ಗಿದ ಪೊತ್ತು ಸೂಟ್ಗೆ ಕರುಮಾ
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ೧೨

ಬಿನದಕೆ ಪಾಡುತ್ತಿರೆ ನುಣ್
ದನಿ ನಿದ್ರೆಗೆ ಕತಕಬೀಜಮಾಯ್ತೆನೆ ಮೃಗಲೋ
ಚನೆ ತಿಳಿದಾಲಿಸಿ ಮುಟ್ಟಿದ
ಮನ[1]ಮಂ[1] ತೊಟ್ಟನೆ ಪಸಾಯದಾನಂಗೊಟ್ಟಳ್ ೧೩

ಅಂತೆಸೆಯೆ ಪಾಡುತಿರೆ ತ
ದ್ದಂತಿಪನತಿನೂತ್ನಗೀತ ಪಾತನ ವಿಕಲ
ಸ್ವಾಂತೆಗೆ ನೋಡುವ ಕೂಡುವ
ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ ೧೪

[1] ಮನೆ (ಗ)

ಮನೆದನ್ನಳಪ್ಪ ಕೆಳದಿಗೆ
ಮನಮಂ ಮುಂದಿಟ್ಟು ಬಟಿಕ ಕಟಿಪಿದೊಡವಳಾ
ತನ ರೂಪುಗಂಡು ಕಣ್ಗಂ
ಮನಕ್ಕಮುದ್ಗಾರವೆತ್ತು ಭೋಂಕನೆ ಮಗುಳ್ದಳ್ ೧೫

ಅಮೃತಮತಿಯೆತ್ತ ರೂಪಾ
ಧಮನಷ್ಟಾವಂಕನೆತ್ತ ಚಿತ್ರಮಪಾತ್ರೇ
ರಮತೇ ನಾರೀ ಎಂಬುದು
ಸಮನಿಸಿದುದು ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ ೧೬

ಎನುತುಂ ಬಂದು ವಿಷಣ್ಣಾ
ನನೆಯಂ ಮಾರ್ಗಾವಲಗ್ನನೇತ್ರೆಯನುಚ್ಛ್ವಾ
ಸ ನಿತಪ್ತಾಧರ ರುಚಿಯಂ
ಮನುಜೇಂದ್ರಾಂಗನೆಯನೆಯ್ದಿ ಕಂಡಿಂತೆಂದಳ್' ೧೭

ಕಂತುವಿನ ಕಯ್ಯ ಕೂರಸಿ
ಯಂತಿರೆ ಗರಗರಿಕೆವಡೆದು ಪೊಳೆವಸಿಯಳೆ ನೀನ್
ಇಂತಪ್ಪ ಕಾಮದೇವಂ
ಗೆಂತೆಂತಾಯ್ದಱಿಸಿ ಕೂರ್ತೆಯೆಂದಾನಱಿಯೆಂ ೧೮

ಈ ದೊರೆಯನೆಂದು ತೋಱಿಲ್
ಮೇದಿನಿಯೊಳಗಾತನಲ್ಲದಿಲ್ಲೆನೆ ಪೇೞ್ ಪೇೞ್
ಕಾದಲನಂತಿರೆ ಚೆಲ್ವನೆ
'ದೂದವಿ ನೀನೆನ್ನ ಕೊಂದೆಯೆಂದೊಡೆ ಪೇೞ್ದಳ್' ೧೯

ಪೞಿದಲೆ ಕುಟಿನೊಸಲಲಟಿಗ
ಣ್ಣೊೞೆವಾಯ್ ಹಪ್ಪಳಿಕೆಮೂಗು ಮುರುಟಿದ ಕಿವಿ ಬಿ
ಬ್ಬಿೞಿವಲ್ ಕುಸಿಗೊರಲಿಟಿದೆರ್ದೆ
ಪೋೞಿಂಟ ಬೆನ್ ಬಾತ ಬಸಿೞಿಡಂಗಿದ ಜಘನಂ ೨೦

ಕೞೆದೊವಲ ಪಡೆಯ ಕುಟಿಯಂ
ತೆೞೆದಂದದ ಮೆಯ್ಯನಾತಮಾತನ ಕಯ್ಗಳ್
ಕುೞುಗಣ್ಣು ಕೂನಬೆನ್ ಕಾಲ್
ಮೞೆಯಿಸುವುದು ಟೊಂಕ ಮುೞಿದ ಕತ್ತೆಯ ಕಾಲಂ ೨೧

ಮುದುಗರಡಿಯ ಮುದುದೊವಲಂ
ದದ ಕರಿಯಂ ತಾಳಕಾಯ ಮೋಳಿಗೆಯೊಂದಂ
ದದ ಮುರುಡನಷ್ಟವಂಕಂ
ಮೊದಲೊಣಗಿದ ಕೂನ ಗೊರಡಿನಂದದ ಕೊಂಕಂ ೨೨

ಎಂದೊಡೆ ದೂದವಿಗವಳಿಂ
ತೆಂದಳ್ ಗರಗರಿಕೆ ಕೊರಲೊಳೀಕ್ಷಣದೊಳ್ ವಾರ್
ಬಿಂದು ಮಿಡುಕೆರ್ದೆಯೊಳೊದವೆ ಪು
ಳಿಂದನ ಕಣ್ [1]ಗಟ್ಟಿ[1] ನಿಂದ ವನಹರಿಣಿಯವೊಲ್ ೨೩

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸ್ಮರಚಾಪಮನಿಳಿಕಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ೨೪

1 ನಟ್ಟು (ಸ)

ಒಲವಾದೊಡೆ ರೂಪಿನ ಕೋ
ಟಲೆಯೇವುದೊ ಕಾರ್ಯಮಾಗೆ ಕಾರಣದಿಂದಂ
ಫಲಮೇನಿಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ ೨೫

ಎಂದಾಕೆಗೆ ಲಂಚಮನಿ
ತ್ತೆಂದುದನೆಂದೆರವಿಗೊಂಡು ಕಟಿಪುವುದುಮವಳ್
ಸಂದಿಸಿದೊಡಮೃತಮತಿ ರಾ
ತ್ರಿಂದಿವಮಾತನೊಳೆ ಸಲಿಸಿದಳ್ ತೆಱಪುಗಳಂ ೨೬

ಆ ವಿಕಟಾಂಗನೊಳಂತಾ
ದೇವಿಗೆ ರುಚಿಯಾಗೆ ರತಿಫಲಾಸ್ವಾದನದೊಳ್
ಜೀವಂ ಮೆಚ್ಚಿದ ಕಾಗೆಗೆ
ಮಾವಿಳಿದಪ್ಪಂತೆ ಪತಿಯೊಳಿಳಿದಾಯ್ತು ಮನಂ ೨೭

ನೋಡುವ ಮಾತಾಡುವ ಬಾಯ್
ಗೂಡುವ ಪದನಮೃತಮತಿಗೆ ಪೂರ್ವಸ್ಥಿತಿಯಿಂ
ಪಾಡಟಿಯುತ್ತಿರೆ ನೋಡಲ್
ವೇಡಿ ಯಶೋಧರನದೊರ್ಮೆ ಶಯ್ಯಾತಳದೊಳ್ ೨೮

ಮಱೆದೊಱಗಿದನಂತೆವೊಲಿರೆ
ಪಱಿವೆ ಪಗಲ್ ಮುಗಿಯೆ ಸಿಲ್ಕಿ ಕೈರವದಿನಿರುಳ್
ಪೊಱಮಡುವಂತರಸನ ತೋಳ್
ಸೆಱೆಯಿಂ ನುಸುಳ್ದರಸಿ ಜಾರನಲ್ಲಿಗೆ ಪೋದಳ್ ೨೯

ಬೆನ್ನೊಳೆ ಪೋದಂ ದೋಷದ
ಬೆನ್ನೊಳೆ ಸಂದಿಸುವ ದಂಡದಂತರಸಂ ಪ್ರ
ಚ್ಛನ್ನದಿನುರ್ಚಿದ ಬಾಳ್‌ವೆರ
ಸನ್ನೆಗಮಾ ಬದಗನರಸಿ ತಡೆದೊಡೆ ಮುಳಿದಂ ೩೦

ಮುಳಿದಾಕೆ ತಂದ ಮಾಲಾ
ಮಳಯಜ ತಾಂಬೂಲ ಜಾಲಮಂ ಕೆದಱಿ ಕುರು
ಳ್ಗಳನೆಳೆದು ಬೆನ್ನ ಮಿಳಿಯಿಂ
ಕಳಹಂಸೆಗೆ ಗಿಡಿಗನೆಱಗಿದಂತಿರೆ ಬಡಿದಂ ೩೧

ತೋರಮುಡಿವಿಡಿದು ಕುಡಿಯಂ
ನಾರಂ ತದೆವಂತೆ ತದೆದು ಬೀೞೆಯ ಕಾಲಿಂ
ಬಾರೇಳೆ ಬದಗನೊದೆದೊಡೆ
ಕೇರೆ ಪೊರಳ್ವಂತೆ ಕಾಲಮೇಲೆ ಪೊರಳ್ದಳ್ ೩೨

ತಡವಾದುದುಂಟು ನಲ್ಲನೆ
[1] ಬಡಿ [1] ಮುಳಿಯುದಿರರಸನೆಂಬ ಪಾತಕನೆನ್ನಂ
ತೊಡೆಯೇಱಿಸಿ ಕೇಳಿಕೆಯಾ
ದೊಡೆ ನೋಡುತ್ತಿರ್ದನುಂತೆ ನಿಲಲಣ್ಮುವೆನೇ ೩೩

ಕಿವಿಸವಿ ದನಿ ಕಣ್‌ಸವಿ ರೂ
ಪವಧರಿಸೆಲೆ ಗಜವೆಡಂಗ ನೀನುಡಿದೊಡೆ ಸಾ
ವವಳೆನಗೆ ಮಿಕ್ಕ ಗಂಡರ್
ಸವಸೋದರರೆಂದು ತಿಳಿಪಿದಳ್ ನಂಬುಗೆಯಂ ೩೪

---

1 ಬಡು (ಚ).

ಆಗಳ್ ಬಾಳ್ ನಿಮಿರ್ದುದು ತೋಳ್
ತೂಗಿದುದು ಮನಂ ಕನಲ್ದುದಿರ್ವರುಮನೆರೞ್
ಬಾಗಂ ಮಾಡಲ್ [1]ಧೃತಿ ಬಂ
ದಾಗಳ್[1] ಮಾಣೆಂಬ ತೆಱದೆ ಪೇಸಿದನರಸಂ ೩೫

ಪರನೃಪರನಲ್ಲದೀ ಪುೞು
ಕರನಿಱಿವುದೆ ಮದ್ಭುಜಾಸಿಯಿದು ಕಯ್ಯಿಕ್ಕಲ್
ಕರಿ ಕರಿಗಲ್ಲದಿಱುಂಪೆಗೆ
ಪಱಿವುದೆ ಹರಿ ಕರಿಯನಲ್ಲದಿಱಿವುದೆ ನರಿಯಂ ೩೬

ಅಸಿಲತೆ ರಣಧೌತಮದೀ
ಮಸಿಮುಸುಡನ ಜೀವ [2]ಕಪ್ಪಿನಿಂ[2] ಕಂದಿದೊಡೆಣ್
ದೆಸೆಯನಡರ್ದೆನ್ನ ಕೀರ್ತಿ
ಪ್ರಸರದ ಕುಡಿ ಕಯ್ಪುಸೊರೆಯ ಕುಡಿಯವೊಲಕ್ಕುಂ ೩೭

ಅಳಿಪುಳ್ಗೊಡೆ ನೋಡಿಱಿದೊಡ
ನೞಿವುದೆ ಪೆಣ್ ತಪ್ಪಿ ನಡೆಯೆ ಛಿಃ ಕಿಸುಗುಳಮೆಂ
ದುೞಿವುದೆ ಗೆಲ್ಲಂ [ಕೊಂದಾ][3]
ಪುೞು ಪುಟ್ಟುವ ನರಕದೊಳಗೆ ಬೀೞ್ವನೆ ಚದುರಂ ೩೮

ಎಂದು ನೆನೆದಿಱಿಯಲೊಲ್ಲದೆ
ಬಂದರಸಂ ಮುನ್ನಿನಂತೆ ಪವಡಿಸೆ ತಾನುಂ
ಬಂದು ಮುಱಿದರಸನೊಱಗಿದ
ನೆಂದೊಯ್ಯನೆ ಸಾರ್ದು ಪೆಱಗೆ ಪಟ್ಟಿರ್ಪಾಗಳ್ ೩೯

1 ಬಿದಿ ಕಂಡಾಗಳ್ (ಸ). 2 ಪಂಕದಿಂ (ಸ). 3 ಗೊಂಡಾ (ಎಲ್ಲಪ್ರತಿಗಳಲ್ಲಿ).

ಬದಗುಳಿಗನ ತೋಳ್ ಮುಟ್ಟಿದ
ಸುದತಿಯೊಳಿಂ[1]ಪಾ[1]ಗದಂತೆ ಕೆಟ್ಟುದು ಪುಳಿ ಮು
ಟ್ಟಿದ ದುಗ್ಧದಂತೆ ನೀರ್ ಮು
ಟ್ಟಿದ ಜೇನ್ನೆಯ್ಯಂತೆ ಪತಿಗೆ ಶಯ್ಯಾತಳದೊಳ್ ೪೦

ಆ ಗಂಡನನಪ್ಪಿದ ತೋಳ್
ಪೋಗಂಡನನಪ್ಪುವಂತೆ ಮಾಡಿದ ಬಿದಿಯಂ
ಮೂಗಂ ಕೊಯ್ದುಟ್ಟಿಗೆಯೊಳ್
ಪೋಗೊರಸದೆ ಕಂಡೆನಾದೊಡೇಂ ಬಿಟ್ಟಪೆನೇ ೪೧

ಎನೆ ಕೇಳ್ದು ಮಾರಿದತ್ತಾ
ವನಿಪನವಂಗಭಯರುಚಿ ಬೞಿಕ್ಕಿಂತೆಂದಂ
ಮನಸಿಜನ ಮಾಯೆ ವಿಧಿವಿಳ
ಸನದ ನೆರಂಬಡೆಯೆ ಕೊಂದು ಕೂಗದೆ ನರರಂ ೪೨

ಪದವಿಯ ರೂಪಿನ ಸೊಬಗಿನ
ಮದಮಂ ಮಾಡುವರ ಮೂಗಿನೊಳ್ ಪಾತ್ರಮನಾ
ಡದೆ ಮಾಣದನಂಗನ ಕೃತಿ
ಸುದತಿಯರ ವಿಕಾರಮೆಂಬ ವಿದ್ಯಾಬಲದಿಂ ೪೩

ಆ ರಾಜಕುಮಾರಂ ಬೞಿ
ಕಾ ರೂಪಿನ ಪೆಂಡಿರಿಂತು ಕೞಿ[ಪಾ][2]ದೊಡೆ ಚಿಃ
ಕೂರಿಸುವ ಕೂರ್ಪ ಮಾತಂ
ಮಾರಿಗೆ ಕುಡು ಸಿರಿಯನೊ[3]ಟ್ಟಿ[3] ಸುಡು ಹೋಗೆಂದಂ ೪೪

---

1 ಭಾ (ಗ). 2 ಬಾ (ಸ, ಗ, ಚ). 3 ಲ್ಲೆ (ಚ).

ಒಲಿಸಿದ ಪೆಣ್ ಪೆಱರೊಳ್ ಸಂ
ಚಲಿಸಿದೊಡಿದು ಸುಖಮೆ ಪರಮಸುಖ ಸಂಪದಮಂ
ಸಲಿಸಿ ಸಲೆ ನೆರೆವ ಮುಕ್ತಿಯ
ನೊಲಿಸುವೆನಿನ್ನೊಲ್ಲೆನುೞಿದ ಪೆಂಡಿರ ನಣ್ಪಂ ೪೫

ಎಂದಿಂತು ಬಹು ವಿಕಲ್ಪದ
ದಂದುಗದೊಳೆ ಬೆಳಗುಮಾಡಿ ಮೆಯ್ಮುರಿದೆರ್ದಂ
ಬಂದು ತೊಡೆವೊಯ್ದು ಬೋಧಿಸಿ
ದಂದದಿನೆಸಗಿತ್ತು ಸುಪ್ರಭಾತಾತೋದ್ಯಂ ೪೬

ಕೃತನಿತ್ಯದಾನನಾವೀ
ಕ್ಷಿತಘೃತನಾಸ್ಪೃಷ್ಟಕಪಿಳನೊಯ್ಯನೆ ಸಾರ್ದಂ
ಕತಿಪಯ ಪರಿಚಿತ ಪರಿಜನ
ಚತುರ ವಚಃಪ್ರಚಯ ರುಚಿಯನರಸಿಯನರಸಂ ೪೭

ಲಂಪಣನವೋಲೇನಾನುಮ
ಲಂಪಿನ ನಗೆನುಡಿಯ ನೆವದೆ ನೆಯ್ದಿಲ ಪೂವಿಂ
ದಂ ಪೊಯ್ಯೆ ಮೂರ್ಛೆವೋದಳ್
ಸಂಪಗೆಯಲರ್ಗಂಪು ಪೊಯ್ದು ತುಂಬಿಯ ತೆಱದಿಂ ೪೮

ಅಕಟಕಟ ನೊಂದಳೆತ್ತಿರೆ
ಸುಕುಮಾರಿಯನೆನುತುಮಿನಿತು ಕೊಂಕಿಂ ನುಡಿದಂ
ಪ್ರಕುಪಿತಚಿತ್ತಂ ಭೂನಾ
ಯಕನೇನಣಕಕ್ಕೆ ಸವಣನುಂ ಸೈರಿಪನೇ ೪೯

ದೈವದಿನೆಂತಕ್ಕಿಂದಿನ
ಸಾವೋಸರಿಸಿದುದು ಕರ್ಣಭೂಷಾವಳಿ ಭೂ
ಷಾವಳಿಯಾಗದೆ ಸೆಳೆದೊಡೆ
ಸಾವಲ್ಲಿಗೆ ಕಯ್ದುವಾಯ್ತು ನೆಯ್ದಿಲ ಕುಸುಮಂ ೫೦

ಪೋದಿರುಳಿನ ಕಿತ್ತಡವುಂ
ಮೂದಲೆಯಾಗಿಂತು ನುಡಿದೊಡಱುದುದನಱಿದಾ
ಪಾದರಿ[1]ಗೆ ಸತ್ತವೋ[1]ಲಿರೆ
ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ ೫೧

ಮಗನ ಮೊಗಮಂ ನೀಡುಂ ನೋಡುತ್ತುಮಟ್ಕಱಳುರ್ಕೆಯಿಂ
ದುಗುವ ಮೊಲೆವಾಲ್ ಪುಣ್ಯಸ್ನಾನಾಂಬುವಾಗೆ ಪದಾಬ್ಜದಿಂ
ನೆಗಪಿ ಪಲವಪ್ಪಾಶೀರ್ವಾದಂಗಳಿಂದಮುರ್ದಪ್ಪಿ ಜೋ
ಲ್ದುಗುವ ಕುರುಳಂ ತಿರ್ದುತ್ತಿಂತೆಂದಳಂದಿನ ಭಂಗಿಯಂ ೫೨

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ
ರಭಸಮತಿಗೆ ಸಯ್ಪಂ ಪೇೞ್ದು ಧರ್ಮಕ್ಕೆ ಱಂದೀ
ಶುಭಕಥನಮನತ್ಯಾನಂದದಿಂ ಕೇಳ್ವ ಭವ್ಯ
ಪ್ರಭುಸಭೆಗೆಸೆದಿರ್ಕುಂ ಮಂಗಳಂ ಶ್ರೀ ವಿಲಾಸಂ ೫೩

---
1 ಬೇಸತ್ತವೊ (ರಾ)

## ಮೂರನೆಯ ಅವತಾರ

ಶ್ರೀರಮಣಿ ತೋರಮುತ್ತಿನ
ಹಾರದೊಳೊಲೆದುಯ್ಯಲಾಡೆ ನಿತ್ಯವಸಂತಂ
ಪೇರುರಮಾಗಿರೆ ತಾಳ್ದಿದ
ರಾರೊ ಯಶೋಧರ ನೃಪೇಂದ್ರ ನೀನಲ್ಲದವರ್ ೧

ನಿನಗೆ ಶುಭವೆಂದ ವಂದಿಯ
ಮನೆಯಂಗಣದೊಳಗೆ ಪಣ್ತು ಪರ್ವಿದ ಮಂದಾ
ರ ನಮೇರು ಪಾರಿಜಾತದ
ಬನದೊಳ್ ಸಿರಿ ಮೆಱೆವುದಲ್ತೆ ವನಕೇಳಿಗಳಂ ೨

ಮನಸಿಜ ಕಲ್ಪಲತಾ ನಂ
ದನಮೆನೆ ಬಿಂಕಕ್ಕೆ ಕೊಂಕಿದಬಳಾಜನಮಂ
ನನೆಕೊನೆವೋಗಿಸುತಿರ್ಪುದು
ಮನುಜ ಮನೋಭವ ಭವದ್‌ವಿಳಾಸ ವಸಂತಂ ೩

ಉದಧಿ ಪರಿಯಂತಮಿಳೆಯೊಳ
ಗೊದವಿದ ನಿನ್ನಾಜ್ಞೆ ಮಣಿಕಿರೀಟಂಗಳನಿ
ಪ್ದೊದೆದುರುಳೆ ನೂಂಕಿ ಕುಳ್ಳಿ
ರ್ದುದು ನೆತ್ತಿಯ ಮೇಲೆ ಸಕಲ ಭೂಪಾಲಕರಾ ೪

ಕೊಱತೆ ನಿನಗಿಲ್ಲದೇಕೆಂ
ದಱಿಯೆಂ ನೀರೋಡಿ ನಿನ್ನ ತನುವಿನ ಬಣ್ಣಂ
ಬಱುಗೊಳದವೊಲಾಯ್ತೀಕ್ಷಿಸಿ
ಮಱುಗಿದುದಱುನೀರ ಮೀನ್‌ಬೊಲಿಂದೆನ್ನ ಮನಂ ೫

ಎಂದು ಬೆಸಗೊಂಡ ತಾಯ್ಗೆ ಮ
ನಂದೋಱದೆ ನೆವದಿನರಸನಿಂತುಸಿರ್ದಂ ಸುಯ್
ಕಂದಿಸಿದಧರಕ್ಕೆ ಸುಧಾ
ಬಿಂದುಗಳಂ [1]ತಳಿ[1]ಯೆ ದಂತಕಾಂತಿ ಪ್ರಸರಂ ೬

ದೇವಿಯರ ಪರಕೆಯಿಂದೆನ
ಗಾವುದಱೊಳ್ ಕೊಱತೆಯಿಲ್ಲ ಪೋದಿರುಳೊಳ್ ಪೊಂ
ದಾವರೆಗೊಳದಂಚೆ [2]ಕಟ
ಲ್ದಾವರೆ[2]ಗೊಳದೊಳಗೆ ನಲಿವ ಕನಸಂ ಕಂಡೆಂ ೭

ಗೋದಾಮೆಗಂಡ ನವಿಲಂ
ತಾದುದು ಕಾರ್ಗಂಡ ಹಂಸನವೊಲಾದುದಲರ್
ವೋದ ಲತೆಗಂಡ ವಿರಹಿವೊ
ಲಾದುದು ದುರ್ನಯದ ಕಾಣ್ಕೆಗೆನ್ನಯ ಚಿತ್ತಂ ೮

ವನಿತೆಯ ಕೇಡಂ ಜನಪತಿ
ಕನಸಿನ ನೆವದಿಂ[3]ದೆ ಮಱಸೆ[3] ತಲ್ಲಣದಿಂ ತಾಯ್
ನೆನೆದಳ್ ಪೊಲ್ಲಮೆಯಂ ವಂ
ಚನೆಯೆಲ್ಲಿಯು[4]ಮೊಳ್ಪನಾಗಲೀಯದು[4] ಕಡೆಯೊಳ್ ೯

ಅಡಸಿದ ನಲ್ಲಳ ತಪ್ಪಂ
ತಡವಿಕ್ಕಿದೊಡೇಱು ಭವದ ಕೇಡಡಸುವ ಕಿಱು
ನುಡಿಯಂ ನುಡಿದಳ್ ತಾಯ್ ಒಂ
ದಡಸಿದೊಡೇಱಡಸಿತೆಂಬ ನುಡಿ ತಪ್ಪುಗುಮೇ ೧೦

1 ತೊಗೆ (ಗ, ಸ). 2 ಕನಲ್ದಾವರ' (ರಾ), ಕನಲ್ದಾವರೆ (ಚ). 3 ದಮುಱಿಪೆ (ಸ). 4 ೞ್ಪುಮಾಡಲಾಱದು (ಗ).

ದೇವ ಕನಸಿದು ಕರಂ ದೋ
ಷಾವಹಮಿಳಿಕಯ್ಯಲಾಗ ನಿನ್ನಸಿ ಮುಖದಿಂ
ದಾವಣಿಗುಱಿಯಂ ತಱಿದೊಡೆ
ದೇವಿ ಶುಭೇತರ ವಿನಾಶಮುಂ ದಯೆಗೆಯ್ಗುಂ ೧೧

ಮುಂತಱಿಪೆ ತಾಯ ವಚನದೊ
ಳಂತು ಶುಭೇತರ ವಿನಾಶಶಬ್ದಮಿಳೇಶಂ
ಶಾಂತಂ ಪಾಪಮೆನುತ್ತುಂ
ಶಾಂತಮನಂ ಪೇಸಿ ಮುಚ್ಚಿಕೊಂಡಂ ಕಿವಿಯಂ ೧೨

ಮೇಗಂ ಬಗೆವೊಡೆ ವಧೆ ಹಿತ
ಮಾಗದು ಮರ್ತ್ಯಂಗೆ ನಿತ್ಯಮೇ ಮಾನಸವಾಟ್
ಈಗಳೊ ಮೇಣ್ ಆಗಳೊ ಮೇಣ್
ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ ೧೩

ಎಂದೊಡೆ ಮುನಿದಂಬಿಕೆಯಿಂ
ತೆಂದಳ್ ನಿಜಮಪ್ಪ ಮೋಹದಿಂ ಸಲುಗೆಯಿನೆಯ್
ತಂದಳ್ ನಾಡೆ ನೃಪೇಂದ್ರನ
ಮುಂದಣ ಗತಿಗಪ್ಪ ಬಟ್ಟೆಯಂ ಕಟ್ಟುವವೊಲ್ ೧೪

ಪರಿಹರಿಪೆಯೆಮ್ಮ ನುಡಿಯಂ
ಗುರುವಚನಮಲಂಘನೀಯಮೆನ್ನದೆ ನೀನಾ
ದರದಿಂ ಕೈಕೊಳ್ ಧರ್ಮದೊ
ಳರಸುಗಳೇಂ ಶಾಂತಿಯೆಂದೊಡನುಸರಿಸರೆ ಪೇಟ್ ೧೫

ಇವು ಧರ್ಮಮೆಂದು ಬಗೆವೊಡ
ಮವಿವೇಕದೆ ಶಾಂತಿಮಾಡೆ ಬೇತಾಳಂ ಮೂ
ಡುವ ತೆಱದೆ ಹಿಂಸೆಯಿಂ ಮೂ
ಡುವ ಮುಂತಣ ಕೇಡನೆಂತು ಕಟಿವೆಂ ಬಟಿಯಂ ೧೬

ಜೀವದಯೆ ಜೈನಧರ್ಮಂ
ಜೀವಹಿತಂ [1]ನಂಬುವವರ್ಗೆ ಹಿಂಸೆಯ ಮೋ[ಹಂ][1]
ಭಾವಿತಮೆ ತಪ್ಪಿ ನ.ಡಿದಿರ್
ಕಾವರೆ ಕಣ್ಗೊಳ್ವೊಡಬ್ಬೆ ಬಾರಿಪರೊಳರೇ ೧೭

ಆದೊಡೆ ಪಿಟ್ಟಿನ ಕೋಟಿಯ
ನಾದೊಡಮಿಂದೊಂದನಿಕ್ಕವೇಟ್ಟುದು ಮಿಕ್ಕಂ
ದಾ ದೇವಿಗೆನ್ನನಿಕ್ಕಿಯು
ಮೀ ದುರಿತಮನಿಂದು ಮಗನೆ ಪರಿಹರಿಸದಿರೆಂ ೧೮

ಎನೆ ತಾಯ ಮೋಹದಿಂದಂ
ಜನಪನೊಡಂಬಟ್ಟು ಮನದೊಳಿಂತೆಂದಂ ಭಾ
ವನೆಯಿಂದಮಪ್ಪುದಾಸ್ರವ
ಮೆನಗಿನ್ನೆಂತಪ್ಪ ಪಾಪಮಿದಿರ್ವಂದಪುದೋ ೧೯

ಮಾಡದೊಡೆ ತಾಯ್ಗೆ ಮರಣಂ
ಮಾಡಿದೊಡೆನ್ನೊಂದು ಗತಿಗೆ ಕೇ[ಡಿಂ][2]ದೇನಂ
ಮಾಡುವೆನೆಂದಾಂದೋಳಮ
ನಾಡೆ ಮನಂ ತಮಮನಪ್ಪುಕಯ್ದುನಿಳೇಶಂ ೨೦

1 ನಂಬದರ್ಗೆ ಹಿಂಸನಮೋಘಂ (ಸ), ಸಂಬುವವರ್ಗೆ ಹಿಂಸೆಯಮೋಘಂ (ಗ,ಡ). 2 ಡುಮ (ಸ).

ಆ ನೃಪತಿ ಬಟಿಕ ತಾಯುಂ
ತಾನುಂ ಚಂಡಿಕೆಯ ಪೂಜೆಗೆಂದೆಟ್ಟಂದಂ
ನಾನಾವಿಧದರ್ಚನೆಯಿಂ
ಮಾನೋಮಿಯ ಮುಂದೆ ಬಂದ [1]ಭೌಮಾ[1]ಷ್ಟಮಿಯೊಳ್ ೨೧

ಕರಮೆಸೆಯೆ ಸಮೆದು ಬಂದುದು
ಚರಣಾಯುಧಮದಱ ಚಿತ್ರಪರಿಶೋಭೆಗೆ ಬೆಂ
ತರನೊಂದಾಶ್ರಯಿಸಿರ್ದುದು
ಸರಸಿದಳುಗ್ಗಡಿಸಿ ಜನನಿ ಪುತ್ರಂ ಪೊಯ್ದಂ ೨೨

ತಲೆಯಿಂ ಕುಕ್ಕೂಕೂ ಎಂ
ಬುಲಿ ನೆಗೆದುದು ಕೂಗಿ ಕರೆವ ದುರಿತಂಗಳ ಬ
ಲ್ಲುಲಿಯೆನೆ ಪಿಟ್ಟಿನ ಕೋಟಿಯು
ತಲೆಯಂ ಪಿಡಿವಂತಿರಟ್ಟೆ ಪಾಱಿದುದಿನಿಸಂ ೨೩

ಪೊಡೆಯೆ ಕೃಕವಾಕು ನಿನದಂ
ಬಿಡದುಣ್ಮುತಿರಲ್ಕೆ ಕಯ್ಯ ಬಾಳ್ ಬೀೞ್ತರೆ ಪೊಯ್
ವಡೆದಂತೆ ಪಂದೆಯಂ ಪಾ
ವಡರ್ದಂತಾಗಿರೆ ಯಶೋಧರಂ ಬೆಱಗಾದಂ ೨೪

ಏಕೆ ಕನಸೆಂದು ನುಡಿದೆನಿ
ದೇಕಂಬಿಕೆ ಬಲಿಯನೊಡ್ಡಿದಳ್ ಕೂಗಿದುದೇ
ಕೀ ಕೃತಕ ತಾಮ್ರಚೂಡನಿ
ದೇಕೆಂದಾರಱಿವರಯ್ಯ ವಿಧಿ ವಿಳಸನಮಂ ೨೫

1 ಬಹುಳಾ (ಸ).

ಅಮೃತಮತಿಯೆಂಬ ಪಾತಕಿ
ಯ ಮಾಯೆ ಬನವಾಯ್ತು ಚಂದ್ರಮತಿಮಾತೆಯ ಮಾ
ತೆಮಗೆ ಬಲೆಯಾಯ್ತು ಹಿಂಸನ
ಮಮೋಘ ಶರವಾಯ್ತು ಕೆಡೆದುದಾತ್ಮಕುರಂಗಂ ೨೬

ಎಂದು ಮನಂ ಮಱುಗುವಿನಂ
ನೊಂದಲ್ಲಿಂ ತಳರ್ದು ಮನೆಗೆ [1]ಉಬ್ಬೆಗಮೆಡೆದೊ[1]
ಯ್ವಂದದೆ ಬಂದೀ ರಾಜ್ಯದ
ದಂದುಗಮೇಕೆಂದು ತೊಱೆಯಲುದ್ಯತನಾದಂ ೨೭

ಪರಿವಾರಮಂ ಪ್ರಧಾನರ
ನಿರಿಸಿ ಯಶೋಮತಿಗೆ ರಾಜ್ಯಮಂ ಕೊಟ್ಟು ಯಶೋ
ಧರನಿಂತು ತಪಕೆ ನಡೆಯ
ಲ್ಕಿರೆ ಮೃತ್ಯುವಿನಂತೆ ಅರಸಿ ಬಂದಿಂತೆಂದಳ್ ೨೮

ದೇವರ ಬಟಿಯೊಳೆ ಬರ್ಪೆಂ
ಪೂವಿನ ಸೌರಭದ ಮಾಡ್ಕೆಯಿಂ ಗಮನ ಪ್ರ
ಸ್ತಾವನೆಯೊಳಿಂದು ನೀಮುಂ
ದೇವಿಯುಮಾರೊಗಿಸಲಕ್ಕೆ ಎನ್ನರಮನೆಯೊಳ್ ೨೯

ಎನೆ ಜನಪತಿ ಮನಮಲ್ಲದ
ಮನದೊಳೊಡಂಬಟ್ಟು ಬಂದು ತಾಯೊಡನುಣೆ ನಂ
ಜಿನ ಲಡ್ಡುಗೆಯಂ ಮಾಡಿದು
ದನುಣ್ ಮಹಾರಾಜ ಎಂಬಿನಂ ಸವಿದುಂಡಂ ೩೦

---
[1] ನಿರ್ವೇಗದೊಳೊ (ಸ).

ಅರಸನ ಮೂದಲೆ ಮನದೊಳ
ಗಿರೆ ಮೇಳಿಸಿಕೊಂಡು ಬಂದು ಪಾತಕಿ ಕೊಂದಳ್
ಬೆರಗಿಂ ಗಂಡನನಾ ಸ್ತ್ರೀ
ಚರಿತಮದೇಂ ಕಳೆಯಲರಿದು ಪೆಂಡಿರ ಕೃತಕಂ ೩೧

ಆ ಪಕ್ವಾನ್ನಮೆ ಮೃತಿಗು
ದ್ದೀಪನ ಪಿಂಡದವೊಲಾಗೆ ಅಘದಿಂ ಬೀಜಾ
ವಾಪಮೆನೆ ಜನ್ಮಲತೆಗೆ ಕ
ಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ ೩೨

ಅಂತೊಗೆದು ಮೊಟ್ಟೆಯೊಡೆದ
ಲ್ಲಿಂ ತೊಲಗದು ತುಪ್ಪುಟಿಡದು ಕಾಲ್ ಬಲಿಯದು ಕ
ಣ್ಣಂ ತೆಱೆಯದೆಂಬ ಪದಕೆ ಕೃ
ತಾಂತನ ಹರಿಯಂತೆ ಕವಿದು ಬೇಂಟೆಯೊಳೊರ್ವಂ ೩೩

ಬೇಡಂ ಪಿಳುಕೊತ್ತಿನ ತಾಯ್
ಓಡಲ್ ಬಿಟ್ಟಲ್ಲಿ [1]ಕೊಂಡು ಬಂದಾ[1] ಪಿಳುಕಂ
ಬೇಡಿತಿಗೆ ಸಲಹಲಿತ್ತೊಡೆ
ಗೂಡಿನೊಳದು ಬೆಳೆದು ತಳೆದುದಂಗಚ್ಛವಿಯಂ ೩೪

ನವರತ್ನದ ಪಂಜರದೊಳ್
ದಿವಿಜಶರಾಸನದ ಮಱಿಯನಿರಿಸಿದವೋಲೆ
ತ್ತುವ ಸೋಗೆಯ ಸುತ್ತಿನೊಳಾ
ಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ ೩೫

1 ಪಿಡಿದು ತಂದಾ (ಸ).

ಕರಹಟದೊಳ್ ಬೇಂಟೆಯ ಕು
ಕ್ಕುರಿಯಾದಳ್' ಸತ್ತು ಚಂದ್ರಮತಿಯುಂ ಬಟಿಕಾ
ಯೆರಡುಮುಪಾಯನ ಘಟನೆಯಿ
ನರಮನೆಯಂ ಸಾರ್ದುವಾ ಯಶೋಧರ ಸುತನಾ ೩೬

ತವಗಂಜುವವರ್ಗೆ ತಾವಂ
ಜುವ [1]ತಮ್ಮಂಜಲ[ನೆ] ತಿಂಬ[1]ರೆಂಜಲ ತಾವ್ ತಿಂ
ಬವನಿಪರಾದಲ್ಲಿಯೆ ನಾಯ್
ನವಿಲಪ್ಪನಿತಾಯ್ತು ನೋಡ ಪಾಪದ [2]ಫಲಮಂ[2] ೩೭

ನವಿಲಮೃತಮತಿಯ ಸೆಜ್ಜೆಯ
ದವಳಾರದೊಳಾಡುತಿರ್ದು ಒದಗನುಮಂ ತ
ನ್ನವಳೊಡಗೂಡಿರೆ ನಿಟ್ಟಿಸಿ
ಭವರೋಷದಿನಿಱಿದುದಷ್ಟವಂಕನ ಕಣ್ಣಂ ೩೮

ಆನ್ ಬೆಂದೆನೆಂದು ನವಿಲಂ
ಪಾಣ್ಬೆ ಕನಲ್ದಡಸಿ ಪೊಯ್ಯೆ ಮೇಗಣ ನೆಲೆಯಿಂ
ದಂ ಬಿರ್ದುದು ಪಚ್ಚೆಯ ಪದ
ಕಂ ಬೀೞ್ವಂತಿರೆ ಸುಧಾಂಶು ಬಿಂಬದ ಕೊರಲಿಂ ೩೯

ಅರಸನುಮಾಗಳೆ ನೆತ್ತದ
ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಗೆಂ
ದರೆ ಗೆತ್ತು ಪಿಡಿದುದಂಬಾ
ಚರಿ ಕುಕ್ಕುರಿ ನೊಂದು ಬೀೞ್ವ ನಂದನ ಚರನಂ ೪೦

1 ತಮ್ಮಂಜಲನಾಯ' ತಿಂಬ (ಸ), ರೆಂಜಲನಾಯ್ದುತಿಂಬ (ಗ). 2 ಫಲದಿಂ (ಗ).

ಮತ್ತೆ ನೃಪಂ ನಾಯ್ ತಿಂದುದು
ನೃತ್ಯಚಮತ್ಕಾರನಂ ಮಯೂರನನೆಂದಾ
ನೆತ್ತದ ಮಣೆಯಿಂದಿಱಿದೊಡೆ
ನೆತ್ತಿ ಪಿಸುಳ್ದತ್ತು ಸತ್ತುವಂತಾ ಎರಡುಂ ೪೧

ಮಱುಗಿದನಿಳೇಶನಾ ಎರ
ಡಱಿ ಸಾವಿಂ ತಂದೆತಾಯ್ವಿರಟೆದಂತಿರೆ ಕ
ಣ್ಣಱಿಯದೊಡಂ ಕರುಳಱಿಯದೆ
ಮಱುಗಿಸದಿರ್ಪುದೆ ಭವಾಂತರ ವ್ಯಾಮೋಹಂ ೪೨

ಆ ವಿಂಧ್ಯ ನಗದೊಳಾ ನಾಯ್
ಪಾವಾಯ್ತಾ ನವಿಲುಮೆಯ್ಯಮೃಗಮಾಯ್ತಾ ಎಯ್
ಪಾವಂ ಪಗೆ ಮಿಗೆ ತಿಂದುದು
ಮೇವಂತಿರೆ ಪುಲ್ಲಸರವಿಯಂ [1]ಪುಲಿ[1]ಗೋಣಂ ೪೩

ಉರಗಿಯನೆಯ್ ಪಿಡಿದೊಡದರಂ
ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂ
ತಿರೆ ಪಿಡಿದುದು ಪರಚಿಂತಾ
ಕರ ಏಹಿ ಎನಿಪ್ಪ ಸೂಕ್ತಿ ತಪ್ಪದವೋಘಂ ೪೪

ಮೀನಾದುದೆಯ್ಯಮೃಗಮು
ಜ್ಜೇನಿಯ ದೇಶದೊಳುಮೆಸೆವ ಸಿಂಪಾನದಿಯೊಳ್
ತಾನಲ್ಲಿ ಮೊಸಳೆಯಾದ
ತ್ತಾ ನಾಗನುಮಾಗಿ ಬೆಳೆಯೆ ಮತ್ತೊಂದು ದಿನಂ ೪೫

1 ಬಲ್ (ಗ).

ನದಿ ಕಣ್ದೆಱೆದಂತೆ ಪೊಳಂ
ಕಿದ ಮೀನಂ ಮೊಸಳೆ ಪಾಯೆ ನರಪತಿಯ ವಿನೋ
ದದ ಗುಜ್ಜ ಸಿಕ್ಕೆ ಪಿಡಿದ
ತ್ತ ದನಧಿಪತಿ ಜಾಲಗಾಱರಿಂ ತೆಗೆಯಿಸಿದಂ ೪೬

ಪಲವಂದದ ನಿಗ್ರಹದಿಂ
ಕೊಲಿಸಿದೊಡಾ ಮೊಸಳೆ ಸತ್ತು ಮದುವೆ ಬೞಿಕ್ಕಾ
ಪೊಲಗೇರಿಯಾಡಿನೊಡಲೊಳ್
ನೆಲಸಿ ಬೞಿಕ್ಕೊಯ್ಯನೊಗೆದುದಾಡಿನ ರೂಪಿಂ ೪೭

ಮತ್ತೊರ್ಮೆ ಜಾಲದೊಳ್ ಸಿ
ಕ್ಕಿತ್ತೆಯ್ಯಾಗಿರ್ದ ಮೀನದಂ ಶ್ರಾದ್ಧಕ್ಕ
ತ್ಯುತ್ತಮ ಲೋಹಿತಮತ್ಸ್ಯಮು
ನುತ್ತಮಮೆಂದೊಂದು ಕಡೆಯಿನಡಿಸಿದನರಸಂ ೪೮

ಉೞಿದ ಕಡೆ ಜೀವಮೇಱು
ತ್ತಿೞಿಯುತ್ತಿರೆ ನೀರೊಳಿರಿಸಿ ಜೀವಶ್ರಾದ್ಧ
ಕ್ಕುೞಿದಿರ್ದ ಮಾಜನಂಗಳ್
ಕೞಿಯುಂಡಾಪೋಶಿಪಲ್ಲಿ ನೆನೆದುದು ತನ್ನಂ ೪೯

ಮೀನಾಗಿ ಸಾಯುತಿರ್ದಪೆ
ನಾನೀ ಪಾರ್ವರ್ ಯಶೋಧರಂ ಸುಖದಿಂದಿ
ರ್ಕೆ ನಾಕದೊಳೆಂದೊಳ್ದಪ
ರೀ ನೃಪನುಂ ನಂಬಿದಪ್ಪನಕ್ಕಟ ಬಿದಿಯೇ ೫೦

ಎನುತುಂ ಜಾತಿಸ್ಮರನ
ಪ್ಪನಿಮೇಷಂ ಜೀವಿತಾಂತ್ಯದೊಳ್‌ ಮುನ್ನೊಗೆದಾ
ಡಿನ ಬಸಿಱೊಳ್‌ ಬಂದುದು ಪೋಂ
ತಿನ ರೂಪಿಂ ಬೆಳೆದು ಬಟಿಕ ಮದನೋನ್ಮತ್ತಂ ೫೧

ಬೆದೆಯಾದ ತಾಯನೇಱಿ
ತ್ತದು ಸೊರ್ಕಿದ ಗೂಳಿ ತಾಯನೇಱಿತ್ತೆಂಬಂ
ದದೆ ಮತ್ತಮೊಂದು ಬಸ್ತಕ
ಮದನಿಱಿಯಲ್‌ ಸತ್ತು ಪೊಕ್ಕುದಜೆಯೊಳ್‌ ಜೀವಂ ೫೨

ಅಲ್ಲಿಯೆ ಪೋಂತಪ್ಪುದುಮದು
ಮೆಲ್ಲನೆ ತೆನೆ ತೀವಿ ಸುಟಿಯೆ ಕಂಡೊರ್ಮೆ ಮಹೀ
ವಲ್ಲಭನುಂ ಬೇಂಟೆಯೊಳಡ
ಗಿಲ್ಲದೆ ಬರುತೆಚ್ಚನಿದಿರೊಳಜಗರ್ಭಿಣಿಯಂ ೫೩

ಇಸೆ ಪಸುಮಱಿ ಯೋನಿಮುಖ
ಪ್ರಸವಕ್ಕಲಸಿದವೊಲೇಱಿ ಬಾಯಿಂ ತಾಯೊಂ
ದಸುವೆರಸು ಬಿರ್ದುದಂ ರ
ಕ್ಷಿಸಲಿತ್ತಂ ಮಾದರಂಗೆ ಕರುಣದಿನರಸಂ ೫೪

ಒರ್ಮೆ ಯಶೋಮತಿ ಮೃಗಯಾ
ನರ್ಮಮನಂ ಪರಸಿ ನಡೆದು ಮೃಗಮುಂ ಪಡೆದೊಂ
ದೆರ್ಮೆಯ ಪೋರಿಯನಿಕ್ಕಿದ
ನೂರ್ಮಾರಿಗೆ ಮತ್ತಮದನೆ ಮಹಳಕ್ಕಿತ್ತಂ ೫೫

ಆದಱಿಡಗು ಮುಗ್ಗಿ ಪುೞು ಪ
ತ್ತಿದೊಡಾಱಿಲ್ ಪರಪೆ ಕಾಗೆಯುಂ ನಾಯುಂ ಮು
ಟ್ಟಿದೊಡದನೆ ಶುದ್ಧಮಂ ಮಾ
ೞ್ಪುದನಿಂತೆಂದೋದಿದರ್ ಪುರೋಹಿತರೆಲ್ಲಂ ೪೬

ಶುಚಿರಜರಜಸಿ ಭವೇನ್ ಮಾಸ್
ಪಚನೇ [ಶ್ವ]ಸ್ಪೃಷ್ಟದೋಷಮೆಂಬುದು ವೇದ
ಪ್ರಚುರಮೆನೆ ಕೇಳ್ದು ನೃಪನಾ
ವಚನಮುಮಂ ನಂಬಿ ನೆಱೆದ ಪೋಲೆಯರ ಪೋಂತಂ ೪೭

ತರಿಸಿ ಪರಿಶುದ್ಧಿಗೆಯ್ದದ
ನಿರಿಸಿದೊಡಾ ಪಾರ್ವರುಂಡು ತಣಿದೆರ್ದು ಯಶೋ
ಧರ ಚಂದ್ರಮತಿಗಳೊಸೆದು
ಣ್ಬರೆ ಸಗ್ಗದ ಸುಖಮನೆಂದೊಡೋಹೋಯೆಂದರ್ ೪೮

ಆ ವಿಪ್ರಘೋಷಣಂ ಸ್ಮೃತಿ
ಗಾವಹನ [1]ವಿಧಾನ[1]ಮಾದವೋಲಜಪೋತಂ
ಭಾವಿಸಿದುದಾನ್ ಯಶೋಧರ
ದೇವನೆ ಎನ್ನಾತ್ಮಜಂ ಯಶೋಮತಿ ಈತಂ ೪೯

ಪೋಂತಾದೆನಿಲ್ಲಿ ಸಗ್ಗದೊ
ಳೆಂತುಂಡಪೆನುಂಡ ಪಾರ್ವರೊಲಿದುದು ಗೆಡೆವರ್
ಪೋಂತಂ ಕೊಂದು ದಿವಕ್ಕದು
[2] ಮುಂತಾಗಿರೆ ಸಲ್ವೆಮೆಂಬರಿದನೇನೆಂದರ್ [2] ೫೦

---

[1] ನಿದಾನ (ಗ). [2] ಮುಂತಾಗಿಯೆ ಸಲ್ವುದೆಂಬರಿದನೇನೆನ್ನರ್ (ಗ).

ಈ ನಗರಿಯಪ್ಪುದೆಮ್ಮು
ಜ್ಜೇನಿ ಇದಾನಿರ್ಪ ನೆಲೆಯ ದವಳಾರಮಿದುಂ
ತಾನಮೃತಮತಿಯ ಮಾಡಂ
ಮಾನಿನಿ ನಂಜಿಟ್ಟಳೆನಗೆ ಮುಡುಪಿದೆನಿದಱೊಳ್ ೬೧

ಇರ್ದಳೊ ಮೇಣ್ ಬರ್ದಳೊ ಮೇಣ್
ಅರ್ದಳೊ ಮೇಣ್ ಅಷ್ಟವಂಕನೊಳ್ ಕಷ್ಟೆ ಅದೆಂ
ತಿರ್ದಳೊ ಕಾಣೆನದೇಕೆನು
ತಿರ್ದುದು ಕೋಟಲೆಗೆ ಕೋಡು ಮೂಡಿದ ತೆಱದಿಂ ೬೨

ಇತ್ತಲ್ ನೃಪನಂದೆಚ್ಚೊಡೆ
ಸತ್ತಾಡು ಕಳಿಂಗದಲ್ಲಿ ಕೋಣನ ಮೆಯ್ಯಂ
ಪೆತ್ತಿರೆ ಬೆನ್ ಮುಱಿವಂತಿರೆ
ಪಿತ್ತಳೆಯಂ ಪೇಱಿ ತಂದು ಬಿಟ್ಟಂ ಪರದಂ ೬೩

ನೀರಡಸಿ ಕುಡಿದು ಸಿಂಪೆಯ
ನೀರೊಳಗರೆಮುಱುಗಿ ಮಗ್ಗುಲಿಕ್ಕಿರ್ದುದು ಮು
ನ್ನೀರಂ ನೀಲಾಚಲದಿಂ
ಸಾರಂಗಟ್ಟಿದವೊಲಿರೆ ಬಱಲ್ದು ಲುಲಾಯಂ ೬೪

ಆಯೆಡೆಗೆ ನೀರುಣಲ್ ಬರೆ
ಜಾಯಿಲಮರಸನ ಪಸಾಯಿತಂ ಕೋಡೆರಡುಂ
ಕೋಯೆ ಸೆಳೆದಶ್ವಮಹಿಷ
ನ್ಯಾಯಂ ನಿಲೆ ಕೊಂದುದಂತದಂ ಕೇಳ್ದರಸಂ ೬೫

ಕಡೆಯೊಳ್ ಕೋೕಣನ ಪೋೕರ್ಕುೞಿ
ಗಿಡುವಿಗೆ ಮಿತ್ತೆಂಬ ತೆಱದೆ ಪರದನ ಬೀೕಡಂ
ಬಿಡೆ ಸೂಱೆಗೊಂಡು ತನ್ನಂ
ಪಿಡಿತರಿಸಿ ವಿಚಿತ್ರಮಪ್ಪ ಕೊಲೆಯಂ ಕೊಂದಂ ೬೬

ಆಸನದಿಂ ಬಾಯಿಂ ಪೊಯ್
ಸಾಸವೆ ಮೆಣಸುಪ್ಪುಗೂಡಿ ನಿಲವಿನ ಸೂಡಿಂ
ಲೇೕಸಾಗಿ ಬೆಂದ ಬಾಡಂ
ದಾಸಣಿಸಿಟ್ಟದನೆ ಅಮೃತಮತಿಗಟ್ಟಿಸಿದಂ ೬೭

ಅದು ಸತ್ತು [1]ಸವೆ[1]ದೊಡಾ ಮಾಂ
ಸದ ಸವಿಗಂಡರಸಿ ಬಾಣಸಿನ ಮನೆಯೊಳ್ ಕ
ಟ್ಟಿದ ಪೋೕಂತಂ ತಿಂಗುಱಿ ಮಾ
ಡಿದಳದನರಿವಲ್ಲಿ ತೊತ್ತಿರೆಂಗುಂ ತಮ್ಮೊಳ್ ೬೮

ಬಸಿದಪುದು ಮೆಯ್ಯ ಕೀೕವುಂ
ರಸಿಗೆಯುಮೊಡಲಟಿದುದಾದೊಡಂ ಮಾಣಳೆ ನಾಯ್
ಬಸನಿಗತನಮಂ ಮಾಣ್ದೀೕ
ಕಿಸುಗುಳಿಯಂ ಜವನುಮುಯ್ಯಲೇೕಂ ಪೇೕಸಿದನೋೕ ೬೯

ಮದನನ ಮಾಱಂಕದ ಚೆಂ
ದದ ಗಂಡನನಮೃತದನ್ನಳತ್ತೆಯನಿವಳೋೕ
ವದೆ ಕೊಂದಳ್ ಪಾಪಂ ತಿ
ನ್ನದು ಪಾತಕಿ ಪುಟಿತೊಡಲ್ಲದೇೕಂ ಸತ್ತಪಳೇೕ ೭೦

1 ಸವಿ (ಸ).

ತೊನ್ನನ ಕೂಟದಿನಾದುದು
ತೊನ್ನೀ ರೋಗಕ್ಕೆ ಬಾಡು ಕಳ್ ವಿಷಮೆನೆಯುಂ
ಮನ್ನಿಸಳೆ ಮಗನ ಮಾತನಿ
ದೇಂ ನಾಯಕನರಕಮಿಾಕೆಗೊಚ್ಚತವಾಯ್ತೋ ೨೧

ಎಂಬ ನುಡಿಗೇಳ್ದು ಮೋಪಳ್
ಪಾಣ್ಬನ ಕೂಡಿರ್ದ ನೆಣ್ಪುಗಂಡುಂ ತಮದಿಂ
ದಂ ಬೆಂದು ಸತ್ತುದರೆಗೊ
ಯ್ದುಣ್ಬದಱಿಂ ನೊಂದು ಸತ್ತುದಿಲ್ಲಜಪೋತಂ ೨೨

ಆ ರೌದ್ರಹತಿಗೆ ತವೆ ಸಂ
ಸಾರಂ ತತ್ಪುರದ ಪೊಱಗೆ ಪುಟ್ಟಿದುವಂತಾ
ಸೈರಿಭಮುಂ ಪೋಂತುಂ ಪೊಲ
ಗೇರಿಯ [1]ಮಾದರರ[1] ಮನೆಯ ಕೋಟಿಯ ಬಸಿಱೊಳ್ ೨೩

ಕರಮೇಬ್ಗೆಯುಳ್ಳ ಪಿಳ್ಳೆಗ
ಳೆರಡುಮನೋಲಗಿಸಿದಂ ನೃಪಂಗಲ್ಲಿಯ ಮಾ
ದ[2]ರ[2]ನಿತ್ತು ಚಂಡಕರ್ಮಂ
ಗರಸನವಂ ನೋಡಿ ಸಲಹು ನೀನೆಂದಿತ್ತಂ ೨೪

ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರಾರೆ ಕೂರ್ಪಸೆದುದು ಚಾಗಿಯಂತೆ ನೆಱೆ ಕೊಟ್ಟೆಸೆದೊಪ್ಪಿತು ರಾಧೆಯಂತೆ. ಸಂಧಿಸಿ ಮುಡಿ ಮೇಲೆ ಕೊಂಕಿದುದು ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರೆ ತಳ್ತು ಹೇಂಟೆಯೊಳ್ ೨೫

1 ಮಾದಱರ (ಸ), ಮಾದಿಗರ (ಗ). 2 ಱ (ಸ).

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ
ರಭಸಮತಿಗೆ ಸಯ್ಪಂ ಪೇೞ್ದು ಧರ್ಮಕ್ಕೆ ತಂದೀ
ಶುಭಕಥನಮನತ್ಯಾನಂದದಿಂ ಕೇಳ್ವ ಭವ್ಯ
ಪ್ರಭುಸಭೆಗೆಸೆದಿರ್ಕುಂ ಮಂಗಳಂ ಶ್ರೀ ವಿಲಾಸಂ ೭೬

# ನಾಲ್ಕನೆಯ ಅವತಾರ

ರತಿವೆರಸು ಮನಸಿಜಂ ಬನ
ದತಿಶಯಮಂ ನೋಡಲೆಂದು ಬರ್ಪಂತೆ ಯಶೋ
ಮತಿ ಕುಸುಮಾವಳಿ ವೆರ[1]ಸು
ನ್ನತಪೀತ[1]ಚ್ಛತ್ರನಂದನಂ ನಡೆತಂದಂ ೧

ಎಲೆ ಸುಲಿದೆಡೆಗಳ [ಕಣ್][2]ಕ
ಣ್ಗಲೆಯೆಡೆ ಗಂಟೊಡೆದು ಪೊನಸಿ ನನೆದೋಱು ಮುಗು
ಳ್ತಲರ್ದು ಮಱುದುಂಬಿಗಂ ತೆಂ
ಬೆಲರ್ಗಂ ಮುದ್ದಾದುವಲ್ಲಿ ಪೊಸಮಲ್ಲಿಗೆಗಳ್ ೨

ಕೊಳದೊಳಗೋಲಾಡಿ ತಳಿ
ರ್ಗಳ ಮಾವಿನೊಳುಯ್ಯಲಾಡಿ ನರಪತಿ ಕುಸುಮಾ
ವಳಿಯೊಳ್ ರತಿರಾಗದಿನೋ
ಕುಳಿಯಾಡಿ ವಿಲಾಸಗೋಷ್ಠಿಯೊಳ್ ಕುಳ್ಳಿರ್ದಂ ೩

ಗರಟಿಗೆಗಿತ್ತಲ್ ತದ್ವನ
ಪರಿಸರದೊಳ್ ಬರುತಮಿರ್ದ ಕಂಪನರೆಂಬರ್
ತರುಮೂಲದೊಳಿರೆ ನಿಧಿಯಂ
ಕುರುಡಂ ಕಾಣ್ಬಂತೆ ಚಂಡಕರ್ಮಂ ಕಂಡಂ ೪

ಮನಮಿರೆ ಪುರ್ವಿನ ಮೊದಲೊಳ್
ಮನದೊಳಗಿರೆ ವಾಯು ಕರಣತತಿ ವಾಯುವಿನೊಳ್
ಕುನಿದಿರೆ ಪದ್ಮಾಸನದೊಳ್
ತನುವಿರೆ ಯೋಗೀಂದ್ರನಾತ್ಮಚಿಂತೆಯೊಳಿರ್ದಂ ೫

1 ಸನ್ನೀತಪಿಂಚ (ಸ). 2 ಕಂ (ಚ).

ಎಱಗಿದನಾತಂ ಗೌರವ
ಮಱಯದೆಯುಂ ದೀಪವರ್ತಿ ನಿಧಿಗಾಣ್ಬುದುಮೊ
ಲ್ದೆಱಗುವ ತೆಱದಿಂ ಮುನಿ ಕಣ್
ದೆಱೆದೊಯ್ಯನೆ ನೋಡಿ ಪರಸೆ ಬಳಿಕಿಂತೆಂದಂ ೬

ಎಲೆ ದೇವರೆ ಪುತ್ರಂ ಬ
ತ್ತಲೆಯುಂ ಬಱಿದಿಲ್ಲದೆಂಬರದು ಕಾರಣದಿಂ
[1]ನೆಲೆಯಾಂದೆಯನಟ್ಟಿದವೋ
ಲೆಲೆ[1]ಮಿಡುಕದೆ ನೆನೆಯುತಿರ್ದಿರೇನಂ ಮನದೊಳ್ ೭

ಅವಧಾರಿಸಿ ಕೇಳ್ವುದುಮವ
[ನ][2]ವಧಿಯಿನಾಸನ್ನ ಭವ್ಯನೆಂಬುದನಱಿದಿಂ
ತವರಿಂತು ನುಡಿದರಾತ್ಮನ
ನವಿಕಲ್ಪಂ ನೆನೆಯುತಿರ್ದೆವೆನೆ ಮತ್ತಾತಂ ೮

ಆವೆಡೆಯೊಳಿರ್ದನಾತ್ಮಂ
ಗಾವುದು ಕುಱುಪೆಂದೊಡಂಗಿಯಂಗದೊಳೆಲ್ಲಂ
ತೀವಿರ್ಪಂ ಭೂತಚತು
ಷ್ಟಾವಯವದಿನನ್ಯನಾತ್ಮನತಿಚೈತನ್ಯಂ ೯

ಎಂದೊಡೆ ತಳಾಱನಾಯಕ
ನೆಂದಂ ನೀಮೆಂದ ಮಾತು ಪೊಲ್ಲದು ನೋಡ
ಲ್ಕೆಂದು ಪಲರಂ ವಿಚಾರಿಸಿ
ಕೊಂದೆಂ ತನುವಲ್ಲದಾತ್ಮನಂ ಕಂಡಱಿಯೆಂ ೧೦

1 ನೆರೆಯಾಂದೆಯಮನರ್ಚಿಸಿದೆಲೆ (ಸ). 2 ರ (ಸ,ಗ,ಚ).

ಕಡಿದು ಕಱುಕಱಿದನೆಲುವಂ
ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಂಕಂ
ಬಿಡಿಸಿ ನಡೆ ನೋಱ್ಪೆನೊಳಗೆ
ಲ್ಲಡಗಿರ್ಪುದು ಜೀವನಿರ್ಪೊಡೆಲ್ಲಿಗೆ ಪೋದಂ ೧೧

ಕುದಿರೊಳ್ ಕಳ್ಳನನಿಕ್ಕಿಸಿ
ಸೊದೆಯಿಟ್ಟರೆ ಬಳಿದು ಬಟಿಕ ತೆಱೆದೊಳಗಂ ನೋ
ಡಿದೆನಾತ್ಮನಿಲ್ಲ ತನುವಿ
ಪ್ರ್ದು ಬೇಱೆಂಬಾತ್ಮನಂ [1]ನೆ[ಲಂ][1] ನುಂಗಿದುದೋ ೧೨

ತೂಗಿಸಿ ತೊಲೆಯೊಳ್ ಬಾಯಂ
ಮೂಗುಮ[ನ][2]ಡೆಯೊತ್ತಿ ಕೊಂದ ಕಳ್ಳನ ದೇಹಂ
ತೂಗಿದೊಡೆ ಕುಂದದಾತ್ಮ ವಿ
ಭಾಗಂ ಬೇಱಿಲ್ಲ ಜೀವನೆಂತುಂ ದೇಹಂ ೧೩

ಎಂದೊಡೆ ದಂಡಧರಂಗಿಂ
ತೆಂದರ್ ಗುರುಗಳ್ ವಿಮೋಹಮೃಗಮಂ [3]ಮಿಥ್ಯಾ[3]
ಕಂದರದೊಳ್ ಬೆದಱಿಟ್ಟುವ
ದುಂದುಭಿ ರವದಂತಿರೊಗೆಯೆ ಗಂಭೀರ ರವಂ ೧೪

ತಱಿದೊಡೆ ಕಡಿದೊಡೆ ಸೀಳ್ದೊಡೆ
ಪೊಱಮಡುವುದೆ ಕಿಚ್ಚು ಕಾಷ್ಠದಿಂ ಪೊಸೆಯಲೊಡಂ
ಪೊಱಮಡುವುದಂತೆ ಜೀವಂ
ಪೆಱತೊಡಲಿಂ ತೋಱುಗುಂ ವಿವೇಕ ಕ್ರಿಯೆಯಿಂ ೧೫

1 ನೆಗಡ್ (ಗ, ಚ, ಸ). 2 ನೊ (ನ, ಚ, ಗ). 3 ವಿಂಧ್ಯಾ (ನ).

ಕುದಿರೊಳಗಿರ್ದೂದಿದ ಶಂ
ಖದ ದನಿ ನಿಶ್ಛಿದ್ರಮಾದೊಡಂ ಪೊಣ್ಮದೆ ಶಂ
ಖದಿನನ್ಯಮಲ್ಲದೇಂ ಪೊ
ಣ್ಮಿದ ನಾದಂ ಕಾಯದಿಂದೆ ಜೀವನುಮನ್ಯಂ ೧೬

ತೀವಿದ ತಿದಿಯಂ ತೂಗಿಯು
ಮಾ ವಾಯುವನಿಟಿಪಿ ತೂಗಿಯುಂ ಸರಿ ತಿದಿಯಿಂ
ದಾ ವಾಯು ಬೇಱೆ ತನುವಿಂ
ಜೀವಂ ಬೇಱೆಂದು ಮಗನೆ ಭಾವಿಸಿ ನೋಡಾ ೧೭

ಕಲ್ಲೊಳ್ ಪೊನ್ ಪಾಲೊಳ್ ಘೃತ
ಮಿಲ್ಲೆನವೇಡುಂಟು ದೇಹದೊಳಗಾತ್ಮನದೇ
[1]ಕಿಲ್ಲ ಕುರುಡಂಗೆ ತೋಱಿದೊ
ಡಿಲ್ಲಪ್ಪುದೆ ವಸ್ತು ಭೇದಿ[1]ಪಂಗಾತ್ಮನೊಳಂ ೧೮

ಮಾಡುವನಾತ್ಮಂ ನೆಟ್ಟನೆ
ಮಾಡಿತನುಣ್ಬಾತನಾತ್ಮ[2]ನಘಜಲಧಿಯೊಳೋ
ಲಾಡುವೊಡಂ ಗುಣಗಣದೊಳ್
ಕೂಡುವೊಡಂ ಜನ್ಮಜಲಧಿಯಂ ದಾಂಟುವೊಡಂ[2] ೧೯

ಪರಮಾತ್ಮನೆನ್ನನೆಂದೊಡೆ
ಚರಮಾಂಗಪ್ರಮಿತನಖಿಲಲೋಕ ಸಮಾನಂ
ನಿರವಯವಂ ನಿತ್ಯಂ ನಿರ್
ದುರಿತನನಂತ ಪ್ರಬೋಧ ದರ್ಶನ ಸೌಖ್ಯಂ ೨೦

---

1 ಕಲ್ಲಿರ್ಪನ್ ವಸ್ತುವನಂತೆಲ್ಲಾ ತೆಱದಿಂದೆಭಾವಿ (ಸ). 2 ನಿತ್ತೆ ಱದಿನುಣರ್ ವೇಡಿದುದು ಕರ್ಮಮದಱಿಂ ಕೇಡೆಂಬುದು ಮುಕ್ತಮುಕ್ತನುಂ ಪರಮಾತ್ಮಂ (ಸ).

ಕೇವಲ ವಿಬೋಧನೇತ್ರನೆ
ದೇವನೆ ಪರಮಾತ್ಮನಾಗಮಂ ತದ್ವಚನಂ
ಜೀವದಯೆ ಧರ್ಮಮೆಂಬೀ
ಭಾವನೆಯಂ ನೆಱೆಯೆ ನಂಬುವುದು ಸಮ್ಯಕ್ತ್ವಂ ೨೧

[1]ಕೊಲಲುಂ ಪುಸಿಯಲುಮಾಗದು
ಸಲಲಾಗದು ಪೆಱರ ಪೆಂಡಿರೊಳ್ ಕಳವನಣಂ
ಕಳಲಾಗದು[1] ತೀರದುದ
ಕ್ಕಲವ[2]ಱ[2]ಲಾಗದು ಪರಸ್ತ್ರೀಯಂ ಬಯಸುವವಂ ೨೨

ಇವು ಮೊತ್ತಮೊದಲಣುವ್ರತ
ಮಿವು ಮಸುಳದೆ ನಡೆದೊಡೈಹಿಕಾಮುತ್ರಿಕಮೆಂ
ಬಿವಱೊಳ್ ಸಮಸುಖಿಯಪ್ಪಂ
ಭವಭವದೊಳ್ ದುಃಖಿಯಪ್ಪನಿವು ಮಸುಳ್ದಾತಂ ೨೩

ಮಾಡಿದ ಕೋೞಿಯನೞಿದ
ಕರ್ರಡಿ ಯಶೋಧರನು ಚಂದ್ರಮತಿಯಿಂತಿರ್ಬರ್
ಗೂಡಿನ ಕೋೞಿಗಳಾದರ್
ನೋಡಯ್ ಮತ್ತೊರ್ಮೆ ಬೞಲಿ ತಿರ್ಯಗ್ಗತಿಯೊಳ್ ೨೪

ವ್ರತಹಾನಿ ಹಿಂಸೆಯೊಂದೀ
ಗತಿಗಿಕ್ಕಿದುದುೞಿದ ನಾಲ್ಕುಮಾದೊಡೆ ಬೞಿಕೇಂ
ಚತುರಂಗಬಲಸಮೇತಂ
ಪ್ರತಿಪಕ್ಷಂ ಶೂರನಾದೊಡೇನಂ ಮಾಡಂ ೨೫

1 ಕೊಲೆಯಾಗದು ಪುಸಿಯಾಗದು ಕಳಲಾಗದು ಪೆಱರ ಪೆಂಡಿರೊಳ್ ತನ್ನ ಮಾನಂ ಸಲಲಾಗದು (ಗ). 2 ರ (ಗ).

ಅದಱಿಂ ತನ್ನಂತಿರೆ ಬಗೆ
ವುದು ಪೆಱರಂ ಪ್ರಾಣಿಹಿಂಸೆಯುಂ ಮಾಡಲ್ ವೇ
ಡ ದಯಾಮೂಲಂ ಧರ್ಮಂ
ಪದುಳಿಸಿ ಕೇಳ್ ಮಗನೆ ಹಿತಮಿದುಭಯ ಭವಕ್ಕಂ ೨೬

ಗುರುವಿಂತು ಬೆಸಸೆ ಜಾತಿ
ಸ್ಮರಂಗಳಾಗಿರ್ದ ಪಕ್ಕಿಗಳ್ ಕೇಳ್ದಿರ್ದೆಯೊಳ್
ಪರಮೋತ್ಸವದಿಂ ವ್ರತಮಂ
ಧರಿಯಿಸುತಿರೆ ಚಂಡಕರ್ಮನುಂ ಧರಿಯಿಸಿದಂ ೨೭

ಕಟಿಲೆ ನಿಜ ಹರ್ಷಬಾಷ್ಪದ
ಮಱೆವನಿ ಧರ್ಮಾನುರಾಗ[1]ಮೆಂಬ ಮುಗಿಲ್ಗಳ್
ಮೊಟಗಿದುವೆನೆ ಸೊಂಪಿನ ಪೊಂ
ಪುಟಿಯಿಂ ಕೂಗುವುದುಮಿತ್ತ ಕೇಳ್ದು[1] ನೃಪಾಲಂ ೨೮

ಸ್ವರವೇದ ವಿದ್ಯೆಯಂ ತ
ನ್ನರಸಿಗೆ ಮೆಱೆಯಲ್ಕೆ ದೇವಿ ನೋಡೆನುತೆಚ್ಚಂ
ಸರಲೆಯ್ದಿಸೆ ಕೆಡೆದುವವಂ
ತೆರಡಕ್ಕಾಯುಃಪ್ರಮಾಣಮೊಂದಾದುದೆನಲ್ ೨೯

ದೊರೆಕೊಳೆ ಸಮಾಧಿ ಮರಣಂ
ಚರಣಾಯುಧಯುಗಳಮಟಿದು ಕುಸುಮಾವಳಿಯೆಂ
ಬರಸಿಯ ಬಸಿಱೊಳ್ ಬಂದುವು
ನರಯುಗಳಕಮಾಗಿ ನಚ್ಚನಚ್ಚೊತ್ತಿದವೋಲ್ ೩೦

1 ಮೇಘಧ್ವನಿವೊಲ್ ವೊಟಗುವಿನಮೆಱಂಕೆಯ ಪೊಯಿಲ್ ಘಟಿಲನೆ ಕೂಗಿದುವು ಕೇಳ್ದನಿತ್ತ (ಗ.ಚ).

ಅಭಯರುಚಿಯಭಯಮತಿಯೆಂ
ಬಭಿಧಾನದೆ ಚಂದ್ರಮತಿ ಯಶೋಧರರರಮಳ್ಗಳ್
ಶುಭಲಕ್ಷಣಮೊಪ್ಪುತ್ತಿರೆ
ಸ್ವಭಾವಸಿದ್ಧಂಗಳಾಗಿ ಬಳೆಯುತ್ತಿರ್ಕುಂ ೩೧

ನುಣ್ಗುರುಳ ಪೊಳೆವ ಕಪ್ಪುಂ
ಕಣ್ಗಗ್ಗಳಮಾದ ಮೆಯ್ಯ ಬೆಳಗೆಸೆವಿನಮಾ
ಪೆಣ್ ಗಂಡು ರಾಜ್ಯಲಕ್ಷ್ಮಿಯ
ಕಣ್ಗಳ ದೊರೆಯಾಗಿ ಸಮನೆ ಬೆಳೆವಿನಮಿತ್ತಲ್ ೩೨

ಬೇಂಟೆಗೆ ನಡೆಯೆ ಯಶೋಮತಿ
ಗೆಂಟಱೊಳಾರಣ್ಯವಾಸಿಗಳ್ ನಿಲೆ ಕಂಡಾ
ಬೇಂಟೆ ಪರಿಯದೊಡೆ ಬಿನದದ
ಕಂಟಕನೀ ಸವಣನೆನುತೆ ಬರುತಂ ಮುನಿದಂ ೩೩

ಮುನಿದಯ್ನೂಱುಂ ಕುನ್ನಿಗ
ಳನಿತುಮನೊರ್ಮೊದಲೆ [1]ತೋಱಿ ಕೊಳ್ಕೊಳಿಸೆ[1] ಮಹಾ
ಮುನಿ ತಳರದೆ ಮೇರುವೊಲಿರೆ
ವನಮೃಗದವೊಲುರ್ಕನುಟಿದು ಸುಟಿದುವು ನಾಯ್ಗಳ್ ೩೪

ಆ ಯತಿಗಾಯತಿಗಿಡೆ ಕೌ
ಳೇಯಕತತಿ ನೃಪತಿ ಕೆಳರ್ದುರ್ ಮುಳಿದುರ್ಚಿದ ಕೌ
ಕ್ಷೇಯಕದೆ ಪೊಯ್ಯಲೆಯ್ದೆ ವಿ
ನೇಯಂ ಕಲ್ಯಾಣಮಿತ್ರನೆಂಬಂ ಪರದಂ ೩೫

1 ತೋಱಿ ಕುಕ್ಕುರಿಸಿ (ಗ).

ಕೆಮ್ಮನೆ ಬಾಳಂ ಕಿತ್ತ.ಯ್
ಕಿಂ ಮಿತ್ರಂ ಯನ್ನಿವರ್ತಯತಿ ಪಾಪಾತ್ ಎಂ
ದಾನ್ ಮಾಣಿಸದೊಡೆ ಕೋಟಲೆ
ಯಂ ಮಾಡವೆ ದೇವ ನಿನಗೆ ದುರಿತ[1]ಶತಂ[1]ಗಳ್ ೩೬

ಪೊಡವಡಲೆತ್ತು.ವ ಕೈಗಳ್
ಪೊಡೆಯಲ್ಕೆತ್ತುಗುಮೆ ಮೂಱು ಲೋಕದ ಕೈಗ
ನ್ನಡಿ ಸಾಮರ್ಥ್ಯದ ಸದ್ಗುಣ
ದೊಡೆಯರೊಳದು ತಕ್ಕುದಲ್ಲದತ್ತಿಡು ಬಾಳಂ ೩೭

ಆ ರುಷಿಯು ಚರಣ ಕಮಲಮ
ನಾರಾಧಿಸಲೆಂದು ಬಂದು ಕಂಡೆಡೆವೊಕ್ಕು
ವೀರರಮಣ ದುರ್ಬಲಸ್ಯ ಬ
ಲೋ ರಾಜಾ ಎನ್ನದಿವರ್ಗೆ ಮುಳಿವುದೆ ಮರುಳೇ ೩೮

ಇವರಾರೆಂದಿರ್ದಪೆ ನೀನ್
ಭುವನತ್ರಯ ತಿಳಕರಮಳಸದ್ಬೋಧ ಸುಧಾ
ರ್ಣವ ಪೂರ್ಣಚಂದ್ರರವನತ
ದಿವಿಜ ನರೋರಗರನನ್ಯ ಸಾಮಾನ್ಯ ಗುಣರ್ ೩೯

ಅಱಿಯದೆ ಗೆಯ್ದಂ ಕ್ಷಮೆಯೆಂ
ದೆಱಗೆನೆ ನೃಪನೆಂದನಾವ ಜಾತಿಯದಾರೆಂ
ದಱಿಯದೆ ಮಿಂದುಂ ಮುಟುಕಿಯು
ಮಱಿಯದ ಮಣಕಿನ ಬಣಂಬೆಗಾನೆಱಗುವೆನೇ ೪೦

---

1 ಶರಂ (ಸ).

ಒಂದು ಮೃಗಂ ಬೀಟದು ನೋ
ಡಿಂದಿನ ಬೇಂಟೆಯೊಳೆ ಸಿಂಟನಂ ಕಂಡುದಱಿಂ
ದೆಂದೊಡೆ ಪರದಂ ಪಾಪಂ
ಸಂದಿಸುವುದೆ ಪುಣ್ಯಮೂರ್ತಿಯಂ ಕಾಣಲೊಡಂ ೪೧

ತನುವಾರ್ಗಮಶುಚಿ ಶುದ್ಧಾ
ತ್ಮನೆ ಶುಚಿ ಕಾಗೆಯವೊಲೇನೊ ಮಿಂದವನೇಂ ಶು
ದ್ಧನೆ ಸಂಸ್ಕಾರ ಶತೇನಾ
ಪಿ ನ ಗೂಥಃ ಕುಂಕುಮಾಯತೇ ಎಂದಱಿಯಾ ೪೨

ಗಂಗಕುಲ ಚಕ್ರವರ್ತಿ ಕ
ಳಿಂಗ ಧರಾಧೀಶರಿವರಸಾರಂ ಸಂಸಾ
ರಂ ಗಡಮೆಂದಱಿದಱಿದು ತ
ಪಂ ಗೆಯ್ದರ್ ನಾಮದಿಂ ಸುದತ್ತಾಚಾರ್ಯರ್ ೪೩

ಎಂಬುದುಮರಸಂ ಮುನಿವರ
ರಂ ಬಲಗೊಂಡೆಱಗಿ ನೆಗಟ್ದ ಪೊಲ್ಲಮೆಗೆ ತದೀ
ಯಾಂಬುಜ ಪದಮಂ ತನ್ನ ಶಿ
ರೋಂಬುಜದಿಂದರ್ಚಿಸಲ್ ಪರಿಚ್ಛೇದಿಸಿದಂ ೪೪

ಅದನವರವಧಿಯಿನಱಿದಾ
ಗದು ಬೇಡೆನೆ ನೃಪತಿ ಮತ್ತೆ ವಿಸ್ಮಯದಿಂ ಕೇ
ಳ್ವುದುಮುಸಿರ್ದರ್ ಭವದೊಳ್ ಬ
ರ್ದದ ಮಾತರಪಿತರರಂ ಪಿತಾಮಹರಿರವಂ ೪೫

ವೀರತಪಸ್ವಿ ಯಶೌಘ ಮ
ಹಾರಾಜಂ ನೋನ್ತು ಕಟಿದು ಸುರ ವರ ವನಿತಾ
ಸ್ಮೇರ ಕಟಾಕ್ಷ ನಿರೀಕ್ಷಣ
ಕೈರವ ಶೀತಾಂಶು ದೇವನಾದಂ ದಿವದೊಳ್ ೪೬

ಅಮೃತಮತಿ ಅಷ್ಟವಂಕಂ
ಗೆ ಮರುಳ್ಗೊಂಡತ್ತೆ ಗಂಡನಂ ವಿಷದಿಂ ಕೊಂ
ದು ಮುದಿರ್ತು ಕುಷ್ಠಿಕೆಯೊಳೆ ಪಂ
ಚಮ ನರಕದೊಳಟ್ಟಳರಸ ಧೂಮಪ್ರಭೆಯೊಳ್ ೪೭

ಜನಕಂ ಯಶೋಧರಂ ಪಿ
ಟ್ಟಿನ ಕೋಟಿಯನಟಿದು ಕಟಿದು ನವಿಲೆಯ್ ಮೀನ್ ಆ
ಡಿನ ಪೋರಿ ಪೋಂತು ಕುಕ್ಕುಟ
ಮೆನೆ ಪುಟ್ಟಿದನೀಗಳಭಯರುಚಿಯಾಗಿರ್ದಂ ೪೮

ನಿರವಿಸಿದ ಚಂದ್ರಮತಿಯೆಂ
ಬರಸಿಯೆ ನಾಯ್ ಉರಗಿ ಮೊಸಳೆ ಆಡು ಲುಲಾಯಂ
ಚರಣಾಯುಧವಧುವಾದಳ್
ಗುರುವಚನದಿನೀಗಳಭಯಮತಿಯಾಗಿರ್ದಳ್ ೪೯

ನಿನಗಂ ಕುಸುಮಾವಳಿಗಂ
ಜನಿಯಿಸಿದಮಳೆಂಬುವಭಯರುಚಿಮತಿಗಳ್ ಮು
ನ್ನಿನ ಜನ್ಮಮನಿತುಮಂ ನೆ
ಟ್ಟನೆ ಬಲ್ಲರ್ ಕೇಳ್ದು ನಂಬು ನೀನ್ ಧರಣಿಪತೀ ೫೦

ನೀನಱಿವೆ ಕೊಂದ ಘೋರಮ
ನಾ ನಿಗ್ರಹವಧೆಯಿನಂದು ಸತ್ತವರಱಿವರ್
ಮೀನುಂ ಮೊಸಳೆಯುಮಾಡಂ
ತಾ ನೆಗಟ್ದಜಪೋತ ಮಹಿಷಮಾದಂದರಸಾ ೫೧

ಕೋೞಿಯ ಕೂಗೆತ್ತಲ್ ನೀನ್
ಸೂಱಿದವನೆಸೆವುದೆತ್ತಲಾ ಖಗಯುಗಳಂ
ಬೀೞಲೊಡನಾದ ಮಾನಸ
ವಾಪೆತ್ತಲ್ ನೋಡ ಧರ್ಮವೊದವಿದ ಪದನಂ ೫೨

ಎನೆ ಮುನಿವಚನದೊಳಂ ನಂ
ದನರೊಳಮಾಗಳ್ ಯಶೋಮತಿಕ್ಷಿತಿಪಂ ತೆ
ಳ್ಳನೆ ತಿಳಿದು ಭಾಪು ಸಂಕ
ಲ್ಪನ ವಧೆಗಿನಿತಾಯ್ತು ದಿಟದಿನೇನೇನಾಗರ್ ೫೩

ಎನಿತೊಳವು ಜೀವರಾಶಿಗ
ಳನಿತುಮನೋರಂತೆ ಕೊಂದು ತಿಂದುಂ ತಣಿವಿ
ಲ್ಲೆನೆ ಬರ್ದನಿಂದುವರಮಿ
ನ್ನೆನಗಿನ್ನೆಂತಪ್ಪ ನರಕಮಿದಿರ್ವಂದಪುದೋ ೫೪

ಎಂದು ಸುದತ್ತಾಚಾರ್ಯರ
ಮುಂದಣನರಮನೆಗೆ ಪೋಗದುರ್ವೀಭರಮಂ
ನಂದನನೊಳಭಯರುಚಿಯೊಳ್
ಸಂದಿಸಿ ತಾನ್ ಜೈನದೀಕ್ಷೆಯಂ ಕೈಕೊಂಡಂ ೫೫

ಶ್ರೀಜಿನದೀಕ್ಷೆಗೆ ತನುವಂ
ಯೋಜಿಸೆ ಕಲ್ಯಾಣಮಿತ್ರನುಂ ಬೆರಸು ಯಥಾ
ರಾಜಾ ತಥಾ ಪ್ರಜಾ ಎಂ
ಬೋಜೆಯಿನಂದರಸುಗಳ್ ಪಲರ್ ತಱಿಸಂದರ್ ೫೬

ಆಗಳ್ ತಂದೆಯ ತಪದು
ದ್ಯೋಗಂ ತಡವಾಗದಂತೊಡಂಬಟ್ಟು ಮಹೀ
ಭೋಗಕ್ಕನುಜ ಯಶೋಧರ
ನಾಗಿರೆ ಬೞಿಕಭಯರುಚಿಯುಮನುಜೆಯ ಸಹಿತಂ ೫೭

ತಮದಿಂದಂ ಪೊಱಮಟ್ಟು
ತ್ತಮ ಚಾರಿತ್ರದೊಳೆ ನೆರೆದು ಮೆಯ್ಯಿಕ್ಕಿದ ಸಂ
ಯಮದೆ ಸುದತ್ತಾಚಾರ್ಯರ
ಸಮುದಾಯದೊಳಿರ್ದು ತತ್ತ್ವಪರಿಣತನಾದಂ ೫೮

ಆನಭಯರುಚಿ ಕುಮಾರನೆ
ಈ ನೆಗೞ್ದಿರ್ದಭಯಮತಿಯುಮೀ ಅಕ್ಕನೆ ದಲ್
ನಾನಾವಿಧ ಕರ್ಮದಿನಿ
ನ್ನೇನಂ ನೀನ್ ಕೇಳ್ವೆ ಮಾರಿದತ್ತನೃಪೇಂದ್ರಾ ೫೯

ಗುರುಪಿಂದು ಬೆಸಸೆ ಭಿಕ್ಷೆಗೆ
ಬರುತಿರೆ ಪಿಡಿತಂದರೆಮ್ಮನಾ ದೆಸೆ[1]ಗೆ[1] ಭಯಂ
ಪುರುಳಿಲ್ಲ ನಿನ್ನ ಕೇಡಂ
ಪರಿವೀಕ್ಷಿಸಿ ಕರುಣದಿಂದೆ ತಲ್ಲಣಿಸಿದಪೆಂ ೬೦

[1] ಯ(ಸ)

ಸಂಕಲ್ಪ ಹಿಂಸೆಯೊಂದಱೊ
ಳಾನ್ ಕಂಡೆಂ ಭವದ ದುಃಖಮುಂಡೆಂ ನೀನ್ ನಿಃ
ಶಂಕತೆಯಿನಿನಿತು ದೇಹಿಗ
ಳಂ ಕೊಂದಪೆ ನರಕದೊಳ್ ನಿವಾರಣೆವಡೆದಯ್ ೭೧

ಎಂದ ನುಡಿ ನೆರೆದ ಜೀವ ಕ
ದಂಬಂಗಳ್ಗಭಯಮೆಂಬ ಡಂಗುರದವೊಲೊ
ಪ್ಪಂ ಬಡೆಯೆ ಮಾರಿದತ್ತನ್ನೃ
ಪಂ ಬಿಲ್ಲುಂ ಬೆಱಗುಮಾದನುದ್ವೇಗಪರಂ ೭೨

ಆ ಚಂಡಮಾರಿ ಲೋಚನ
ಗೋಚರತನುವಾಗಿ ಕುವರನಂ ಬಂದಿಸಿ ನೀನ್
ಆಚಾರ್ಯನೆಯೆಂದಿಂತಿರೆ
ಸೂಚಿಸಿದಳ್ ನೆರೆದ ಜಾತ್ರೆ ನೆಱೆ ಕೇಳ್ವಿನೆಗಂ ೭೩

ಪ್ರಜೆಯೆಲ್ಲಂ ಜಲ ಗಂಧ
ಸ್ರಜ ತಂಡುಲ ಧೂಪ ದೀಪ ಚರು ತಾಂಬೂಲ
ವ್ರಜದಿಂ ಪೂಜಿಸುವುದು ಜೀ
ವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ ೭೪

ಎಂದು ತಿರೋಹಿತೆಯಾದೊಡೆ
ತಂದಿರಿಸಿದ ಜೀವರಾಶಿಯಂ ಬಿಡಿಸಿ ಜನಾ
ನಂದನರಂ ತನ್ನನುಜೆಯ
ನಂದನರಂ ಮಾರಿದತ್ತ ವಿಭು ಲಾಲಿಸಿದಂ ೭೫

ಗುಡುಗುಡನೆ ಸುರಿವ ಕಣ್ಬನಿ
ಯೊಡವಂದಶುಭಕ್ಕೆ ಮಂಗಳಸ್ನಾನಮುನಂ
ದೊಡರಿಸೆ ಸೋದರ ಶಿಶುಗಳ
ನೊಡಲೊಳ್ ಮಡಗುವಿನಮಪ್ಪಿ ಬೆಚ್ಚನೆ ಸುಯ್ದಂ ೬೬

ತಾನಂದುವರೆಗವೊದವಿಸಿ
ದೇನಂಗಳ್ಗಳ್ಕಿ ಕುಸುಮದತ್ತಂಗೆ ಧರಿ
ತ್ರೀನಾಥ ಪದವಿಯಂ ಕೊ
ಟ್ಟಾ ನರಪತಿ ಬಟಿಕ ದೀಕ್ಷೆಯಂ ಕೈಕೊಂಡಂ ೬೭

ಕೆಲಕಾಲಮುಗ್ರ ತಪಮಂ
ಸಲಿಸಿ ಸಮಾಧಿಯೊಳೆ ಮುಡಿಪಿ ಮೂಱನೆಯ ದಿವಂ
ನೆಲೆಯಾಗೆ ವಾರಿದತ್ತಂ
ಕಲಿಯಂ ಮೊದಲಿಸಿದಂತೆ ದೇವನೆ ಆದಂ ೬೮

ಅಮಳ್ಗಳ್ ಬಟಿಕ ಸುದತ್ತರ
ಸಮುದಾಯದೊಳಾಗಮೋಕ್ತಿಯಿಂ ನಡೆದು ತಪಂ
ತಮಗಮರೆ ನೋನ್ತು ಮುಡಿಪಿದ
ಸಮಯದೊಳೀಶಾನ ಕಲ್ಪದೊಳ್ ಜನಿಯಿಸಿದರ್ ೬೯

ಮತ್ತಂ ಧರ್ಮವಿಹಾರ ನಿ
ಮಿತ್ತಂ ಬಂದಿರೆ ಯಶೋಧರಂ ತಮ್ಮವರ್ಗಾ
ದುತ್ತಮ ಗತಿಯಂ ಕೇಳ್ದು ಸು
ದತ್ತಾಚಾರ್ಯರ ಪದಾಬ್ಜಮಂ ಪೂಜಿಸಿದಂ ೭೦

ಜೀವದಯೆ ಎಂಬುದೆಮ್ಮಯ
ಮಾವನ ಪೆಸರಿರ್ದ ನಾಡೊಳಿರದಾತಂಗಂ
ದೇವಗತಿಯಾಯ್ತು ಸೋದರ
ಗಾರ್ ವೈಭವಮಾಯ್ತು ಧರ್ಮದಿಂದಾಗದುದೇಂ ೭೧

ಎಂದು ಮನಸಂದು ಜಿನಮತ
ನಂದನದೊಳ್ ದಾನಲತೆ ದಯಾರಸದೆ ಜಗಂ
ಪಂದರೆನೆ ಪರ್ವಿ ಪೊಸಜಸ
ದಿಂದಂ ಮರಲ್ದಿರೆ ಯಶೋಧರಂ ಬೆಳೆಯಿಸಿದಂ ೭೨

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ
ರಭಸ ಮತಿಗೆ ಸಯ್ಪಂ ಪೇಟ್ದ ಧರ್ಮಕ್ಕೆ ತಂದೀ
ಶುಭಕಥನಮನತ್ಯಾನಂದದಿಂ ಕೇಳ್ವ ಭವ್ಯ
ಪ್ರಭುಸಭೆಗೆಸೆದಿರ್ಕುಂ ಮಂಗಳಂ ಶ್ರೀವಿಲಾಸಂ ೭೩

ಪರಮಜಿನೇಂದ್ರ ಶಾಸನ ವಸಂತದೊಳೀ ಕೃತಿಕೋಕಿಲಸ್ವನಂ
ಪರೆಗಸಹಾಯಶೂರನ ಭುಜಕ್ಕೆ ಜಯಂ ಸಮಸಲ್ಗೆ ಸಂತತಂ
ಪರಿಮಳದಂತೆ ವಾಣಿ ನೆಲಸಿರ್ಕೆ ವಿಕಾಸ ವಿಲಾಸದಂತೆವೊಲ್
ಸಿರಿ ನೆರೆದಿರ್ಕೆ ನಾಟ್ಪ್ರಭು ಜನಾರ್ದನದೇವನ ವಕ್ತ್ರಪದ್ಮದೊಳ್ ೭೪

ಇದು ಪರಮ ಜಿನಸಮಯ [1] ಕುಮುದಿನೀ ಶರಚ್ಚಂದ್ರ [1]
ಸದಮಲ ರಾಮಚಂದ್ರ ಮುನೀಂದ್ರ ಪದಭಕ್ತಂ
[2]ಜನ್ನಕವಿ[2] ಜನಕ್ಕೆ ಮಾಡಿದ ಯಶೋಧರ
ಚರಿತಾವತಾರಂ ಸಂಪೂರ್ಣಂ

---

1 ಸಮುಂದಚೈತ್ರ ಚಂದ್ರಮ (ಗ), ಸಂಮಂಧಚೈತ್ರ ಚಂದ್ರಮ (ಸ).
2 ಜಾನಕಿ (ಚ).

# ಅನುಬಂಧ ೧

## ಯಶೋಧರ ಚರಿತೆಯ ಸಂಗ್ರಹದಲ್ಲಿ ಬಿಟ್ಟಿರುವ ಪದ್ಯಗಳು

### ೧ ನೆಯ ಅವತಾರ

(೧, ೨ರ ನಡುವೆ)

ಜಿನ ಸಿದ್ಧ ಸೂರಿ ದೇಶಿಕ
ಮುನಿಗಳ ಚರಣಂಗಳೆಂಬ ಸರಸಿಜವನಮೀ
ಮನಮೆಂಬ ತುಂಬಿಯೆಱಕಮ
ನನುಕರಿಸುಗೆ ಭಕ್ತಿಯೆಂಬ ನವಪರಿಮಳದಿಂ ೧

ಎನಗೆ ನಿಜಮಹಿಮೆಯಂ ನೆ
ಟ್ಟನೆ ಮಾಡುಗೆ ಕೂರ್ತು ವೀರಸೇನಾಚಾರ್ಯರ್
ಜಿನಸೇನಾಚಾರ್ಯರ್ ಸಿಂ
ಹಣಂದಿಗಳ್ ಸಂದ ಕೊಂಡಕುಂದಾಚಾರ್ಯರ್ ೨

ಗಣಧರರೋ ಸ್ವಾಮಿಗಳೋ
ಗುಣದಿಂದಾಮಱಿಯೆಮೆಱಗಿ ಶುದ್ಧರೆಮೆಮ್ಮಂ
ತಣಿಪುಗೆ ಸಮಂತಭದ್ರರ
ಗುಣಭದ್ರರ ಪೂಜ್ಯಪಾದರಾಖ್ಯಾನಂಗಳ್[1] ೩

(೨, ೩ರ ನಡುವೆ)

ನಾಂದಿಯಿನನಂತರಂ ಕವಿ
ವೃಂದಾರಕವಾಸವಂಗೆ ಕವಿಕಲ್ಪಲತಾ
ಮಂದಾರಂಗೇಂ ಪ್ರಸ್ತುತ
ಮೆಂದೊಡೆ ಬಲ್ಲಾಳ ದೇವನನ್ವಯ ಕಥನಂ ೪

[1] (ಅನಂತನಾಥಪುರಾಣ: i. 15)

ಭಾವಕನತಿರಸಿಕಂ ಸಂ
ಭಾವಿತನಭ್ಯಸ್ತಶಾಸ್ತ್ರನನ್ವಿತನೆನಿಪಾ
ದೇವಂಗೆ ವಿಷಯಮಲ್ಲದೆ
ದೇವಾನಾಂ ಪ್ರಿಯರ್ಗೆ ವಿಷಯಮೇ ಸತ್ಕಾವ್ಯಂ ೫

ಕೇಳಲೊಡಂ ಶಬ್ದಾರ್ಥ ಗು
ಣಾಲಂಕೃತಿ ರೀತಿ ಭಾವ ರಸ ವೃತ್ತಿಗಳಂ
ಮೇಳವಿಸಲ್ ಬಲ್ಲಂ ಬ
ಲ್ಲಾಳಂ ಸಾಹಿತ್ಯ ಕಮಳ ಮತ್ತ ಮರಾಳಂ ೬

ಸಳನೆಂಬ ಯಾದವಂ ಹೊಯ್
ಸಳನಾದಂ ಶಶಕಪುರದ ವಾಸಂತಿಕೆಯೊಳ್
ಮುಳಿದು ಪುಲಿ ಪಾಯ್ವುದುಂ ಹೊಯ್
ಸಳಯೆಂದೊಡೆ ಗುರುಗಳಿತ್ತು ಕುಂಚದ ಸೆಳೆಯಂ ೭

ವಿನಯಾದಿತ್ಯನೆ ಹೊಯ್ಸಳ
ಜನಪತಿಗಳ ಕೀರ್ತಿಪುಂಡರೀಕನಿಗುನ್ಮೀ
ಲನಮನೊಡರ್ಚಿದನೆಱೆಯಂ
ಗ ನೃಪಾಲನ ತಂದೆ ಬಿಟ್ಟಿದೇವಂಗಜ್ಜಂ ೮

ಅರಸಾದಂ ಸಂವರಣೆಗೆ
ಪರರಾಷ್ಟ್ರಂ ಗಂಗವಾಡಿ ತೊಂಬತ್ತಱು ಸಾ
ಸಿರಮುಂ ಬ್ರಾಹ್ಮಣದತ್ತಿಗೆ
ವರಸಪ್ತಮ ಚಕ್ರವರ್ತಿ ವಿಷ್ಣುನೃಪಾಲಂ ೯

ಈವಿಱುವ ಕಾವ ಗುಣದಿಂ
ದಾ ವಿಷ್ಣುವಿನೊರೆಗೆ ದೊರೆಗೆ ವರಲುಟಿದ ಧರಿ
ತ್ರೀವಲ್ಲಭರೇನೇಚಲ
ದೇವಿಗಮೆಱೆಯಂಗ ನೃಪತಿಗಂ ಪುಟ್ಟಿದರೇ ೧೦

ಧೀರನಿಧಿ ಬಿಟ್ಟಿದೇವನೊ
ಳೋರಗೆ ಬಲ್ಲಾಳನಿಂತು ನರಸಿಂಹಸುತಂ
ಗಾರೆಣೆ ಗಗನಂ ಗಗನಾ
ಕಾರಮೆನಲ್ ತಮ್ಮೊಳೆಣೆ ಪಿತಾಮಹ ಪೌತ್ರರ್ ೧೧

ಆಟಾಟಿಗೆ ಬಲ್ಲಾಳನ
ದಾಟಿಯ ದಾವಣಿಯ ತುರಗದಟಿ ಖುರಹತಿಯಿಂ
ಪೇಟೆ ಪೆಸರಿಲ್ಲದಂತಿರೆ
ಪಾಟಾದುವು ವೈರಿದುರ್ಗಮೆನಿತೊಳವನಿತುಂ ೧೨

ಆರೆಣೆಯೆಂಬೆನಟುಂಬದ
ಬೀರಮನೀ ಜಗಮನಾವಗಂ ಸುತ್ತಿದ ಮು
ನ್ನೀರೆಂಬುದು ಬಿರುದಿನ ಬೆ
ಳ್ಳಾರನೆಸಿದುದದಟರಾಯ ಕೋಳಾಹಳನಾ[1] ೧೩

ಚಲದ ಬಲದೆಸಕದಿಂ ಸಲೆ
ನಿಲೆ ನಾಲ್ಕುಂ ದೆಸೆಯ ಮೂಱುವರ ರಾಯರ ಮುಂ
ದಲೆಯೊಳಗುಂದಲೆಯೆನೆ ನಿಂ
ದಲೆವುದು ತೇಜಂ ಪ್ರತಾಪ ಚಕ್ರೇಶ್ವರನಾ ೧೪

ನೆಗಟ್ದ ನೃಪರೊಳಗೆ ಮುಂ ಕವಿ
ತೆಗೆ ಮುಂಜಂ ಭೋಜನುತ್ಪಲಂ ಶ್ರೀಹರ್ಷಂ
ಮಿಗಿಲವರಿಂ ಬಲ್ಲಾಳಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ೧೫

ಆ ನೃಪನ ಸಭೆಯೊಳಖಿಳ ಕ
ಳಾ ನಿಪುಣರ ನಟ್ಟನಡುವೆ ಬೊಟ್ಟೆತ್ತಿ ಗೆಲಲ್
ತಾನೆ ಚತುರ್ವಿಧ ಪಂಡಿತ
ನೇನೆಂಬುದೊ ಸುಕವಿ ಭಾಳಲೋಚನನಳವಂ ೧೬

1 (ಗ, ಸ ಗಳಲ್ಲಿಲ್ಲ : ತರಿಕೆರೆ ೪೫ನೆಯ ಶಾಸನದಲ್ಲದೆ).

ನವವ್ಯೈಯಾಕರಣಂ ತ
ರ್ಕವಿನೋದಂ ಭರತಸುರತಶಾಸ್ತ್ರ ವಿಳಾಸಂ
ಕವಿರಾಜಶೇಖರಂ ಯಾ
ದವರಾಜಚ್ಛತ್ರನಖಿಳಬುಧಜನಮಿತ್ರಂ ೧೭

ಚತುರನಿಧಿ ಚಲದನೆಲೆ ಚಾ
ಗದ ಸಾಗರಮಣ್ಮಿನಾಗರಂ ಪೆಂಪಿನ ಸಂ
ಪದಮಾಯದಾಯುವಾರೆಂ
ಬುದೊ ಜನ್ನಂ ಕಮ್ಮೆಗುಲದ ತೊಡವಿನ ರನ್ನಂ ೧೮

ಕನ್ನರನಾದರದಿಂ ಕುಡೆ
ಹೊನ್ನಂ ಮನವೊಸೆದು ತ್ಯೈಲಪಂ ಕುಡೆ ರನ್ನಂ
ಮನ್ನಿಸಿ ಬಲ್ಲಾಳಂ ಕುಡೆ
ಜನ್ನಂ ಕವಿಚಕ್ರವರ್ತಿವೆಸರಂ ಪಡೆದರ್[1] ೧೯

ಶ್ರೀಮತ್ ಕಾಣೂರ್ಗಣ ಚಿಂ
ತಾಮಣಿಗಳ್ ರಾಮಚಂದ್ರ [2]ಗಂಡವಿಮುಕ್ತರ್[2]
ತಾಮೆ ಗಡ ಗುರುಗಳೆನಿಪ ಮ
ಹಾ ಮಹಿಮೆಗೆ [3]ನೋಂತ್ತ ಭವ್ಯ ಚೂಡಾರತ್ನಂ[3] ೨೦

ವಾಣೀಪಾರ್ವತಿ ಮಾಡಿದ
ಜಾಣಿಂತುಟೊ ಭಾಳಲೋಚನಂ ಕವಿಸುಮನೋ
ಬಾಣನ ಮಗನೆಂದಖಿಳ
ಕ್ಷೋಣಿಗೆ ಪೆಸರಾಯ್ತು ಕೂರ್ಮೆಗಿದು ಕೌತುಕಮೋ ೨೧

---

1 (ಗ, ಸ ಗಳಲ್ಲಿಲ್ಲ) ; 2 (ದೇವ ಮುನೀಂದ್ರರ್—ಅನಂ. ಪು., i ೨೫) ;
3 (ಜನ್ನನಂತೆ ನೋಂತ್ತವನಾವಂ—ಅನಂ. ಪು. i ೨೫).

(೩, ೪ರ ನಡುವೆ)

ಇತಿಹಾಸಮೆಂಬ ವಿಮಳಾ
ಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾ
ನ್ವಿತಮಾಗಿರೆ ಕಥೆ ಬುಧಸಂ
ತತಿಗಕ್ಷಯ ಸುಖಮನೀವುದೊಂದಚ್ಚರಿಯೇ ೨೨

(೫, ೬ರ ನಡುವೆ)

ಮೇರುನೃಪ ಪ್ರಾಸಾದಂ
ವಾರಿಧಿ ನಿಜಪರಿಖೆ ವಜ್ರವೇದಿಕೆ ತತ್ಪ್ರಾ
ಕಾರಂ ಜಂಬೂ[1]ದ್ವೀಪದ
ಸಾರ[1]ಮನಿಂಬಿಟ್ಟಿರಂಬಿನಂ ಪುರಮೆಸೆಗುಂ ೨೩

ಅದಱೊಳಗೆ ಮೆಱೆವ ಮಣಿಮಾ
ಡದ ಲೋವೆಗಳಲ್ಲಿ ಕೋದ ಪೊಸಮುತ್ತಿನ ಮೊ
ತ್ತದ ಬೆಳಗು ಚಂದನಾಲೇ
ಪದ ಪದನಂ ಕುಡುವುದುರಿವ ರವಿಗೆಡೆವಗಲೊಳ್ ೨೪

ಕಾರಿರುಳೊಳುಮೆಳವಿಸಿಲಂ
ಪೂರಂ ಪರಿಯಿಪುವು ಬೀದಿಯೊಳ್ ನಿಜರುಚಿಯಿಂ
ಹೀರೆಯ ಹೂವಿನ ಬಣ್ಣದ
ನೇರಾಣಿಯ ಕುಸುರಿವೆಸದ ನೆಲೆಮಾಡಂಗಳ್ ೨೫

ನೆಲೆಮಾಡದೊಳೆಡೆಯಾಡುವ
ಕಲಹಂಸಾಲಸ ವಿಳಾಸವತಿಯರ ಮುಖಮಂ
ಡಲಕೆ ಸರಿಯಾಗಲಾಱದೆ
ಸಲೆ ಮಾಳ್ಪಂ ಚಂದ್ರನಿಂತು ಚಾಂದ್ರಾಯಣಮಂ ೨೬

[1] ದ್ವೀಪಾಕಾರ (ಗ, ಜ).

ಪಗಲಸಿರುಳ್ ನಿಜರುಚಿಯಿಂ
ಮಿಗಿಸುವ ಜಿನಭವನದರುಣಮಣಿ ಕಲಶಂಗಳ್
ನಗುವವು ಕೇತುಗಳಿಂ ಕೇ
ತುಗಳೊಳ್ ಕೆಳೆಗೊಂಡು ನಿಂದು ರವಿಮಂಡಲಮಂ ೨೭

೨ನೆಯ ಅವತಾರ

(೩, ೪ರ ನಡುವೆ)

ಭರದಿಂದವರ್ಗಳ ಬೇಂಟಮ
ನಿರುಳಿಂದು ಪಗಲ್ ವಸಂತನಿರುಳುಂ ಪಗಲುಂ
ಸುರಭಿಶರನಂಗಜಾತಂ
ಗರಟಿಗೆ ಮೆಯ್ಯಾಪ್ತು ಮೆಱೆಯೆ ಬಿಡದೋಲಗಿಪರ್ ೧

(೬, ೭ರ ನಡುವೆ)

ಪರನೃಪರ ರಾಜ್ಯಲಕ್ಷ್ಮಿಯ
ಕುರುಳಾಕರ್ಷಣದೆ ನೀಳ್ದ ತೋಳ್ ಮೆಱೆವುದು ಪೇರ್
ಉರದೊಳ್ ನೆಲಸಿದ ಲಕ್ಷ್ಮೀ
ಕರಿಣಿಗೆ ಬಾಳಿಸಿದ ರನ್ನದಮಳ್ಗಂಬದವೊಲ್ ೨

(೭, ೮ರ ನಡುವೆ)

ಕವಚಹರನಾದ ತನಯನೊ
ಳವನೀಭರಮೆಂಬ ಕನಕಮಣಿಮಂಡನಭಾ
ರವನಿಟಿಪಿ ನೀಡುವೋಲಾ
ಡುವನಂಗಜರಾಗಶರಧಿಯೊಳಗೆ ಯಶೌಘಂ ೩

ಅಗುಟ್ಟಿಡಪುವ ಕಾಲದ ಗರ
ಟಿಗೆಯೊಳ್ ನೃಪಚಿತ್ತಚೋರನಂ ತೋಱುವ ದೀ
ವಿಗೆಯೆನೆ ಸಂಮುಖಮಾಯ್ತೋ
ಲಗದೊಳ್ ನಿರ್ದಿಷ್ಟ ಪಳಿತಚಿಕುರಂ ಮುಕುರಂ ೪

(೯, ೧೦ರ ನಡುವೆ)

ಧರಣೀಗಣಿಕೆ ಯಶೌಘನ
ವಿರಹದ ಪರಿತಾಪಮಂ ಯಶೋಧರನ ಯಶೋ
ಹರಿಚಂದನ ಚರ್ಚೆಯಿನು
ದ್ಧುರ[1]ದಾನಾ[1]ಸಾರಸೇಕದಿಂ ಮುಗ್ಗಿಸಿದಳ್ ೫

ಗುರು ಬಿಟ್ಟ ರಾಜ್ಯಲಕ್ಷ್ಮಿಗೆ
ವರನಾದ್ಯೆ ಕಷ್ಟಮೆಲೆ ಯಶೋಧರ ನಿನ್ನೊಳ್
ನೆರೆದಿರ್ಪುದಲ್ಲದೆಂಬಂ
ತಿರೆ ಪೋದಳ್ ಕೀರ್ತಿಕಾಂತೆ ದೆಸೆಯಂತುವರಂ ೬

ಅಳುರ್ವ ನಿಜವಿಜಯ ತೇಜೋ
ಬಳದಿಂ ಪರನೃಪರ ಗಂಡಗಾಳಿಕೆಯನದೇಂ
ಕಳೆದನೊ ನೃಪತಿ ವಸುಂಧರೆ
ಪ್ರೇಳಪಂ ತಳೆವೆಯ್ದೆ ರಾಗಮಂ ಬೀಱುವಿನಂ ೭

(೧೧, ೧೨ರ ನಡುವೆ)

ಪರಿಮಳದ ತೊಂಬನೆತ್ತಿದ
ನಗಲಂಬಂ ಜನಮನೋವನಕ್ಕೆನೆ ಕಾಳಾ
ಗರುಧೂಮಲತಿಕೆ ಜಾಲಾಂ
ದರದಿಂಪೊಗೆದುದು ಕಪೋತಪಕ್ಷಚ್ಛುರಿತಂ ೮

ಎಳದುಂಬಿ ಸುಟಿದು ಸುಟ್ಟುರೆ
ಗೊಳಿಸುವ ಕತ್ತುರಿಯ ಕಪ್ಪುರಂಗಳ ರಜಮು
ಚ್ಚಳಿಸಿದುವು ನೀಲ ಮುತ್ತಿನ
ಬೆಳಗಿನ ಕುಡಿ ರಾಗರಸದಿನಂಕುರಿಸುವವೋಲ್ ೯

---

1 ಧಾರಾ (ಸ)

ವರಮಂಚ ಮಣಿದ್ಯುತಿ ಧೃತ
ಮರಾಳಿಕಾತೂಳತಳ್ಪದೊಳ್ ತಾಮೆಸೆದರ್
ಸುರಚಾಪಚ್ಛವಿ ಸುತ್ತಿದ
ಶರದಭ್ರದೊಳೆಸೆವ ಖಚರದಂಪತಿಗಳವೊಲ್ ೧೦

ನಡೆ ಸೋಂಕಿದ ಕಡೆಗಣ್ಗಳ
ಕುಡಿವೆಳಗಿಂ ಬಿಡುವ ಬೆಮರೊಳಂ ಪದದೊಳಮೇಂ
ತಡವಾದರೊ ಕೌಮುದಿ ಕ
ಣ್ಣಿಡೆ ಕರಗುವ ಚಂದ್ರಕಾಂತಮಣಿಪುತ್ರಿಕೆವೋಲ್ ೧೧

ತನುಸೋಂಕಾಲಿಂಗನ ಚುಂ
[1]ಬನಮುಂ ಗಳರವದ[1] ಸವಿ ರತಪ್ರೌಢಿಯಿನಾ
ತನುವಂ ಮುಱಿಯಿಸೆ [2]ಅಱಿ[2]ಯದೆ
ಮನೋಜನಾಡಿಸುವ ಜಂತ್ರದಂತಿರೆ ನೆರೆದರ್ ೧೨

ಸುರತಸುಖಪಾರವಶ್ಯಂ
ತರೆ ನಿದ್ರಾಭರಮನಿರ್ವರುಂ ಶಿಥಿಲತನೂ
ಪರಿರಂಭಣದಚ್ಚಟಿಯದೆ
ಪರಿವೇಷ್ಟಿತ ಬಾಹುವಳಯದೊಳ್ ಕಣ್ಗಯ್ದರ್ [3] ೧೩

ಪುರ್ವೆಂಬ ಜವಳಿಗಟ್ಟಿನ
ಕರ್ಪಿನ ಬಿಲ್ಲಿಂಗೆ ಬಿಗಿದ ಮಧುಕರಮಾಲಾ
ಮೌರ್ವಿಯೆನೆ ಮುಗಿದ ಕಣ್ಗಳ
ಪರ್ವುಗೆಯೊಳ್ ಮೆಱೆದುದವರ ತಳ್ತೆಮೆದುಱುಗಲ್ ೧೪

1 ಬನದೆ ಸುರತದಿಂ (ಗ, ಸ) ; 2 ಮಱು (ಸ) ; 3 (ಇದು ಗ ಒಳಗಿಲ್ಲ)

(೧೩, ೧೪ರ ನಡುವೆ)

ಗಹಗಹಿಕೆ ವಡೆದ ವಹಣಿಯು
ಸುಹಾಹೆ ಝುಂಪೆಯದೊಳಮರೆ ಠಾಯದೊಳಂ ನಿ
ರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ
ಮಹ ಚಾಳೆಯದಲ್ಲಿ ಮೂರ್ತಿ ವಡೆದುದು ರಾಗಂ ೧೫

ಮಾಳಿಗೆಯೊಳಗಣ ಸೊಡಗುಡಿ
ಡಾಳಂ ಬಡೆದಂತೆ ರಂಗರಕ್ತಿಯೊಳಮರ್ದುಂ
ಪಾಳಿಕೆ ವಡೆದು ಬಜಾವಣ್
ಮಾಳವಸಿರಿಯೆಂಬ ರಾಗಮಂ ಚಾಳಿಸಿದಂ ೧೬

ತಾಳದ ಲಯಮಂ ನೆನೆಯದೆ
ಕೇಳಲೊಡಂ ಠಾಯೆ ಜಾತಿಯೊಳ್ ಗ್ರಾಹಯುತಂ
ಕೇಳಲೊಡಂ ಗೀತಮನೆಂ
ದಾಳತಿಯೊಳ್ ಮೆಱೆದು ಪಾಡಿದಂ ರೂಪಕಮಂ ೧೭

(೩೯, ೪೦ರ ನಡುವೆ)

ಮುಟ್ಟಿದೊಡೆ ಸುಖದ ಸೋಂಕಂ
ಪುಟ್ಟಿಸುವಾ ವಾಮೆ ವಾಮೆಯಾದೊಡೆ ಮುನ್ನಂ
ಬಟ್ಟಿದುವೆನಿಸುವ ವೊಲೆ ನಿರ್
ವೆಟ್ಟಿದುವಾದುವು ನೃಪಂಗೆ ಬೆನ್ ಸೋಂಕಲೊಡಂ ೧೮

೩ನೆಯ ಅವತಾರ

(೩, ೪ರ ನಡುವೆ)

ಬಳೆಗೋದುದು ಕೀರ್ತಿದಿಶಾ
ಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾ
ವಳಿಯೊಳ್ ಭವತ್ಪ್ರತಾಪಂ
ಬಳೆಗಳೆಯಿಸೆ ತಾನದಕ್ಕೆ ಮುಚ್ಚರಿಸುವವ್ೊಲ್ ೧

(೫, ೬ರ ನಡುವೆ)

ಮಂದಸ್ಮಿತ ವರಕೌಮುದಿ
ನಿಂದುದು ಮೃಗನಾಭಿತಿಳಕ ಲಕ್ಷ್ಮದ ಪ್ರೋಳಪಿ
ಲ್ಲಿಂದೇಕೆ ಕಂದ ಪಗಲೊಗೆ
ದಿಂದುವಿನಂತಾಯ್ತು ನಿನ್ನ ಮಂಗಲವದನಂ ೨

(೬೬, ೬೭ರ ನಡುವೆ)

ಸೊಡರಿಂ ಮುಡುಪಿಂದಂ ಪಿಂ
ತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ.
ನೆಣಮುರ್ಚೆ ಬೆಂಕೆಯಿಂ ಕೆಳ
ಗಣ ಮೆಯ್ಯಿಂದುರುಪಿ ಬರಿಯ ಬಾಡಂ ತೆಗೆದಂ ೩

## ೪ನೆಯ ಅವತಾರ

(೧, ೨ರ ನಡುವೆ)

ಬಾಳಲಗುರ್ಡಿ ಪಿಕರುತಿ ಬಾಯ್
ಕೇಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ ಭೂ
ಪಾಳಂ ಬರೆ ಶೋಧಿಪ ವನ
ಪಾಳನವೊಲ್ ಮುಂದೆ ಬಂದುದಂದು ವಸಂತಂ ೧

ತಳಿರ್ಗಳ ಚಾಳೆಯುಮೆಳಲತೆ
ಗಳ ಲುಳಿ ತಿಳಿಗೊಳದ ತೆರೆಯ ತಾಳಂ ಪೊಸವೂ
ಗಳ ನೋಟವಾಗೆ ನೃಪನಂ
ಮಳಯಾನಿಳನೆಂಬ ನಟ್ಟುವಂ ಕೇಳಿಸಿದಂ ೨

ಅಗೆವೊಯ್ದ ಚಂದ್ರಮಂಡಲ
ದಗೆಗಳವೊಲ್ ಕಾರಮುಗಿಲ ಕಿಱ್ಸರಿಗಳವೊಲ್
ಸೊಗಯಿಸಿದುವು ಬೆಳ್ಗೊಡೆ ಕಂ
ಬಗಂಬದೊಳ್ ಕೊಂಬುಗೊಂಬಿನೊಳ್ ಪೆರ್ಮ್ಮಡಿಗಳ್ ೩

(೨, ೩ರ ನಡುವೆ)

ಪೊಂಬಾಳೆ ಚಾಮರಂ ಚಂ
ದ್ರಂ ಬೆಳಗೊಡೆ ಕೇಳಿಶಿಖರಿ ಸಿಂಹಾಸನಮಾ
ಯ್ತೆಂಬಿನೆಗಮಂಗಜಂ ಮಾ
ವೆಂಬ ಕುಮಾರಂಗೆ ಪಟ್ಟಮುಂ ಕಟ್ಟಿಸಿದಂ ೪

ಕಡೆಗಣ್ಗಳ್ ಕೇದಗೆಯಂ
ಪಡೆದುವು ಮಲ್ಲಿಗೆಗೆ ಸೆಳ್ಳುಗುರ್ ಸಂಪಗೆಯಂ
ಪಡೆದುವು ಪಾದರಿಗೆನೆ ಸಂ
ಗಡದಿಂದಲರ್ಗೊಯ್ವ ವಾರವನಿತೆಯರೆಸೆದರ್ ೫

ಮಳಯಜದ ಮೊಲೆಯ ಕುಂಕುಮ
ದಳಕದ ಕತ್ತುರಿಯ ಬಣ್ಣವಣ್ಣಿಗೆ ಕೊಳದೊಳ್
ತಳರ್ದಿರೆ ಜಲರುಹಮುಖಿಯರ್
ಜಳಕೇಳಿಯ ನೆವದಿ [1]ದೂಳಿ[1]ಚಿತ್ರಂ ಬರೆದರ್ ೬

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನವೊರ್ವಳೇಱಿ ಕೃತಕಾದ್ರಿಯನೇಂ
ದೊರೆಯಾದಳೊ ರತಿನಾಥನ
ಕರುಮಾಡದ ಮದನಮೋಹಿನೀಪುತ್ರಿಕೆವೊಲ್ ೭

1 ಗೂಡಿ (ಸ).

ಬೆಳತಿಗೆ ವಸದನಮೆಸೆದಿರೆ
ತಳಿರ್ಜೊಂಪದೊಳುಯ್ಯಲಾಡಿ ಮೆಱೆದಳದೊರ್ವಳ್
ಜಳಜದ ಮಣಿಮಂಡಪದೊಳ
ಗೆಳವೆಱೆಯಂ ತೂಗಿ ತೊಟ್ಟಿಲೊಳ್ ಸಾರ್ಚಿದವೊಲ್ ೮

(೧೭, ೧೮ರ ನಡುವೆ)

ಏದೊರೆಯನಾತ್ಮನೆಂದೊಡ
ನಾದಿಯನಂತಂ ನಿರತ್ಯಯಂ ಚಿನ್ಮಯ ನಿಃ
ಪ್ರಾದೇಶಿಕನೆಂದಾತನು
ಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ[1] ೯

(೭೨, ೭೩ರ ನಡುವೆ)

ಸಜ್ಜನ ಚೂಡಾಮಣಿ ತ
ಮ್ಮಜ್ಜಂಗಂ ಪುಣ್ಯದಿಂದೆ ಸಾಸಿರ್ಮಡಿಯಾ
ಗುಜ್ಜಳಿಕೆ ವಡೆದ ಪೆರ್ಮೆಯೊ
ಳುಜ್ಜೇನಿಯೊಳರಸುಗೆಯ್ಯುತಿರ್ದಂ ಸುಖದಿಂ ೧೦

ತಾರಾತಾರಧರಾಧರ
ತಾರಾದರತಾರಹಾರನೀಹಾರಪಯಃ
ಪೂರಹರಹಸನಶಾರದ
ನೀರದನಿರ್ಮಲ ಯಶೋಧರಂ ಕವಿತಿಲಕಂ ೧೧

ಕ್ಷಯಮಂ ಪಿಟ್ಟಿನ ಕೋಟಿಗಿತ್ತು ನವಿಲುಂ ನಾಯಾದರೆಯ್ಯುಂ ವಿಷಾ
ಹಿಯುಮಾದರ್ ಪಗೆಸುತ್ತೆ ಮೀನ್ಮೊಸಳೆಯಾದರ್ ಪೋಂತುಮಾಡಾದರ
ಲ್ಲಿಯೆ ಪೋಂತುಂ ಪುಲಿಗೋಣರಾದರೆರಡುಂ ಬಲ್ಕೋಟಿಯಾದರ್ ತಪ
ಸ್ವಿಯ ಮಾತಿಂದಮಳಾದರಲ್ತೆ ಮಗನುಂ ತಾಯುಂ ಯಶೌಘಪ್ರಿಯರ್ ೧೨

1 (ಇದು ಸ ಒಳಗೆ ಇಲ್ಲ).

(೭೩, ೭೪ರ ನಡುವೆ)

ಶ್ರೀಗಿರಿದುರ್ಗಮಲ್ಲನೃಪರಾಜ್ಯದ ವತ್ಸರಮುತ್ತರೋತ್ತರ
ಕ್ಕಾಗಿರೆ ಶುಕ್ಲದಾಶ್ವಯುಜಕೃಷ್ಣದ ಪಂಚಮಿ [1]ಪುಷ್ಯತಾರೆ ಪೂ
ರ್ಣ[1] ಗುರು[2]ವಾಗೆ[2] ಭೂತಳದೊಳೀ ಕೃತಿ ಪೆತ್ತುದು ಸುಪ್ರತಿಷ್ಠೆಯಂ
ಚಾಗದ ಭೋಗದಗ್ಗಳಿಕೆಯಂ ಮೆಱೆದಂ ಕಪಿಭಾಳಲೋಚನಂ ೧೩

---

1 ಪೂರ್ಣಪುಷ್ಯತಾರಾ (ಚ); 2 ವಾರ (ಗ).

# ಅನುಬಂಧ ೨

## ಜೀವದಯಾಷ್ಟಮಿ ನೋಂಪಿಯ ಕಥೆ

ಆವಂಗೀ ವ್ರತಶಬ್ದಂ
ಭಾವಿಪೊಡದು ತೋಱವಿಗಾಯ್ತು ವಸ್ತುಚ್ಛಾಯಂ
ಪಾವನ ಸುಖಸಂದೋಹಮು
ನೀವಂ ಮುನಿಸುವ್ರತೇಶನಾತನೆ ದೇವಂ

ಎಱಗಿ ಮುನಿಸುವ್ರತೇಶಂ
ಗಱಿಯಮೆಯಿಂ ಗೆಯ್ದು ಹಿಂಸೆ ಪುಸಿ ಕಳವುಗಳಿಂ
ನೆಱೆ ಕೆಟ್ಟು ನರಕಕಿಳಿ[1]ವಂ[1]
ಕುಱಿಗಲಿಗಳಿಗುಸಿರ್ವೆನೊಂದು ನೋಂಪಿಯ ಕಥೆಯಂ

ಆ ವಿಧಾನಮೆಂತಾದುದೆಂದೊಡೆ

ಜೀವದಯೆಯೊಂದೆ ಧರ್ಮಂ
ಜೀವದಯಾಷ್ಟಮಿಯುಮಾದುದದಱಿಂ ಭವ್ಯರ್
ಜೀವದಯುದಲ್ಲಿ ನೆಗಳ್ದೀ
ಜೀವದಯಾಷ್ಟಮಿಯ ನೋಂತು ಸುಖಮಂ ಪಡೆವರ್

ಅದೆಂತೆಂದೊಡೀ ಜಂಬೂದ್ವೀಪದ ಭರತಕ್ಷೇತ್ರದಾರ್ಯಾಖಂಡದ ಮಧ್ಯದೊಳ್ ಮಗಥೆಯೆಂಬುದು ನಾಡು ರಾಜಗೃಹಮೆಂಬುದು ಪೊಳಲಾ ಪುರಮನಾಳ್ವಂ ಶ್ರೇಣಿಕ ಮಹಾಮಂಡಲೇಶ್ವರನಾತನ ಪಟ್ಟಮಹಾದೇವಿ ಸಕಲಗುಣಗಣಾಭರಣೆ ಸಮ್ಯಕ್ತ್ವರತ್ನಾಕರೆ ಚೇಳಿನೀ ಮಹಾದೇವಿಯೆಂಬವಳವರಿರ್ವರುಂ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರ್ದೊಂದು ದಿವಸಂ ಸರ್ವಾವಸರಮೆಂಬೋಲಗ ಶಾಲೆಯೊಳೊಡ್ಡೋಲಗಂಗೊಟ್ಟಿರಲಾ ಸಮಯದೊಳೊರ್ವ ಋಷಿನಿವೇದಕನಕಾಲ ಫಲ

---

1 [ಪಾ] ?

ಪುಷ್ಪಂಗಳಂ ತಂದಿತ್ತು ಸಾಷ್ಟಾಂಗ ಪ್ರಣುತನಾಗಿ ದೇವಾ ಬಿನ್ನಪಮೆಂ ದಿಂತೆಂದನೆಮ್ಮ ವಿಪುಲಗಿರಿ ಮಸ್ತಕದಲ್ಲಿ ಶ್ರೀವೀರವರ್ಧಮಾನಸ್ವಾಮಿಯ ಸಮವಸರಣಂ ಬಂದು ನೆಲಸಿರ್ದುದೆನೆ ಸಿಂಹಾಸನದಿಂದೆರ್ದು ಆ ದಿಕ್ಕಿ ಗೇಳಡಿಯಂ ನಡೆದು ಪೊಡವಟ್ಟು ಒಸಗೆದಂದಂಗಂಗಚಿತ್ತಮಂ ಕೊಟ್ಟಾ ನಂದ ಭೇರಿಯಂ ಪೊಯಿಸಿ ಪರಿಜನ ಪುರಜನ ಬಂಧುಜನ ಸಹಿತಂ ವಿಜಯ ಗಜೇಂದ್ರಮಂ ತಾನುಂ ಚೇಳಿನೀ ಮಹಾದೇವಿ ಸಹಿತಮೇಱಿ ವಿಪುಲಾಚಲಕೆ ಬಂದು ದೂರಾಂತರದಿಂ ವಾಹನಮನಿಳಿದು ಸಮವ ಸರಣಮಂ ಪೊಕ್ಕು ಧೂಳೀಶಾಲ ಮಾನಸ್ತಂಭ ಮೊದಲಾದ ಭೂಮಿಗಳತಿ ಶಯಮಂ ಚೇಳಿನೀ ಮಹಾದೇವಿಗೆ ಪೇಳುತ್ತ ಪೋಗಿ ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ತ್ರಿಜಗಾರಾಧ್ಯನಪ್ಪ ಜಿನೇಶ್ವರಂಗಭಿಮುಖವಾಗಿ ಕರಕಮಲಂಗಳಂ ಮುಗಿದು ನಿಂದು

ಜಯ ದುರಿತಹರಣ ನಿರುಪಮ
ಜಯ ಶಾಶ್ವತ ಸೌಖ್ಯದಾಯಿ ನಿತ್ಯಾನಂದಾ
ಜಯ ಮದನ ಮದವಿಭಂಜನ
ಜಯ ಜಯ ಸರ್ವಜ್ಞ ಮೋಕ್ಷಲಕ್ಷ್ಮೀನಾಥಾ

ಎಂದನೇಕ ಸ್ತುತಿ ಶತಸಹಸ್ರಂಗಳಿಂ ಜ್ಞಾನ ದರ್ಶನ ಸಮ್ಯಕ್ತ್ವ ಚಾರಿತ್ರ ದಾನ ಲಾಭ ಭೋಗೋಪಭೋಗಂಗಳೆಂಬ ನವ ಕೇವಲ ಲಬ್ಧಿಗೆಱೆಯನಪ್ಪ ಶ್ರೀ ವೀರವರ್ಧಮಾನಸ್ವಾಮಿಯಂ ಸ್ತುತಿಯಿಸಿ ಗೌತಮಗಣಧರರ್ಗೆ ವಂದಿಸಿ ಪನ್ನೊಂದನೆಯ ಮನುಷ್ಯಕೋಷ್ಠದೊಳ್ ಕುಳ್ಳಿರ್ದು ಸರ್ವಜ್ಞಮುಖಕಮಲ ವಿನಿರ್ಗತ ಸಾಗಾರಾನಾಗಾರ ಧರ್ಮ ಶ್ರವಣಾನಂದಾಮೃತಪಾನ ಪರಿಹೃಷ್ಟಚಿತ್ತನಾಗಿರ್ಪುದುಂ ಚೇಳಿನೀ ಮಹಾದೇವಿ ಸಭಾಮಧ್ಯದೊಳೆರ್ದು ನಿಂದು ಕರಕಮಲಂಗಳಂ ಮುಗಿದು ಗೌತಮಗಣಧರರ್ಗಿಂತೆಂದಳೆಲೆ ಸ್ವಾಮಿ ಗೃಹಸ್ಥರುಗಳ್ಗೆ ನಾನಾ ತೆಱ ದಿಂದಂ ಹಿಂಸಾನಂದ ಮೃಷಾನಂದ ಸ್ತೇಯಾನಂದ ಸುರಕ್ಷಣಾನಂದ ಮೆಂಬ ನಾಲ್ಕುಂ ತೆಱದ ಕ್ರೋಧದಿಂ ರಾಗದಿಂ ಮೋಹ ಹಿಂಸೆ ಯುಕ್ಕುಮಾ ಹಿಂಸೆಯಿಂ ನರಕಾದಿ ದುರ್ಗತಿ ದುಃಖಮುಮಕ್ಕುಮದಱಿಂ

ಹಿಂಸಾದೋಷಮಂ ಪರಿಹರಿಪ್ಪುದೊಂದಾನೊಂದು ನೋಂಪಿಯಂ ಬೆಸಸಿ ಮೆನಲು ಸಪ್ತರ್ಧಿಸಂಪನ್ನರುಂ ಸರ್ವಜೀವ ದಯಾ ಪರಿಣತಾಂತಃಕರಣ ರುಂ ಚತುಃಜ್ಞಾನಜ್ಯೋತಿಗಳುಮಪ್ಪ ಗೌತಮಗಣಧರ ಸ್ವಾಮಿಗಳು ಚೇಳಿನೀ ಮಹಾದೇವಿಗಿಂತೆಂದು ನಿರೂಪಿಸಿದರೆಲೆ ಮಗಳೆ ನಿನ್ನ ಸಕಲ ದೋಷಮಂ ಕೆಡಿಸಲು ಸಮರ್ಥಮಪ್ಪ ಜೀವದಯಾಷ್ಟಮಿಯ ನೋಂಪಿ ಯಂ ನೋಂಪುದೆನಲಾ ಮಹಾಸತಿ ಅಂತೆಗೆಯ್ವೆನೆಂದದಱ ವಿಧಾನಮಂ ಬೆಸಸಿಮೆನಲವರಿಂತೆಂದರಾಶ್ವಯುಜಮಾಸದ ಶುಕ್ಲಪಕ್ಷದ ಸಪ್ತಮಿಯ ರಾತ್ರಿಯಲ್ಲಿ ನೋಂಪವರೆಲ್ಲಂ ಚೈತ್ಯಾಲಯಕ್ಕೆ ಬಂದು ಪರಮೇಶ್ವರನಂ ಪೂಜಿಸಿ ಗುರುಭಕ್ತಿಪೂರ್ವಕಂ ಋಷಿಯರ್ಗೆ ವಂದಿಸಿ ನೋಂಪಿಯಂ ಕೈಕೊಂಡು ನವಮಿ ಪರಿಯಂತರಂ ಬ್ರಹ್ಮಚರ್ಯ ಉಪವಾಸಮಂ ಸ್ವೀಕ ರಿಸಿ ಮಱುದಿವಸದಷ್ಟಮಿಯೊಳು ಶುಚಿಭೂರ್ತರಾಗಿ ಪೂಜಾದ್ರವ್ಯವೆರಸಿ ಚೈತ್ಯಾಲಯಕ್ಕೆ ಬಂದು ಜಿನೇಶ್ವರನಂ ಮಹಾವಿಭವದಿಂ ಪಂಚಾಮೃತ ದಿಂದಭಿಷೇಕಮ್ಮಂ ಮಾಡಿಸಿ ಅನೇಕ ವಿಧದಷ್ಟವಿಧಾರ್ಚನೆಯಂ ಮಾಡಿಸಿ ಪಂಚಪರಮೇಷ್ಠಿಗಳ ಪೂಜೆಯಂ ಸವಿಸ್ತರಂ ಮಾಡಿ ಕಥೆಯಂ ಕೇಳ್ದು ಜಾವ ಜಾವದಲ್ಲಿ ಅರ್ಹತ್‌ಪರಮೇಶ್ವರಂಗೆ ಅಭಿಷೇಕ ಅಷ್ಟವಿಧಾರ್ಚನೆ ಯಂ ಜಾವಜಾವದಲ್ಲಿ ಮಾಡಿ ಧರ್ಮೋದ್ಯೋಗದಿಂ ಜಾಗರಮಿರ್ದು ದಿನಕರನುದಯಂಗೆಯ್ವಾಗಳು ಸರ್ವಜ್ಞನಂ ಪೂಜಿಸಿ ಭೂಯಾತ್ ಪುನರ್‌ದರ್ಶನಮೆಂದು ಬೀಳ್ಕೊಂಡು ಮನೆಯಂ ಪೊಕ್ಕು ಯಥಾಶಕ್ತಿ ಯಿಂ ೮ ತಂಡ ಋಷಿಯರ್ಗೆ ಅಜ್ಜಿಕಾ ಸಮುದಾಯಕ್ಕೆ ನಿರಂತರಾ ಯಮಂ ಮಾಡಿಸಿ ದೀನಾನಾಥರಂ ತೃಪ್ತಿಬಡಿಸಿ ಬಂಧುಜನ ಸಹಿತಂ ಪಾರ ಣೆಯಂ ಮಾಳ್ಪುದು. ೮ ವರುಷಂಬರಂ ನೋಂತು ಕಡೆಯೊಳುಜ್ಜವಣೆ ಯಂ ಮಾಳ್ಪ ವಿಧಾನಮೆಂತೆಂದೊಡೆ ಪರಮಾತಿಶಯ ಕೇವಳಿಗಳಪ್ಪ ಮುನಿಸುವ್ರತ ಸ್ವಾಮಿಗಳ ಪ್ರತಿಕೃತಿಯಂ ಯಕ್ಷಯಕ್ಷಿಸಹಿತವಾಗಿ ಮಾಡಿಸಿ ಚೈತ್ಯಾಲಯಮಂ ಕಟ್ಟಿಸಿ ಪ್ರತಿಷ್ಠೆಯಂ ಮಾಡಿಸಿ ಘಂಟಾ ಚಾಮರ ಹೊಳವಳಿಗೆ ಗೀತ ವಾದ್ಯ ನೃತ್ಯ ಶ್ರೀಬಲಿ ಮುಂತಾದ ವೈಭವಂಗಳಂ ಯಥಾಶಕ್ತಿಯಿಂ ನಿತ್ಯಪೂಜೆ ಮುಂತಾದುದಕ್ಕೆ ಕ್ಷೇತ್ರ ಪೂದೋಟಂಗಳಂ ಬಿಡುವುದು ಜೈನ ಬ್ರಾಹ್ಮಣ ಮಿಥುನಕ್ಕೆ ೮ ಮಂದಿಗೆ ಸೀರೆ ವೋಲೆ ರವಕೆ ಚಿಂತಾಕು ಕರಿಯ ಮಣಿ ಮೂಕುತಿ ಮುಂತಾದವಂ ಹಚ್ಚಡ ಪೈರಣೆ

ಶಿರೋವೇಷ್ಟನ ಕುಂಡಲ ಮುಂತಾದವಂ ಕೊಟ್ಟು ಭೋಜನ ತಾಂಬೂಲಾದಿಗಳಿಂ ಅವರ[ಂ] ತೃಪ್ತಿಬಡಿಸಿ ಚತುಃಸಂಘಮಂ ಪೂಜಿಸಿ ಲ ತಂಡ ಋಷಿಯರ್ಗೆ ಭಿಕ್ಷೆಯಂ ಮಾಡಿಸಿ ತಟ್ಟು ಕುಂಭ ಗುಂಡಿಗೆ ಪುಸ್ತಕ ಶ್ರುತ ಪಾವಡೆಗಳಂ ಕೊಟ್ಟು ಅನಿತೆಯಜ್ಜಿರ್ಯಯರ್ಗೆ ಕೊಟ್ಟು ಚತುಃಸಂಘ ಪೂಜೆಯಂ ಮಾಡಿ ತನ್ನ ವಿಭವಾನುಗುಣಮಾಗಿ ವಸಂತೋಕುಳಿಯಂ ಮಾಳ್ಪುದು. ಇದು ನೋಂಪಿಯ ಉದ್ಯಾಪನೆಯ ಕ್ರಮಮೆಂದು ಗೌತಮ ಸ್ವಾಮಿಗಳು ಪೇಳೆ ಕೇಳ್ದು ಸಂತುಷ್ಟ ಚಿತ್ತರಾಗಿ

ಆವಾವ ದೋಷಮೆಲ್ಲಮು
ನೋವದೆ ಪರಿಹರಿಪ ಜೀವದ[1]ಯಾ[1]ಷ್ಟಮಿಯಂ
ಭಾವಿಸಿ ನೋಂಪವರೆಲ್ಲಂ
ಭೂವಳಯುದ ಸುಖಮನುಂಡು ಮುಕ್ತಿಯ ಪಡೆವರ್

ಎಲ್ಲಾ ವ್ರತಮುಂ ನೋಂಪಿಯು
ಕೊಲ್ಲದ ವ್ರತಕಧಿಕಮಲ್ತುಮದಱಿಂ ಭವ್ಯರ್
ಪೊಲ್ಲಮೆ ಗೆಯ್ದಾ ದೋಷಕೆ
ಸಲ್ಲದೆ ಪೂಜಿಪುದು ಜೀವದ[2]ಯಾ[2]ಷ್ಟಮಿಯಂ

ಎಂದು ಶ್ರೇಣಿಕ ಮಹಾಮಂಡಲೇಶ್ವರನುಂ ಚೇಳಿನೀ ಮಹಾದೇವಿಯುಂ ನೋಂಪಿಯಂ ಕೈಕೊಂಡು ಎಲೆ ಸ್ವಾಮಿ ಮುನ್ನೀ ನೋಂಪಿಯ ನೋಂತ ಮಹಾನುಭಾವರ ಕಥೆಯಂ ನಿರೂಪಿ[3]ಸೆಂದು[3] ಬಿನ್ನವಿಸೆ ಅವರಿಂತೆಂದು ಪೇಳ್ದರು :

ಈ ಜಂಬೂದ್ವೀಪದ ಭರತಕ್ಷೇತ್ರದಾರ್ಯಾಖಂಡದೊಳವಂತಿವಿಷಯದೊಳುಜ್ಜಯಂತಿಯೆಂಬ ಪುರಮಾ ಪುರಮನಾಳ್ವಂ ಯಶೌಘಮಹಾರಾಜನಾತನ ಪಟ್ಟದರಸಿ ಚಂದ್ರಮತಿಯೆಂಬಳವರಿರ್ವರ್ಗಂ ಮಹೇಂದ್ರಂಗಮಿಂದ್ರಾಣಿಗಂ ಜಯಂತನಂತೆ ಯಶೋಧರನೆಂಬ ಕುಮಾರಂ ಪುಟ್ಟಿ ಶೈಶವಂ ಪತ್ತುವಿಟ್ಟು ಶಸ್ತ್ರಶಾಸ್ತ್ರಂಗಳೊಳಶ್ವಗಜಾರೋಹಣಂ

1 [ಯೆ ಅ] ?  2 [ಯೆ ಅ] ?  3 [ಸಿಮೆಂ] ?

ಮೊದಲಾದ ಸಕಲ ಕಲಾಪ್ರವೀಣನಾಗಿರೆ ಯಶೌಘಮಹಾರಾಜಂ ಯಶೋಧರ ಕುಮಾರಂಗೆ ಅಮೃತಮತಿಯೆಂಬ ರಾಜಪುತ್ರಿಕೆಯಂ ಅಗ್ನಿ ಸಾಕ್ಷಿಕವಾಗಿ ವಿವಾಹಮಂ ಮಾಡಿ ಸುಖದಲ್ಲಿರ್ಪ್ಪುದು[ಂ] ಅಮೃತಮತಿಗಂ ಯಶೋಧರರಂಗಂ ಮೂಡಣದಿಕ್ಕಿಂಗಂ ದಿವಸಕ್ಕಂ ಸೂರ್ಯನುದಯಿ ಪಂತು ಯಶೋಮತಿ ಎಂಬ ಕುಮಾರನುದಯಂಗೆಯ್ದು ಯಶೌಘ ಮಹಾರಾಜಂ ಪುತ್ರಪೌತ್ರರಿಂ ಬಳಸಿ ಸಪ್ತತಳಪ್ರಾಸಾದದ ಮೇಲೊಡ್ಡೋ ಲಗಂ ಗೊಟ್ಟಿರಲಾ ಸಮಯದೊಳುಲ್ಕಾಪಾತಮಂ ಕಂಡು ಸಂಸಾರ [ಭೋಗ][1]ವಿರಕ್ತನಾಗಿ ಕಾಯಾಯುಗಳನಸ್ಥಿರಂಗಳೆಂದಱಿದು ಯಶೋ ಧರಂಗಭಿಷೇಕ ಪೂರ್ವಂ ರಾಜ್ಯಪಟ್ಟಮಂ ಕಟ್ಟಿ ಪರಮ ನಿರ್ವಾಣ ಸಾಧನಮಪ್ಪ ಜಿನದೀಕ್ಷೆಯಂ ಕೈಕೊಂಡು ಉಗ್ರೋಗ್ರ ತಪಶ್ಚರಣಂ ಗಳಂ ಮಾಡುತ್ತುಮಿರೆ ಇತ್ತಲ್ ಯಶೋಧರಮಹೀರಾಜಂ ರಾಜ್ಯಂ ಗೆಯ್ಯುತ್ತಮಿರ್ದೊಂದು ದಿವಸಂ ರಾತ್ರಿಸಮಯದೊಳು ಸಾಮಂತ ಪುರೋಹಿತ ಸೇನಾಪತಿ ದಂಡನಾಯಕ ಮುಂತಾದ ಬಾಹತ್ತರ ವಿನಿ ಯೋಗಮಂ ಬೀಳ್ಕೊಟ್ಟು ಸಜ್ಜಾಗೃಹಮಂ ಪೊಕ್ಕು ರತಿಯುಂ ಕಾಮ ದೇವನುಮಿರ್ಪಂತು ಅಮೃತಮತಿಯುಂ ತಾನುಂ ಮನ್ಮಥಕೇಳೀ ವಿನೋ ದಾಮೃತ ಸಮುದ್ರ ಮಧ್ಯದೊಳೋಲಾಡಿ ಪಟ್ಟಿರ್ಪುದುಂ ಬೆಳಗಪ್ಪಜಾವ ದೊಳು ಅರಮನೆಯಿಂದತಿ ದೂರಮಲ್ಲದೆಡೆಯೊಳು ಯಾಗಹಸ್ತಿಯಂ ಕಟ್ಟಿರಲದಱ ಮಾವತಿಗನಷ್ಟವಂಕನೆಂಬಾತ[ಂ] ನಿಪ್ರೆಯಿಂದೆಚ್ಚತ್ತು ಸುಸ್ವರದಿಂ ಮಾಳವಪಂಚಮವೆಂಬ ರಾಗಮಂ ಮಾಳ್ಪ[1]ದಾ[1] ಸಮಯ ದೊಳೆಚ್ಚತ್ತಿರ್ದ ಅಮೃತಮತಿ ಅದಂ ರಾಗಸ್ವರಮಂ ಕೇಳ್ದು ಕಿವಿವೇಟಂ ಗೊಂಡು ಬೆಳಗಾಗಲೊಡಂ ಗುಣವತಿಯೆಂಬ ದೂತಿಯಂ ಕರೆದೆಲೆ ಅಬ್ಬಾ ನಮ್ಮ ಸಜ್ಜಾಗೃಹದ ಸಮೀಪದಲ್ಲಿ ಕಟ್ಟಿದಾನೆಯ ಮಾವತಿಗಂ ರಾಗಂ ಗೆಯ್ಯಲಾತನ ರಾಗಮೆನ್ನ ಮನಮಂ ಸೆಱೆಗೆಯ್ದುದಾತನಂ ನನಗೆ ನೀಂ ಪೋಗಿ ತರಲ್ವೇಳ್ಕುಮೆನಲಾಕೆ ಆತನಿರ್ದಲ್ಲಿಗೆ ಪೋಗಿ ಆ ಅಷ್ಟವಂಕನೆಂ ತಪ್ಪ ಚೆಲುವನೆಂದೀಕ್ಷಿಸಿ ಕುಗ್ಗಿದ ಕೊರಳುಂ ಹಱಿದಲೆಯುಂ ನಂಡು ಮೂಗುಂ ಹೊಱಹಲ್ಲುಂ ಗೀಜುವಾಯುಂ ಕೊಳೆತ ಕಣ್ಣುಂ ಮೂಳ ಗಿವಿಯುಂ ನಳ್ಳಿದಪ್ಪ ಪಣೆಯುಂ ರೋಮಮಿಲ್ಲದ ಪುರ್ಬುಂ ಗೂಡು ಗೊಂಡೆದೆಯುಂ ಸೋಬೆಗುತ್ತದಿಂದುಬ್ಬಿದ ಹೊಟ್ಟೆಯುಂ ಸುಡೆ ಪುಣ್ಣುಂ

1 ಓಲೆ ಹರಿದುಹೋಗಿದೆ. 2 [ದುಮಾ] ?

ಸುರಿವ ಕೀವಿಂ ಮುತ್ತಿ ಜೊನ್ನೆಂದೇಳುವ ನೊಣವುಂ ಆನೆಯ ಮೂತ್ರ ಗಳಿಂ ಬೆಂದ ಬೆರಳ್ಗಳುಂ ಹತ್ತಿದ ನಿತಂಬಮುಂ ಮುಱಿದ ಬೆನ್ನುಂ ಬತ್ತಿದ ಕಾಲ್ಗಳುಂ ಹೆಡಸು ನಾಱುವ ಶರೀರಮುಂ ಇಂತಿರ್ದ ಆನೆವಾಂಕನಂ ಕಂಡು ಗುಣವತಿ ಅತಿ ಪೇಸಿ ಅರಸಿಯಂ ನಿಂದಿಸಿ ಮರಳಿ ಅರಸಿಯಲ್ಲಿಗೆ ಬಂದು ಇಂತೆಂದಳೆಲೆ ಮಗಳೆ ನೀನಪ್ಪೊಡೆ ಮನುಷ್ಯಾಕಾರಮಂ ಧರಿಸಿದ ಊರ್ವಶಿಯಂತಿಪ್ಪೆ ನಿನ್ನ ವಲ್ಲಭಂ ದೇವೇಂದ್ರನಂತಿಪ್ಪನೀ ನಿಕೃಷ್ಟನಂ ಬಯಸಲಪ್ಪುದನುಚಿತಮೆನಲಾಕೆ ಇಂತೆಂದಳೆಲೆ ಮರುಳೆ ಆವಾತ ನಲ್ಲಿ ಕಾಮಂ ಪೂಜ್ಯನಾತಂ ಹೀನಕುಲನಾದೊಡಂ ರೂಪಾಧಿಕಮಿಲ್ಲ ದಿರ್ದೊಡಂ ಸ್ತ್ರೀಯರಿಗೆ ಆತನೆ ಕಾಮದೇವನಾದಕಾರಣಂ ರೂಪು ಕುಲ ಗುಣಂಗಳೆಂಬ ದುರ್ಬುದ್ಧಿಯಂ ಬಿಟ್ಟು ಸ್ತ್ರೀಯರ ಮನವಸೋಲಿಸುವವಂ ಕಾಮದೇವನೆಂದೆ ಬಗೆದು ತರಲ್ವೇಳ್ಕುಮೆನಲಾ ಗುಣವತಿ ಆಕೆಯ ನಿರ್ಬಂಧದಿಂ ಸಂಬಂಧಿಸಿಕೊಡಲಾತನೊಡನೆ ಕಾಮಸುಖವನನುಭವಿಸುತ್ತಮಿರಲೊಂದು ದಿವಸಂ ಯಶೋಧರ ಮಹಾರಾಜಂ ತನ್ನೊಳು ಮುನ್ನಂ ಮಾಳ್ಪಾಲಿಂಗನ ಚುಂಬನ ಮೊದಲಾದಕ್ಕಱಿಂ ಕಾಣದೆ ಭೇದಿಸಿ ಆಕೆಯ ಮನಮಂ ಕಾಣದಿರೆ ಒಂದಾನೊಂದು ದಿನಂ ರಾಯಂ ಓಲಗಂಗೊಟ್ಟು ಅಮೃತಮತಿಯಂ ಹತ್ತಿರೆ ಕುಳ್ಳಿರಿಸಿಕೊಂಡು ನಾಟಕ ಶಾಲೆಯಿಂ ರಾತ್ರಿ ಯಲ್ಲಿ ಹೊತ್ತುಗಳೆದು ಒಡ್ಡೋಲಗಮಂ ಬೀಳ್ಕೊಟ್ಟು ತನ್ನ ಪ್ರಾಣವಲ್ಲಭೆ ಯಪ್ಪ ಅಮೃತಮತಿಯ ಕೈವಿಡಿದುಕೊಂಡು ಸಜ್ಜಾಗೃಹಕ್ಕೆ ಬಂದು ಸ್ತ್ರೀ ಪುರುಷರುಂ ಕಾಮಕ್ರೀಡೆಯಲ್ಲಿ ಸುಖವಿರ್ದು ನಿದ್ರಾಮುದ್ರಿತನಾದುದನೆ ಕಂಡು ಮೆಲ್ಲನೆಳ್ದು ಅಷ್ಟವಂಕಂಗೆ ಭಕ್ಷ್ಯಂಗಳಂ ತೆಗೆದುಕೊಂಡು ಪೋಪು ದುಂ ರಾಯನೆಚ್ಚತ್ತು ಆಕೆಯ ಪಿಂದೆಯೆ ಪೋಗಿ ಮಱೆಗೊಂಡಿರೆ ಅಮೃತ ಮತಿ ಪೋಗಿ ಅಷ್ಟವಂಕನಂ ಮಲಗಿರ್ದನನೆಬ್ಬಿಸೆ ಆತಂ ಕ್ರೋಧಮಂ ತಾಳ್ದು ನಿದ್ರೆಯಂ ಕೆಡಿಸಿದೆಯೆಂದು ಕೋಪಾಕ್ರಾಂತನಾಗಿ ಎಂದೂ ಒರ್ಪ ಪೊತ್ತಿಂಗೆ ಬಂದುದಿಲ್ಲವೆಂದು ಕೋಪಿಸಿ ಆಕೆಯಂ ಮುಂದಲೆ ವಿಡಿದು ಆನೆಯ ನೇಣುಗಳಿಂ ಬಡಿಯೆ ಆಕೆ ದೈನ್ಯವೃತ್ತಿಯಿಂ ಬೇಡಿಕೊಳುತ ಲಿಂತೆಂದಳು ಎಲೆ ಪ್ರಿಯನೆ ರಾಯಂ ನಾಟಕಶಾಲೆಯಂ ನಾಡಿಸಿ ಬರ್ಪಾಗಂ ಪೊತ್ತು ಪೋಯ್ತು ಅದುಕಾರಣ ನಾನುಂ ಬಂದುದಿಲ್ಲ ಅದಕ್ಕೆ ನೀನುಂ ನನ್ನ ಕೊಲಲಾಗದೆಂದು ಬೇಡಿಕೊಂಡು ಆ ನೋವಂ ಮಱೆದು

ತಾನುಂ ತಂದ ಕಜ್ಜಾಯಮಂ ಆತಂಗೆ ಕೊಟ್ಟು ಅಷ್ಟವಂಕನೊಳು ನೆರೆದಿರ್ಪುದುಂ ರಾಯಂ ಕಂಡು ಖಡ್ಗಮಂ ನೆಗಪಿ ಪೊಯ್ವೆನೆಂದು ಬಗೆದು ತನ್ನ ಮನದೊಳಿಂತೆಂದು ಭಾವಿಸಿದನೀ ನಿಕೃಷ್ಟನೆನ್ನ ವೆಸೆಯಿಂ ಜೀವಿಪಂ ಇವಳುಂ ಸ್ತ್ರೀ ವಧೆ[....?]ಯೆಂದು ಶತ್ರು ರಾಯರುಗಳ ಮಸ್ತಕಮಂ ವಿದಾರಿಪ ಖಡ್ಗಂ ಹೀನನುಮಿಂತಪ್ಪ ನಿಕೃಷ್ಟನಲ್ಲಿ ಪ್ರಯೋಗಿಪುದಲ್ಲವೆಂದು ರಾಯಂ ಕೊಲೆಗೆ ಪೇಸಿ ತಿರಿಗಿ ಬಂದು ಮಂಚದಮೇಲೆ ಪವಡಿಸಿ ಸ್ತ್ರೀಯರ ಗುಣಾಗುಣಂಗಳಂ ಸ್ತ್ರೀಯರ ಅವಿಚಾರಮಂ ಭಾವಿಸುತ್ತಮಿರೆ ಅಮೃತಮತಿಯುಂ ಅಷ್ಟವಂಕನೊಳ್' ನೆರೆದು ಅವನೊಳ್ ಪೇಳಿಕೊಂಡು ಸಜ್ಜಾಗೃಹಕ್ಕೆ ಬಂದು ಮಂಚದ ಮೇಲೆ ಮಲಗೆ ಆ ವೇಳೆಗೆ ಬೆಳಗಾಗೆ ಮಂಗಳ ಪಾಠಕ ಧ್ವನಿಯಿಂ ರಾಯನೆದ್ದು ಮುಖ ಮಜ್ಜನಮಂ ಮಾಡಿ ದೇವಾಧಿದೇವನಪ್ಪ ಅರ್ಹತ್ ಪರಮೇಶ್ವರಂಗೆ ವಂದಿಸಿ ಒಡ್ಡೋಲಗದೊಳ್ ಕುಳ್ಳಿರ್ದ ಸಮಯದೊಳು ಒರ್ವಂ ರಾಯಗೆ ನೆಯ್ದಿಲಪುಷ್ಪಮಂ ಕಾಣಿಕೆಯಂ ಕುಡೆ ಅದಂ ರಾಯಂ ವಾಸಿಸಿ ಕಯ್ಯೊಳು ಪಿಡಿದುಕೊಂಡು ಓಲಗಮಂ ಬೀಳ್ಕೊಟ್ಟು ತನ್ನ ಪ್ರಾಣವಲ್ಲಭೆಯಪ್ಪ ಅಮೃತಮತಿಯು ಒಡ್ಡೋಲಗಮಂ ಪೊಕ್ಕು ಆಕೆಯಂ ಕಂಡು ಇರುಳಿನ ವೃತ್ತಾಂತಮಂ ಪೇಳುವಂತೆ ಆಕೆಯ ಕೂಡೆ ಸರಸವಿನೋದದಿಂ ನೆಯ್ದಿಲ ಪುಷ್ಪದಿಂದಿಡೆ ಆಕೆಯುಂ ಆಗಳೆ ಮೂರ್ಛೆವೋಗಿ ಬೀಳೆ ಅದಂ ಅರಸಂ ಕಂಡು ಶೀತಲ ಕ್ರಿಯೆಯಿಂದೆಚ್ಚರಿಕೆಯಂ ಪುಟ್ಟಿಸಿ ಎಲೆ ಪ್ರಿಯಳೆ ನಿನಗೆ ಇಂದು ಬಂದ ವಿಪತ್ತು ಇನ್ನೆಂದಿಗು[ಂ]ಬಾರದೆಂದು ಸಂಕೇತದಿಂದಱಿಪಿ ರಾಯಂ ಸ್ತ್ರೀಯರ ಮಾಯಮಂ ನೆನೆಯುತ್ತ ತನ್ನ ತಾಯರಮನೆಗೆ ಬರೆ ಚಂದ್ರಮತಿ ಮಗನ ಮೊಗಮಂ ನೋಡಿ ಮಱುಗಿ ನಿನಗಾರ ಭಯಂ ನಿನ್ನ ಮುಖ ಕಮಲ ಬಾಡಿದುದಕ್ಕೆ ಕಾರಣಮೇನೆಂದು ಮಗನಂ ಬೆಸಗೊಳೆ ಎಲೆ ತಾಯೆ ನಿನ್ನ ಕೃಪೆಯಿಂ ನನಗೊಂದೂ ಭಯವಿಲ್ಲ ನಿನ್ನೆಯ ರಾತ್ರಿಯಲ್ಲಿ ನಿನ ಪೆಜ್ಜೊಸೆಯಪ್ಪ ಅಮೃತಮತಿ ಏಳುನೆಲೆಯುಪ್ಪರಿಗೆಯಿಂದಂ ಕೆಳಗಣ ಬಚ್ಚಲ ಗುಳಿಯೊಳ್ ಪೊರಳುವುದಂ ಕಂಡೆನು ಚಂದ್ರನ ಕಾಂತಿಯಂ ರಾಹು ಪಿಡಿವುದಂ ಸ್ವಪ್ನದಲ್ಲಿ ಕಂಡು ಅತಿಭೀತನಾದೆನೆನೆ ಆ ಮಾತಂ ತಾಯಿ ಕೇಳ್ದು ದುಃಸ್ವಪ್ನಮೆಂದು ಬಗೆದು ಮಗನೆ ನೀ ಕಂಡ ಸ್ವಪ್ನದ ಫಲಮತಿಕಷ್ಟವೆಂದು ರಾಜಬಾಧೆಯಂ ಪೇಳ್ಗುಮಿದಱ ದೋಷಮ

ನೊಂದೆ ಕ್ಷಣದೊಳು ಕೆಡಿಸಲಾರ್ಪ ಚಂಡಮಾರಿಯೆಂಬ ದೇವತೆಯುಂ ಪೂಜಿಸಿ ನಿನ್ನ ಭುಜಾದಂಡಮಂಡಿತಮಪ್ಪ ಕಂಡಯದಿಂ ಕುಱಿಗಳ ಸಹಸ್ರಮಂ ಕೊಂದು ದೇವಿಯಂ ಪೂಜಿಸಿ ದೇವಿಯ್ಗಂ ತೃಪ್ತಿ ಬಡಿಸಲು ಸ್ವಪ್ನದೋಷಮೆಲ್ಲಂ ತೀರ್ಗುಮೆನಲರಸಂ ನಡನಡಂ ನಡುಗಿ ಕಿವಿಗಳಂ ಮುಚ್ಚಿ ಅತಿ ಭೀತನಾಗಿ ತನ್ನ ತಾಯಿಗಿಂತೆಂದ[ಂ] ನಮ್ಮ ಕುಲದರಸುಗಳೆಲ್ಲರುಂ ಶ್ರೀ ಜಿನಧರ್ಮ ಪರಾಯಣರಹಿಂಸಾದಿ ವ್ರತಮಂ ಧರಿಸಿ ಸ್ವರ್ಗಾದಿ ಮೋಕ್ಷಮಂ ಪಡೆದರು ಅದಂ ನೀನಱಿಯದಂತೀ ಹಿಂಸೆಯ ನುಡಿಯಂ ನುಡಿಯಬರ್ಪುದೆ ಎಂದು ಪೇಳಿ ತನ್ನ ಮನದೊಳಿಂತೆಂದನೆತ್ತ ಮೆಟ್ಟಲೆತ್ತ ಚಪ್ಪಟೆಯಾಯ್ತೆಂದು ತಾನೊಂದ ನೆನೆದರೆ ತಾನೊಂದಾಯಿತ್ತಾಗಿ ಸ್ತ್ರೀಯರೊಳಂ ಬಾಲಕರೊಳಮಜ್ಞಾನಿಗಳೊಳಂ ಮೂರ್ಖರೊಳಂ ಸ್ವಪ್ನಾದಿಗಳಂ ಪೇಳಲಾಗದೆಂಬ ನೀತಿಯಂ ನೆನೆಯುತ್ತ ತಾಯಿ ಪೇಳಿದ ಹಿಂಸೆಗೆ ಪೇಸುತ್ತಮಿರ್ಪ ನಿಜಕುಮಾರನಂ ಕಂಡು ಚಂದ್ರಮತಿ ಇಂತೆಂದಳು ತಾಯಮಾತಂ ಮೀಱುವುದು ಕ್ಷತ್ರಿಯ ರಾಜಪುತ್ರಂಗೆ ಲಕ್ಷಣಮಲ್ಲೆಂದು ನಿರ್ಬಂಧಿಸಿ ಪೇಳೆ ಹಿಂಸೆಗೆ ಕೇಳದಿರೆ ತಾಯಿ ಮನದೊಳೊಂದುಪಾಯಮಂ ನೆನೆದು ಪಿಟ್ಟಿನ ಕೋಳಿಯಂ ಚಿತ್ರಕರಿಂ ಮಾಡಿಸಲದು ವಿಚಿತ್ರರೂಪಮಪ್ಪುದುಮಾ ರೂಪಾತಿಶಯಕ್ಕೆ ಒಂದು ಪಿಶಾಚಮದಱೊಳಗೆ ಪೊಕ್ಕಿರಲುಂ ಆ ಕೋಳಿಯಂ ಕೊಲ್ಲೆಂಬುದುಂ ಅರಸಂ ಒಲ್ಲೆನೆಂದೊಡೆ ತನ್ನಪ್ರಾಣಕ್ಕೆ ಮಾಡಿಕೊಂಬೆನೆನಲಾಭೀತನಾಗಿ ತಾಯುಪರೋಧಕ್ಕೊಡಂಬಟ್ಟು ಆಶ್ವಯುಜ ಮಾಸದ ಶುಕ್ಲಪಕ್ಷದಷ್ಟಮಿಯ ಕುಜವಾರದಂದು ಚಂಡಿಕಾದೇವಿಯ ಮುಂದಾ ಹಿಟ್ಟಿನ ಕೋಳಿಯಂ ತಾಯ ಒತ್ತಂಬದಿಂ ಖಂಡಯದಿಂ ಪೊಯ್ಯಲಾ ಕೋಳಿಯ ವೊಳಪೊಕ್ಕಿರ್ದ ಭೂತಂ ಕೋಳಿಯಂತೆ ಕೂಡೆ ಕೂಗೆ ಅರಸಂ ಆ ಧ್ವನಿಯಂ ಕೇಳ್ದು ಪಿಡಿದಸಿಯಂ ನೆಲಕ್ಕೀಡಾಡಿ ಮಱುಗಿ ನಡನಡಂ ನಡುಗಿ ಕಣ್ಬನಿಯಂ ತುಂಬಿ

ಇದು ಕೋಳಿಯ ಧ್ವನಿಯಲ್ಲಂ
ಸುದತಿಯು ದೆಸೆಯಿಂದ[ಮೆನ್ನ] ನರಕದ್ವಾರ
ಕ್ಕಿದು ಕರೆವುದೆಂದು ಮನದೊಳು
ಕುದಿದಂ ಪಾತಕಿಯೆನಿಪ್ಪ ತಾಯಿಂ ನೊಂದಂ

ಅಂತು ಮನೆಗೆ ಬಂದು ಪರಮ ವೈರಾಗ್ಯದಿಂ ಜಿನದೀಕ್ಷಾಭಿಮುಖನಪ್ಪ ನಿಜವಲ್ಲಭನಂ ಅಮೃತಮತಿ ಕಂಡು ತನ್ನ ದೂಸಱಿಂದೀತಂ ಪೋಪನಿದಕ್ಕೆ ತಕ್ಕುದಂ ಮಾಳ್ಪೆನೆಂದು ಮನದೊಳು ನೆನೆದು ಪತಿಯ ಸಮೀಪಕ್ಕೆ ಬಂದು ಕಾಲ್ಗೆಱಗಿ ನೀ ಕ್ಷತ್ರಿಯೋತ್ತಮಂ ದಯಾಪರನಪ್ಪುದಱಿಂ ಸ್ತ್ರೀಯಪ್ಪೆನ್ನಪರಾಧಮಂ ಸೈರಿಸಿ ಯಶೋಮತಿಗೆ ಪಟ್ಟಂಗಟ್ಟಿ ಎನ್ನರಮನೆಯೊಳಾನುಂ ನೀವುಂ ಅತ್ತೆಯುಂ ಭೋಜನಂಗೆಯ್ದು ಮೂವರುಂ ಜಿನರೂಪಧಾರಿಗಳಪ್ಪೆವೆಂದೊಡಂಬಡಿಸಿ ವಿಷದ ಲಡ್ಡುಗೆಯಂ ಮಾಡಿಕ್ಕಿ ಗಂಡನುಮಂ ಅತ್ತೆಯುಮಂ ಕೊಂದಷ್ಟವಂಕನೊಡನೆ ಕಾಮಭೋಗಂಗಳನನುಭವಿಸುತ್ತಮಿರ್ದಳಿತ್ತಂ ಯಶೋಧರಂ ಸತ್ತು ಹಿಟ್ಟಿನ ಕೋಳಿಯಂ ಕೊಂದ ದೋಷದಿಂ ವಿಂಧ್ಯಗಿರಿಯಲ್ಲಿ ನವಿಲಾಗಿ ಪುಟ್ಟಿದನಿತ್ತಲಾ ಚಂದ್ರಮತಿಯುಂ ಸತ್ತು ಕರಹಾಟದೇಶದಲ್ಲಿ ಹೆಣ್ಣುನಾಯಾಗಿ ಪುಟ್ಟಿದಳಿಂತಿರ್ವರು[ಂ] ಪರಸ್ಪರ ವೈರಭಾವದಿಂ ಎಯ್ಯಮೃಗಮುಂ ಕೃಷ್ಣಸರ್ಪನುಂ ಅಜನುಂ ಕೋಣನುಂ ಮೀನುಂ ಮೊಸಳೆಯುಂ ಆಡುಂ ಹೋತನುಂ ಮೊದಲಾದನೇಕ ಭವಂಗಳೊಳು ಅನ್ಯೋನ್ಯ ಹತಿಯಿಂ ಸತ್ತು ಕಡೆಯೊಳುಜ್ಜೇನಿಯಲ್ಲಿ ಮಾದೆಗನ ಮನೆಯಲ್ಲಿ ಕೋಳಿಗಳಾಗಿ ಪುಟ್ಟಿರಲಾ ಮಾದೆಗನರಸಂಗೆ ಕಾಣಿಕೆದಂದು ಕೊಡಲಾತಂ ಚಂಡಕರ್ಮನೆಂಬ ತಳವಾಱಿನ ವಶಕ್ಕೆ ಕೊಡಲೊಂದು ದಿವಸಂ ಯಶೋಮತಿ ಮಹಾರಾಜಂ ತನ್ನರಸಿ ಕುಸುಮಾವಳಿಯೆಂಬಳ್‌ವೆರಸಿ ಉದ್ಯಾನವನಕ್ಕೆ ಪೋಗಿ ಪೂವಿನ ಮಂಟಪದೊಳು ತಳಿರ ತಲ್ಪದೊಳು ತಾನುಂ ಕುಸುಮಾವಲಿ ಕಾಮಸುಖದಿನಿರ್ದನಿರಲು ಚಂಡಕರ್ಮಂ ಕೋಳಿಗಳ್‌ವೆರಸು ವನವಿಹಾರಂಗೆಯ್ಯುತ್ತಮಲ್ಲಿರ್ದ ದಿವ್ಯಮುನಿಗಳಂ ಕಂಡು ಜೀವತತ್ವಮಂ ಕೇಳೆ ಜೀವದಯಾ ಸ್ವರೂಪಮಂ ಕೇಳ್ದುಮಲ್ಲಿರ್ಪ ಸಮಯದಲ್ಲಿ ಆ ಕೋಳಿಗಳ್ ಕೇಳೆ ಸಂತುಷ್ಟಂಗಳಾಗಿ ಸರಂಗೆಯ್ಯೆ ಯಶೋಮತಿಯೆಂಬರಸಂ ಶಬ್ದವೇದಿಯೆಂಬ ಬಾಣದಿಂದೆರಡರ ಶಿರಮನೊರ್ವೊದಲೊಳೆ ಚ್ಛೇದಿಸಲವೆರಡುಂ ಕುಸುಮಾವಲಿಯ ಗರ್ಭದೊಳಭಯರುಚಿ ಅಭಯಮತಿಗಳೆಂಬ ಗಂಡು ಹೆಣ್ಗೂಸುಗಳಾಗಿ ಪುಟ್ಟಿ ಶಿಶುತ್ವಮಂ ಪತ್ತುವಿಟ್ಟು ಬಾಲಕಾಲದೊಳೆ ಸುದತ್ತಾಚಾರ್ಯರ ಪಕ್ಷದೊಳು ಹಿಂದಣ ಪ್ರಪಂಚಮಂ ಕೇಳ್ದು ನಿರ್ವೇಗಂ ಪುಟ್ಟಿ ಕ್ಷುಲ್ಲುಕರಾಗಿ ತಪಂಗೆಯ್ಯುತ್ತಂ ಯೌಧೆ ವಿಷಯದ

ರಾಜಪುರದ ಅರಸಂ ಮಾರಿದತ್ತನ ಪುರದ ಬಹಿರುದ್ಯಾನಕ್ಕೆ ಸುದತ್ತಾ ಚಾರ್ಯರುಂ ಸಮುದಾಯಂಬೆರಸಿ ಬಂದು ಪಂಥಾತಿಚಾರ ಪ್ರತಿಕ್ರಮಣಂ ಗೆಯ್ದು ಪವಾಸಮಂ ಕೈಕೊಂಡು ಬ್ರಹ್ಮಚಾರಿ ಯುಗ್ಮಮಂ ಭಿಕ್ಷಾನಿಮಿತ್ತ ಮಾ ಪುರಕ್ಕೆ ಕಳುಹಲಾ ಪ್ರಸ್ತಾವದೊಳು ಚೈತ್ರಮಾಸದ ಶುಕ್ಲಪಕ್ಷದಷ್ಟ ಮಿಯುಂ ಬರಲಾ ರಾಜಪುರದರಸ ಮಾರಿದತ್ತಂ ಚಂಡಮಾರಿಯ ಭಕ್ತ ನಪ್ಪುದಱಿಂದಾ ದೇವತೆಗೆ ಜಾತ್ರೆಯುಂ ನೆರಪಿ ದೇವತೆಯ ಮುಂದೆಲ್ಲಾ ಜೀವಂಗಳ ಯುಗಲಂಗಳಂ ವಧಿಸುವ ಪ್ರತಿಜ್ಞೆಯಿಂದಂ ಶುಭಲಕ್ಷಣ ಸಂಭೃತಂಗಳಪ್ಪ ಮನುಷ್ಯಯುಗ್ಮಮಂ ತರಲ್ವೇಡಿ ಚಂಡಕರ್ಮನೆಂಬ ತಳಾ ಱನನಟ್ಟಲಾತಂ ಬಂದು ಭಿಕ್ಷಾನಿಮಿತ್ತವಾಗಿ ಬರ್ಪಭಯರುಚಿಯುಭಯ ಮತಿಗಳಂ ಕಂಡವರಿರ್ವರಂ ಪಿಡಿದು ದೇವತೆ ಸಂತುಷ್ಟೆಯಹಳೆಂದು ಪಿಡಿ ದೊಯ್ದು ಮಾರಿದತ್ತಂಗೊಪ್ಪಿಸಲಾತಂ ಕೊಲಲೆಂದು ಇವರ ಗಂಧಲೇಪ ನವಂ ಮಾಡಿ ಪೂವಿನ ಮಾಲೆಯನಿಕ್ಕಿ ದೇವತೆಯ ಮುಂದೆ ಕುಳ್ಳಿರಿಸಿ ಅರಸಂ ಖಡ್ಗಮಂ ಜಡಿದು ಜನಮೆಲ್ಲಂ ಅರಸನಂ ಇವರೊಡನೆ ಪರಸಿ ಮೆನಲವರಿಂತೆಂದರೆಲೆ ಮಹಾರಾಜಾ ನೀಂ ರಾಜಚಂದ್ರನಪ್ಪುದಱಿಂ ಚಂದ್ರನಂತೆಲ್ಲಾ ಜನಂಗಳಿಗೆ ಹಿತಮನೆ ನೆಗಳುತ್ತ ಪ್ರಜೆಗಳಂ ಪ್ರತಿ ಪಾಲಿಸುತ್ತ ಪುತ್ರಮಿತ್ರರಂ ಪ್ರತಿಪಾಲಿಸಿ ದಯಾ ಮೂಲಮಪ್ಪ ಅಹಿಂಸಾ ಧರ್ಮಮೆ ಮೋಕ್ಷಮಾರ್ಗಮೆಂದಾರಾಧಿಸಿ ಸದ್ಧರ್ಮ ಪರಾಯಣನಾಗಿ ರಾಜಾನ್ವಯತಿಲಕನೆನಿಸಿ ಸುಖದೆ ರಾಜ್ಯಮನನುಭವಿಸೆಂದು ಪರಸೆ ಅರಸಂ ಆ ಪರಕೆಯುಂ ಕೇಳ್ದು ವಿಸ್ಮಯಾನ್ವಿತನಾಗಿ ಪಿಡಿದ ಖಡ್ಗಮಂ ನೆಲಕ್ಕೀಡಾಡಿ ಇವರಿರ್ವರ ಧೈರ್ಯಕ್ಕಂ ಬಾಲಕಾಲದಲ್ಲಿಯ ನಿರ್ವೇಗ ತೊಱವಿಗಂ ಮೆಚ್ಚಿ ನೀವಾರಾವ ಕುಲಮೇನು ನಿಮಿತ್ತಮೀ ಹರಯದಲ್ಲಿ ಭೋಗನಿಸ್ಪೃ ಹರಾದಿರೆನೆ ಅವರಿಂತೆಂದರೆಲೆ ಮಹಾರಾಜಾ ಎಮ್ಮ ಚರಿತಮೆಂಬುದು ಧಾರ್ಮಿಕರ್ಗೆಯೆ ಸೊಗಸುವುದು ನೀನು ಮಿಥ್ಯಾಧರ್ಮರತನಾದನದು ಕಾರಣ ನಿನ್ನಭೀಷ್ಟಮಪ್ಪಂತೆ ಮಾಡೆಂಬುದುಂ ಅರಸಂ ನೀವು ಮಹಾ ರಾಜರುಗಳು ಮಹಾಪುರುಷರೆಂದು ಅವರ ಪಾದ ಪ್ರಕ್ಷಾಲನಂ ಮಾಡಿ ತಾನುಂ ಭಕ್ತಿಯಿಂ ವಂದಿಸಿ ಬೇಡಿಕೊಂಡು ನಿರ್ಬಂಧದೆ ಬೆಸಗೊಳೆ ಅವರಿಂತೆಂದರೆಲೆ ಮಹಾರಾಜಾ ನಿನ್ನೊಳ್ಳಿತಂ ಬೆಸಗೊಂಡೆ ನಿನ್ನ ಬೋಧೆ ಯುಂ ದಿನದಿನಕ್ಕೆ ಮೋಕ್ಷಮಾರ್ಗಾಭಿಮುಖವಾಯ್ತು ಭವ್ಯತ್ವಗುಣ

ವೆಂಬುದು ಬಹಿರ್ನಿಮಿತ್ತಮಿಲ್ಲದಂದು ಪ್ರಕಟಮನೆಯ್ದಿದಾಗಿ ಇಂದೆಮ್ಮ ದೆಸೆಯಿಂ ಕಲ್ಯಾಣ ಪರಂಪರೆಗೆ ಕಾರಣಮಾಯ್ತೆಂದು ಶ್ಲಾಘಿಸಿ ಅರಸ ನೊಡನೆ ತಮ್ಮ ಹಿಂದಣ ಕಥೆಯ ವಿಸ್ತಾರವಾಗಿ ಹಿಟ್ಟಿನ ಕೋಳಿಯಂ ಕೊಂದದು ಮೊದಲಾಗಿ ತಮ್ಮ ಭವಭವದ ಪ್ರಪಂಚಮಂ ನಿರೂಪಿಸೆ ಕೇಳ್ದು ಅರಸಂ ಭಯಚಕಿತಚಿತ್ತನಾಗಿ ಸುರಿವ ಕಣ್ಬನಿಯ ಪ್ರವಾಹ ದಿಂದಾ ಬ್ರಹ್ಮಚಾರಿಗಳ ಪಾದಪ್ರಕ್ಷಾಲನಂಗೆಯ್ದು ಪೂಜಿಸಿ ಪೊಡವಡೆ ಸರ್ವಜನಕೆಲ್ಲಂ ಕೇಳಿ ಚೋದ್ಯಂಬಟ್ಟು ಇವರ್ಗೆ ತಾವೆಲ್ಲರುಂ ಸಾಷ್ಟಾಂಗ ಪ್ರಣತರಾಗಿರ್ದುದಂ ಕಂಡು ಪರಸುತಿರೆ ಆ ಚಂಡಮಾರಿದೇವತೆ ಎಂತಿ ರ್ದುದೆಂದೊಡೆ ಕರದ ಖಡ್ಗ ಕಪಾಲ ಮುರ್ವಸೂ[..]ರಿವ ನಾಲಗೆ ಕರುಳ ಮಾಲೆ ಪೊರಳ್ದ ಗಲ್ಲ ಕೋಟಿದಾಡೆ ಹಱಿದ ತಲೆ ಬಿಡುಗಣ್ಣು ನೀಳ್ದ ನಾಲಗೆ ಇಂತಪ್ಪ ಭಯಂಕರಮೆನಿಸಿ ನೆಗಳ್ದ ಚಂಡಮಾರಿ ದೇವತೆ ಆ ಬ್ರಹ್ಮಚಾರಿಗಳ ಭವಪ್ರಪಂಚಮಂ ತಾ ಕೇಳ್ದು ಹಿಂಸೆಗೆ ಪೇಸಿ ಭಯ ಭ್ರಾಂತಿಯಾಗಿ ಮಱುಗಿ ಹಿಟ್ಟಿನ ಕೋಳಿಯಂ ಕೊಂದು ಯಶೋಧರನುಂ ಚಂದ್ರಮತಿಯುಮಿಂತಪ್ಪ ಭವಭವದಲ್ಲಿ ಅಚಿಂತ್ಯಮಪ್ಪ ದುಃಖದಾವಾಗ್ನಿ ಯಿಂ ಬೆಂದುನೊಂದರಿನ್ನು ಸಚೇತನಂಗಳಪ್ಪ ಜೀವವಧೆಯಂ ಮಾಡಿದ ನಿರ್ಗುಣರಿನ್ನೆಂತಪ್ಪ ಪಾತಕದ ಫಲಮನುಂಬರೆಂದು ಮಱುಗಿ ಪ್ರತ್ಯಕ್ಷ ಮಪ್ಪ ದಿವ್ಯರೂಪಂಧರಿಸಿ ಆ ಬ್ರಹ್ಮಚಾರಿಗಳ ಪಾದೋಪಾಂತಧರೆಯೊಳ್ ಪೊರಳಿ ಎನ್ನಂ ರಕ್ಷಿಪುದೆಂದು ದೈನ್ಯಂಬಡುವ ದೇವತೆಯನರಸಂ ಸರ್ವಜನ ವೆಲ್ಲಂ ಕಂಡಾಶ್ಚರ್ಯಂ ಬಡುತಿರಲಾ ದೇವತೆಯಿಂತೆಂದಳೆಲೆ ಸ್ವಾಮಿ ಎನಗೆ ಅಹಿಂಸಾವ್ರತಮಂ ಪಾಲಿಪುದೆಂದು ಬ್ರಹ್ಮಚಾರಿಗಳ ಪಾದಮಂ ಪೂಜಿಸಿ ಅವರ ಪಕ್ಷದೊಳು ಅಹಿಂಸಾವ್ರತಮಂ ಸ್ವೀಕರಿಸಿ ಪಂಚಾಣು ವ್ರತಂಗಳಂ ಕೈಕೊಂಡು ಅಷ್ಟಮೂಲಗುಣಂಗಳಂ ಧರಿಸಿ ಸಮ್ಯಕ್ತ್ವಮಂ ಸ್ವೀಕರಿಸಿಕೊಂಡು ತಾನುಂ ಪ್ರಜೆಗಳೊಡನೆ ಇಂದು ಮೊದಲೆನ್ನ ಭಕ್ತ ರೆಲ್ಲರುಂ ನಿರವದ್ಯಮಪ್ಪ ಭಕ್ಷ್ಯಪಕ್ವಾನ್ನ ಪಾಯಸ ಸುಗಂಧ ಪುಷ್ಪಂಗಳಿಂ ಪೂಜಿಪುದಲ್ಲದೆ ಹಿಂಸೆಗೆಯಿದರ ವಂಶಮಂ ನಿರವಶೇಷವಾಗಿ ಕೆಡಿಸುವೆ ನೆಂದು ಒದಱಿ ಸಾಱಿ ಪೇಳಿ ಬ್ರಹ್ಮಚಾರಿಗಳಿಗೆ ಪೊಡವಟ್ಟು ಅದೃಶ್ಯವಾಗಿ ದೇವತೆ ಪೋಗೆ ಮತ್ತಂ ಜನಂಗಳೆಲ್ಲಂ ಪೇಸಿ ಜಿನಧರ್ಮರತರಾದರಲ್ಲಿ ಮಾರಿದತ್ತ ಮಹಾರಾಜನಿಂತೆಂದನಾನಿನಿತು ಕಾಲಂ ಗೈದ ಪಾಪಂ ತಪಂ

ಬಟ್ಟಲ್ಲದೆ ಪೋಗದೆಂದು ನಿರ್ವೇಗಮಂ ತಾಳ್ದು ದೀಕ್ಷೆಯಂ ಪ್ರಾರ್ಥಿಸಲವರಿರ್ವರುಂ ತಮ್ಮ ಶ್ರೀಗುರುಗಳಪ್ಪ ಸುದತ್ತಾಚಾರ್ಯರ ಸಮೀಪಕ್ಕೊಯ್ವುದುಮವರೀ ಮಹಾರಾಜಗೆ ಹಿಂಸಾದೋಷಮಂ ಸವಿಸ್ತರಂ ನಿರೂಪಿಸಲಾತಂ ಕುಸುಮದತ್ತನೆಂಬ ಕುಮಾರಂಗೆ ರಾಜ್ಯಾಭಿಷೇಕಪೂರ್ವಕಂ ಪಟ್ಟಂಗಟ್ಟಿ ಸುದತ್ತಾಚಾರ್ಯರಿಂ ಜೀವದಯಾಷ್ಟಮಿಯ ನೋಂಪಿಯಂ ಕೊಡಿಸಿ ಕುಮಾರನಿಗೆ ಸರ್ವಜೀವದಯಾಪರನಾಗಿರೆಂದು ಬುದ್ಧಿವೇಳಿ ತಾನುಂ ಸಂಸಾರಕ್ಕೆ ಪೇಸಿ ಜಿನದೀಕ್ಷೆಯಂ ಸ್ವೀಕರಿಸಿದನಾ ಪುರದೊಳಗಣ ಪುರುಷರುಂ ಸ್ತ್ರೀಯರುಂ ಜೀವದಯಾಷ್ಟಮಿಯ ನೋಂಪಿಯಂ ಕೈಕೊಂಡು ಎಂಟು ವರುಷಂ ನೋಂತು ಉದ್ಯಾಪನೆಯಂ ಮಾಡಿ ದೇವೇಂದ್ರ ಧರಣೇಂದ್ರ ಮುನೀಂದ್ರ ಸಂಪತ್ತುಗಳನನುಭವಿಸಿ ಕ್ರಮದಿಂ ಸ್ವರ್ಗಾದಿ ಸುಖಮಂ ಪಡೆದರು ಮತ್ತಂ ಮಾರಿದತ್ತಮುನಿ ಜೀವದಯಾಷ್ಟಮಿಯ ಉಪವಾಸಪೂರ್ವಕವಾಗಿ ನೋಂಪಿಯಂ ಕೈಕೊಂಡು ಉಗ್ರೋಗ್ರ ತಪಶ್ಚರಣಂ ಗೆಯ್ದು ಸಂನ್ಯಸನವಿಧಿಯಿಂ ಶರೀರ ಭಾರವನಿಳಿಪಿ ೩ನೆಯ ಸ್ವರ್ಗದಲ್ಲಿ ಅಣಿಮಾದಿಗುಣೋಪೇತನುಂ ಸಪ್ತಸಾಗರೋಪಮ ಜೀವಿತನುಂ ಪಂಕಪ್ರಭಾವ್ಯಾಪ್ತಾವಧಿಜ್ಞಾನಸಂಪನ್ನನುಂ ತತ್‌ಕ್ಷೇತ್ರಪೂರಕ ವೈಕ್ರಿಯಕ ದೇಹನುಂ ೭ ಸಾವಿರ ವರ್ಷಕ್ಕೊಮ್ಮೆ ಮನಸಾಹಾರನುಂ ೩ ತಿಂಗಳು ೧೫ ದಿನಕೊಮ್ಮೆ ಉಚ್ಛ್ವಾಸಮನುಳ್ಳನುಂ ೪ ಲಕ್ಷೆಯುಂ ೮೦ ಸಾಸಿರ ಪೆಂಡಿಗೊಡೆಯನುಂ ಮಲಧಾತು ರಹಿತಮಪ್ಪ ದಿವ್ಯದೇಹಧರನಾಗಿ ಪುಟ್ಟಿ ಸುಖಮಿರ್ದಂ ಅಭಯರುಚಿ ಅಭಯಮತಿಯುಂ ಈಶಾನಕಲ್ಪದ ದೇವರಾಗಿ ಸ್ವರ್ಗದ ದಿವ್ಯಸುಖಮನನುಭವಿಸಿ ಕ್ರಮದಿಂದೆ ಮೋಕ್ಷಮಂ ಪಡೆದರೆಂದು ಗೌತಮಗಣಧರರು ನಿರೂಪಿಸೆ ಶ್ರೇಣಿಕ ಮಹಾಮಂಡಲೇಶ್ವರನುಂ ಚೇಳಿನೀ ಮಹಾದೇವಿಯುಂ ಕೇಳಿ ಸಂತುಷ್ಟಚಿತ್ತರಾಗಿ ನೋಂಪಿಯ ಪ್ರಭಾವಕ್ಕೆ ಮೆಚ್ಚಿ ನೋಂಪಿಯಂ ಕೈಕೊಂಡು ಸರ್ವಜ್ಞನಂ ಗಣಧರರುಮಂ ಬೀಳ್ಕೊಂಡು ಸಮವಸರಣಮಂ ಪೊಱಮಟ್ಟು ಅನೇಕ ವಿಭವದಿಂ ಬಂದು ಪುರಮನರಮನೆಯಂ ಪೊಕ್ಕು ಸುಖಮಿರೆ ನೋಂಪಿಯ ದಿನಂ ಬರೆ ಆಶ್ವಯುಜ ಮಾಸದ ಶುಕ್ಲಪಕ್ಷದಷ್ಟಮಿಯ ದಿನದಲ್ಲಿ ನೋಂಪಿಯಂ ತಾವಿರ್ವರುಂ ಯಥಾಕ್ರಮದಿಂ ಭಕ್ತಿಪೂರ್ವಕಂ ಪಲಂಬರ್ ಭವ್ಯರಂ ಕೂಡಿಕೊಂಡು

ಮಹಾ ವಿಭವದಿಂದೆಂಟು ವರ್ಷಂ ನೋಂತು ಕಡೆಯೊಳುಜ್ಜವಣೆಯಂ ಮಾಡಿ ಜೀರ್ಣ ಚೈತ್ಯಾಲಯಂಗಳಂ ಜೀರ್ಣೋದ್ಧಾರಂಗಳಂ ಮಾಡಿಸಿ ಪ್ರತಿಷ್ಠೆಯಂ ಮಾಡಿಸಿ ಕ್ಷೇತ್ರಂಗಳಂ ಬಿಟ್ಟು ಜೈನ ಬ್ರಾಹ್ಮಣರಿಂಗೆ ಅಗ್ರಹಾರಂಗಳಂ ಬಿಟ್ಟು ಕೊಟ್ಟು ತತ್ಫಲದಿಂದೆ ಜಯಂತ ಮನ್ಮಥರ್ಗೆಣೆಯರಪ್ಪ ಪಲಂಬರು ಪುತ್ರರಂ ರತಿಗೆ ಸಮಾನೆಯರಪ್ಪ ಪುತ್ರಿಕೆಯರಂ ಪಡೆದು ಪಿರಿದಪ್ಪೈಶ್ವರ್ಯಕ್ಕೊಡೆಯರಾಗಿ ದಿವ್ಯಸುಖಮನನುಭವಿಸಿದರು

ಆವಾವ ಜೀವವೆಲ್ಲವ
ನೋವದೆ ವಧೆಗೆಯ್ದ ಮಾರಿದತ್ತ ನರೇಂದ್ರಂ
ದೇವೇಂದ್ರನಾದನೆಂದೊಡೆ
ಜೀವದಯಾಷ್ಟಮಿಯ ನೋಂಪಿ ಸಾಧಾರಣಮೇ

---

# ಅನುಬಂಧ ೩

## ಚಂಡಶಾಸನ ಕಥೆಯ ಸಂಗ್ರಹ

(ಅನಂತನಾಥ ಪುರಾಣದಿಂದ)

ಮೇರುವಿನರ್ಧಮಂ ಜನನಿಧಾನಮನಗ್ಗದ ಜಂಬುದೀವಮಂ
ವಾರಿಧಿಸರ್ಪನಪ್ಪಿದುದು ವಾರಿಧಿವೇಷ್ಟಿತ ಭೂಮಿಭಾಗದೊಳ್
ಭಾರತವರ್ಷವೊಪ್ಪಿದುದು ಭಾರತವರ್ಷದ ತೆಂಕವಕ್ಕದೊಳ್
ಧಾರಿಣಿಗುಜ್ಜ್ವಲಶ್ರವಣಮಂಡನಮಾಯ್ತು ಸುರಮ್ಯಮಂಡಳಂ ೧

ಪರಮಬ್ರಹ್ಮನ ನಂದನಂ ಭರತಚಕ್ರಾಧೀಶ ದರ್ಪಾಪಹಂ
ಚರಮಾಂಗಂ ಕುಸುಮೇಷು ಬಾಹುಬಲಿದೇವಂ ಶ್ರೀ ಮಹಾಮಂಡಳೇ
ಶ್ವರನಾಳ್ದಿರ್ದುದುದಾರ ವೀರ ವಿಭವ ಶ್ರೀಪಾದನಂ ಪೌದನಂ
ಪುರಮುಂಟಾ ಪುರಮಾ ಸುರಮ್ಯವಿಷಯಶ್ರೀ ವಕ್ತ್ರಬಿಂಬೋಪಮಂ ೨

ಅನಿತೊಳ್ಪಸೆವ ಸುರಮ್ಯಾ
ವನಿಗಂ ಪೌದನಪುರಕ್ಕಮಧಿಪತಿ ವೀರಾ
ರಿನೃಪಾಲ ಶಿರಃಖರಶಾ
ಣ ನಿಘೃಷ್ಟಭುಜ ಕೃಪಾಣಕಂ ವಸುಷೇಣಂ ೩

ಊರ್ವಶಿ ರಂಭೆ ಮೇನಕೆ ತಿಲೋತ್ತಮೆಯೆಂಬರ ಹಾವಭಾವಮುಂ
ಪುರ್ವಿನ ಕೊಂಕು ಕಣ್ಮಲರ ಕಾಂತಿ ಕದಂಪಿನ ತೆಳ್ಪು ಸಾಲ್ವುದಾ
ರೂರ್ವರೆ ಗೆಲ್ವುದಕ್ಕೆನಿಪ ರಾಣಿಯ ವಾಸದ ದೇಸೆಯಾಸೆಯ
ಯ್ನೂರ್ವರೊಳಂ ಸುನಂದೆ ಪಿರಿಯಳ್ ವಸುಷೇಣನ ಚಿತ್ತವೃತ್ತಿಯಿಂ ೪

ಜಯವಧು ಬಾಹುಪೂರಕದ ಮೇಲೆ ಮಲಂಗಿದ ತೋಳ್ಗಳಂ ಮನಃ
ಪ್ರಿಯ ದರಹಾಸದೊಳ್ ನಲಿವ ವಕ್ತ್ರಮನೂರ್ಜಿತಲಕ್ಷ್ಮಿ ಹಾರಯ
ಷ್ಟಿಯೊಳೊಲೆದುಯ್ಯಲಾಡೆ ಪಿರಿದಾದುರಮಂ ನಡೆ ನೋಡುವಂ ಸುನಂ
ದೆಯ ಮುಖಬಿಂಬಮೆಂಬ ಮಣಿದರ್ಪಣದೊಳ್ ವಸುಷೇಣಭೂಭುಜಂ ೫

ಅಂತು ಸಕಲರಾಜ್ಯಾಂಗ ಲಕ್ಷ್ಮಿಯೊಳಂ ವಿನೋದವಿಳಾಸಂ ದೇಸೆವಡೆವಿನಮಿಷ್ಟ ಸುಖಾನುಭವ ವಿಭೂತಿಯಿಂದಮಿರ್ದೊಂದು ದಿವಸಂ ವಾಹಳೀ ವಿನೋದಾವಸರದೊಳೊರ್ವಂ ಪೂರ್ವ ಪರಿಚಿತ ಪ್ರಸನ್ನಾಕಾರಂ ಸುದರ್ಶನನೆಂಬೊಂ ಬಂದು ಮಹಾರಾಜಂಗೆ ದರ್ಶನೋಪಾಯನಮನಿತ್ತು ಪೊಡವಟ್ಟುನಿಂದು ದೇವರದೇವನ ಸಹೋದರಂ ಸಹಪಾಂಸುಕ್ರೀಡಾನುಬಂಧಸಂಗತಬಂಧು ಮಕರಗ್ರಾಹಪುರವರಾಧೀಶ್ವರಂ ಚಂಡಶಾಸನದೇವಂ ದೇವರಂ ಪಲದೆವಸಮಗಲ್ದಿರ್ದು ನೆನೆದು ನೋಡಲ್‌ಬರುತ್ತುಮವಸರಮನಱಿಯಲೆನ್ನನಟ್ಟಿದನೆಂಬುದುಮತಿಪ್ರೀತಿಯಿಂ ವಿಸ್ತಾರಿತವಿಲೋಚನನಾಗಿ ಬೇಗಮೀಗಳೆ ಬರವೇಳೆಂದಾತ್ಮನರ್ಮಸಚಿವಂಬೆರಸಾತನಂ ಕಟಿಪಿ ಬಳಸಿ ನಿಂದ ಗಂಧಸಿಂಧೂರ ಘಟಾ ಪಟಲಮುನಿಕ್ಕೆಲಕ್ಕೆದೆಗೆದ ಪಸಾಯತರತುಳುಂಗಬಳನುಮಾಸ್ಥಾನೀಕೃತರಾಜಸುತಸಮಾಜನುಮಾಗಿ ನಿಂದಾಗಳ್

ಕ್ಷಿತಿರಂಗಂ ಭಟಕೋಟಿಪಾದ ತುರಗಶ್ರೇಣೀಖುರವ್ರಾತ ಸಾ
ತ್ಕೃತಮಾಶಾವಳಿ ಭೂಷಣಾಂಶು ಮೃಗನಾಭೀಸಾರ ಸೌರಭ್ಯ ಸಾ
ತ್ಕೃತಮಭ್ರಂ ಚಮರೀಜ ಕೇತುಪಟಲ ಶ್ವೇತಾತಪತ್ರೌಘ ಸಾ
ತ್ಕೃತಮೆಂಬಂತಿರೆ ಚಂಡಶಾಸನನೃಪಂ ಬಂದಂ ಮಹೋತ್ಸಾಹದಿಂ ೬

ಅಂತು ಬರಲೊಡಮಿರ್ವರುಂ ವಾಹನಂಗಳನಿೞಿದು ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚೆ ಪೆರ್ಚಿದ ಮುಯ್ಯಿನೆಡೆವೊಕ್ಕೆನೊಡೆಯೆ ಪರಸ್ಪರಾಲಿಂಗನಂಗೆಯ್ದು ತತ್ಸಮಯ ಸಮುಚಿತ ಭಾಷಣಸಂಭಾವನಾನಂತರಂ ವಸುಷೇಣ ಮಹಾರಾಜಂ ತನ್ನ ಪಟ್ಟದ ಮದವೇದಂಡಮಂ ಚಂಡಶಾಸನನೇಱಿಸಿ ಬೇಱೊಂದು ಭದ್ರಗಜಮಂ ತಾನೇರಿ ಮಹಾವಿಭೂತಿವೆರಸೊಡಗೊಂಡು ಬಂದು

ಪುರಲಕ್ಷ್ಮೀ ಲಲನಾಪ್ತಶೋಭೆ ವರನಾರೀ ಮಂಗಳಾಚಾರ ಚಾ
ರುರವಂ ಪೌರಜನಾವಲೋಕನ ವಚಃ ಕೌತೂಹಲಂ ಪೆರ್ಚೆ ಮಂ
ದಿರಮಂ ಪೊಕ್ಕು ಸಮಸ್ತ ವಸ್ತು ಸುಖ ಸನ್ಮಾನಂಗಳಿಂದಂ ಮನಂ
ಬೊರೆದಂ ಭೂಪತಿ ಬಿದ್ದು ಪಲ್ಲಟಿಸಿತೆಂಬಂತಾ ಮನೋಮಿತ್ರನಂ ೭

ಸರಸ ಕಾವ್ಯ ವಿನೋದ ಗೋಷ್ಠಿಯಿನೊರ್ಮೆ ನಾಟಕ ನಾಟಿಕಾ
ಪರಿನಟದ'ರಸ ಭಾವ ಭಂಗಿಯಿನೊರ್ಮೆ ಗೀತದ ವಾದ್ಯದ
ಚ್ಚರಿಯ ನೃತ್ಯದ ಕೇಳ್ವಿಯಿಂ ಮುದದೊರ್ಮೆ ಜಟ್ಟಿಗರಪ್ಪ ಮ
ಲ್ಲರ ಪೊಣರ್ಕೆಯಿನೊರ್ಮೆ ಪ್ರೇತ್ತುಮನೊರ್ಮೆ ಮೇಷವಿಶೇಷದಿಂ ೮

ಒರ್ಮೆ ವಾಹ ವಿಳಾಸ ಕಂದುಕ ಕೇಳಿಯಿಂ ಗಜಯುದ್ಧದಿಂ
ದೊರ್ಮೆ ವಾರುವದಂಕದಗ್ಗದ ಕಾಳೆಗಂಗಳಿನೊರ್ಮೆ ಮ
ತ್ತೊರ್ಮೆ ಚಿತ್ರವಿಚಿತ್ರ ಕೌತುಕದಿಂದಮಿಂತು ನೆಗಟ್ಟಿದಂ
ಕೂರ್ಮೆಯಿಂ ವಸುಷೇಣಭೂಪತಿ ಚಂಡಶಾಸನಭೂಪನೊಳ್ ೯

ಅಂತು ನಿರ್ವಿಕಲ್ಪಮುಂ ನಿರಂತರಿತಮುಮಾದ ಸೌಹಾರ್ದದೊಳಪ್ಪೈಕಸದನದ ಸಹಪಂಕ್ತಿಭೋಜನದ ಸಹವಿಳಾಸಕ್ರೀಡಿತದ ಸಮಯಂಗಳೊಳಗೆ ವಸುಷೇಣನಂಗನೆ ಸುನಂದಾದೇವಿಯ ಏಱುಂಜವ್ವನಕ್ಕಳಂಕಾರಮಾಗಿ ಕೈಮಾಡಿ ಮೆಱೆವ ಕಾಮದೇವನ ಕರವಾಳಂತೆ ಕಣ್ಣೊಳ್ ಪೊಳೆದೆರ್ದೆಯೊಳುಳ್ಕಿ ಕೊಳ್ಕುಬೆಳ್ಕುಗೊಳಿಸುವ ವಿಳಾಸದೊಳಂ ಸಮ್ಮೋಹನಶಕ್ತಿಯಂತೆ ಘಾವಕರ ಬಗೆಯ ಬಯ್ಕೆಯನಗೆಯೆತ್ತಿ ಸೂಱೆಗೊಳ್ವ ಕಳಕಳಾಪ್ರೌಢಿಯೊಳಂ ದುರಾತ್ಮಕನಪ್ಪ ಚಂಡಶಾಸನನ ಕಣ್ಮಲರ್ ಕವಿದು ಕವ್ವರೆಗೊಂಡು ಮಂಡಳಿಸಿ ಬಳಸಿ ಸೋಲಕ್ಕಾಲಂಬವಂ ಪಡೆವೆರ್ದೆಗಾದಮದವಟಲುಂ ತನುವಿಂಗೆ ತಾಪಮುಮೊಡನೆ ಬಳೆಯೆವಳೆಯೆ

ಕೆಳೆಯನ ಪಂಕ್ತಿಭೋಜನದೊಳೊರ್ಮೆ ವಿಳಾಸದೆ ಬಡ್ಡಿಸುತ್ತುಮಿ
ರ್ಪೆಳೆಯಳ ತೋಳ ಮೂಲದ ಪೊಗರ್ ಮಣಿಬಂಧದ ಚೆಲ್ವು ಕೋಮಲಾಂ
ಗುಳಿಗಳ ಕೊಂಕು ಕಣ್ಗೆ ಕುಡೆ ಕೌತುಕಮಂ ಭ್ರಮೆಗೊಂಡು ಕಾಮುಕಂ
ವಳಿಗೆಯನೆತ್ತಿ ಬೊಟ್ಟಿಡಲೊಡರ್ಚಿ ಬಟಿಕ್ಕೆ ಪೊಗಪ್ತೆಗಿಕ್ಕಿದಂ ೧೦

ನಗೆಗಣ್ ನಲ್ಲಳ ಕೂಟಮಂ ಪಡೆದುವಿಂಪಂ ಶ್ರೋತ್ರಮೀಂಟಿತ್ತು ಮಾ
ತುಗಳಂ ನಾಸಿಕೆಗಾಯ್ತು ವಳ್ ಸುಟಿದ ಸೂಡೊಳ್ ಸೌರಭಂ ಸ್ವಾದು ನಾ
ಲಗೆಗಾಯ್ತಾಕೆಯ ಹಸ್ತಪಲ್ಲವ ರಸಾಸ್ವಾದ್ಯಂಗಳಿಂ ಸೋಂಕುವಾ
ಸೆಗೆ ಪಕ್ಕಾಗದೆ ನಿಂದ ಪಲ್ಲವಕನಂಗಕ್ಕಾಯ್ತನಂಗಜ್ವರಂ ೧೧

ಅಂತು ಕಂತುಸಂತಾಪಕ್ಕೆ ಪಕ್ಕಾಗಿ ಕುಕ್ಕುಟಗುದಿದುರ್ಕ ದೊಳಗೊಳಗೆ ಬೇವ ಹೃದಯಮಂ ಪದವಡಿಸಲಾಱವೆ ತನಗೆ ಬೀಡುಂ ದಾಣವಾದ ಮಾಡದ ಪೆಱಗಣ ನಂದನವನದ ಮಾಕಂದ ಭೂರುಹದ ಮಂದಚ್ಛಾಯೆಯೊಳ್ ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳಪ್ರವಾಳತಳ್ಪತಳದೊಳಂ ಸೂಸುವಾಲಿನೀರ್ತುಂತುಱೊಳಂ ಪೂಸುವ ಚಂದನಸ್ಥಾಸಕದೊಳಂ ವಸಂತ ಸಮಯಾನುರೂಪ ಧಮ್ಮಿಶಿಶಿರೋಪಚಾರಚಾರುಚಾತುರತ್ವಂ ಮೆಱೆಯೆ ಮಮ್ಮಲಮಱುಗುತ್ತಮಿರ್ದ ತನ್ನವಸ್ಥಾಂತರಮನಱಿದುಮಱಿಯದಂತೆ ಬೆಸಗೊಂಡ ಸುದರ್ಶನನೆಂಬ ಕೆಳೆಯಂಗಿಂತೆಂದಂ

ನುಡಿಯಲ್ ಬಾರದು ತೀರದು
ನುಡಿಯದೊಡೆಲೆ ಕೆಳೆಯ ನಿನಗೆ ಬೆಂದ ಮನಂ ಸಂ
ದೆಡೆಯೆನ್ನದೆ ಪೇಳ್ದಪೆನೀ
ಕಡುನಂಟನ ಸತಿಯ ರೂಪು ಸೋಲಿಸಿತೆನ್ನಂ ೧೨

ಭ್ರಮೆ ಪತ್ತಿತ್ತು ಮನಕ್ಕೆ ಕಣ್ತಿರಿಪಿ ಬಿಟ್ಟಂತೇನುಮಂ ಕಾಣವಂ
ಗಮನಂಗೋದ್ಭವ ವಹ್ನಿ ಸುಟ್ಟಪುದು ಕಾಣ್ ಪ್ರಾಣಸಂಧಾರಣೋ
ದ್ಯಮಮಂ ಪೇಳ್ ಸಖ ಬಾಳ್ವುಪಾಯಮೆನಗಿನ್ನೆಂತೊರ್ಮೆ ಕಾರುಣ್ಯದಿಂ
ರಮಣೀ ಲೋಚನ ಚುಂಬನಂ ಕಳೆಗುಮೇ ನಟ್ಟಿರ್ದ ಹೃತ್ಶಲ್ಯಮಂ ೧೩

ಆ ತಳೋದರಿಯನ್ ಸಂಭೋಗಿಪ ಪುಣ್ಯಮೆನಗಮಾದೊಡೆ ಸಲ್ಲದೆ ಗಂಡನಿರ್ದೊಡೇನೆಂದು ತನ್ನ ಹೃದಯಕವಾಟಮಂ ತೆಟ್ಟಂ ದೆಱೆದತ್ತಳಗಮಾದುತ್ತಂಡವೇಟಮಂ ಬಯಲೊಳಿಕ್ಕಿ ಬಾಯಟಿದ ನಿಜ ಪತಿಯ ನುಡಿಗೆ ಸುದರ್ಶನನೆಂದಂ ಮೇರೆಗಟಿದ ಬಟಿಕಾರ ಸ್ವೈರಣಿಯು ಮೋರೆವೋಗದಿರವು ಪರಿವ ಮನಕ್ಕೆ ಪಗ್ಗಮಿಲ್ಲಂ ನೋಡುವ ಕಣ್ಗಳ್ಗೆಡೆ ಗಟ್ಟಿಲ್ಲಮದಲ್ಲದೆಯುಂ

ಒಡೆಯನ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗ[ದ]ಂ
ದೊಡೆ ಮನಮಿತ್ತುಮೀಯ[ಳವಳೆಂ][1]ದೊಡಸಾಧ್ಯಮಿದೆಂದೊಡೊಲ್ಲಳೆಂ
ದೊಡೆ ಮೊಱೆಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯಮಲ್ಲಮೆಂ
ದೊಡೆ ತಲೆಹೋಗಿಯುಂ ಬಸಿದು ಬೀಟದೆ ಸ್ವೈರಿಸರಲ್ತೆ ಕಾಮುಕರ್ ೧೪

1 ೮ಳವೆಂ (ಗ್ರಂಥಪಾಠ)

ಆದೊಡೇನಾದುದಾ ನಿತಂಬಿನಿಯೊಳ್ ನಮ್ಮ ಮನೋರಥಸಿದ್ಧಿ ಗವಕಾಶಮುಂಟಪದೆಂತಪ್ಪೊಡೆ

ನಯದಿಂ ಕೋಕಿಳನಾದೆ ನಿಮ್ಮರಸರಿಂತೇಕಾರಣಂ ಬಂದರಿ
ಲ್ಲಿಯ ಕಾರ್ಯಾಂತರಮೇಂ ಪ್ರಯಾಣದಿನಮಿನ್ನೆಂದೆಂದು ತಾಂ ಪೆತ್ತ ತಂ
ದೆಯ ಮಿತ್ರಂಗೊಡವುಟ್ಟಿದಣ್ಣನ ಸಹಾಯಂಗಾಡುವಂತೀಗಳೆ
ನ್ನಯ ಕೂಡಾಡಿದಳಿಂತಿದೇನಳಿಪೊ ಮೇಣ್ ನಿರ್ವ್ಯಾಹವೋ ಭಾವಿಸಾ ೧೫

ಎಂಬುದುಮರಸನಾ ಕೃತ್ಯೋಪಚಾರಮನೊಲವೆಂದೆಂತು ಕೈಕೊಳಲ್ ಬಂದಪುದು

ಆ ಮದಿರಾಕ್ಷಿ ತನ್ನಿನಿಯನಿರ್ದಪ್ಪೊಲೆನ್ನೊಡನಾಸೆಗೆಯ್ಯಲಾ
ಕೋಮಳಗಾತ್ರಮಂ ಸವಿದ ಕಣ್ಮಲರ್ಗೆನ್ನಯ ಗಂಡಗಾಡಿ ಶೋ
ಭಾವಹಮಾಗದೆಂದೊಡೆ ಸಖಂ ನೃಪ ನೀಂ ಬರೆ ಮಾಣ್ಬ ಜೋಡೆಯರ್
ಕಾಮನ ತೋಳೊಳಿರ್ದ ರತಿ ಶಂಭುಕುಮಾರನುಮಂ ಬರುಂಟಳೇ ೧೬

ಅದಲ್ಲದೆಯುಮಿಂದು ದೇವ ನೀನುಮಾತನುಮಾರೋಗಿಸಿ ಕೈಘಟ್ಟಿಗೊಳುತುಮೇಕ ಮರಾಳತೂಳ ತಳ್ಪಾಸನದೊಳ್ ಪರಸ್ಪರಂ ಸುಖಸಂಭಾಷಣಾ ವಿಶೇಷದಿನಿರ್ದಲ್ಲಿ ನಿನ್ನ ಪೆಱಗ ಕುಳ್ಳಿರ್ದೆನ್ನ ಕಣ್ಗೆ ತೆಱಪಾದುದಾ ಸರೋಜನಯನೆ ವಿನೋದವಿಳಾಸಾಭಿನಯದೊಳಿರ್ದು

ಮನಮಂ ಮುಂದಿಟ್ಟು ಮಾತಂ ಮನದೆಕೊಳಿಸಿ ಕಂಡೂತಿಯಾದಂತಿರಾಲಿಂ
ಗನದಿಂಪಂ ಚುಂಬನಾಸ್ವಾದನ ಸುಖಮುಮನಂತಃಪ್ರವಿಷ್ಟಾಂಗಸಂಪಾ
ದನಮಂ ಮೇಲ್ವಾಯ್ದು ಮಾಡಲ್ ತವಕಿಪ ನವಭಾವಾತಿರೇಕಂಗಳಂ ಕಾ
ಮಿನಿ ನಿನ್ನಂ ನೋಡಿದಳ್ ಗಂಡನ ನೆವದಿನದಂ ಕಂಡರಿಲ್ಲಕ್ಕುಮಾಗಳ್ ೧೭

ಎಂದಾಕೆ ತನ್ನ ವಲ್ಲಭಂಗಭಿನವ ಪುರುಷ ಸಂಗೋಷ್ಠಿ ಸಮನಿಸಿ ನಿಜಾತ್ಮವಲ್ಲಭನ ಸುಖಾನುಭವಕ್ರೀಡೆಗೆಡೆವಡೆಯದೆ ಸಿಡಿಮಿಡಿಗೊಳು

ತ್ತಿರ್ದ ಭಾವಮನಾ ವಿಷಯದಾಳಿಯಂ ಮತಿಗೆ ಪತ್ತಿಸುವಂತೆ ನುಡಿದು ಮನದ ಪಿಶಾಚಕ್ಕೆ ವಚನರಚನಾಧೂಪವಮಂ ತೋಱಿ ವಿರಹವಿಕಾರವಮಂ ಕೆಳರ್ಚಿ ನಿನ್ನೊಳಾಕೆಯಂ ಕೂಡುವುಪಾಯಮನೀಗಳೆ ಮಾಡಿದಪೆ ನೆಂದು ಪೋಗಿ ಬಟಿಕಮಾ ಧೂರ್ತನಾಡುತ್ತುಮಿರ್ದನಿತ್ತ ವಿರಹಾರ್ಥಂ ಬಾಡುತ್ತುಮಿರ್ದಂ [ಒರ್ಮೆ ದೀವರ ಬೇಂಟೆಯಂ ನೋಡಲ್ ಬಯಸಿ ಪೊಱವಟ್ಟು ವಸುಷೇಣಂ]

ಪರಿಮಿತ ವಾಜಿ ವಾರಣ ಪದಾತಿ ವರೂಥ ಕದಂಬ ಕಾಮಿನೀ
ಪರಿಚಿತ ರಾಜಪುತ್ರ ನಿಚಯಂ ಧರಣೀಪತಿ ಚಂಡಶಾಸನಂ
ಬೆರಸು ವನಾಂತದೊಳ್ ತೆರೆಯ ತೋಪಿನ ಸೋಹಿನ ನೀರ ಬೇಂಟೆಯು
ರ್ವರೆಗಳನೀಕ್ಷಿಸುತ್ತೆ ಬರೆ ಮುಂತಣ ಚೂತವನಾಂತರಾಳದೊಳ್ ೧೮

ಬಿರಿದೆರ್ದೆ ಬಿಟ್ಟ ಬಾಯ್ ಅಲರ್ವ ನಾಸಿಕೆ ಪತ್ತಿದ ಗೋಣು ಸುತ್ತಿ ಕ
ವ್ವರಿಸುವ ದಿಟ್ಟಿ ಕೆತ್ತುವೊಡಲೆತ್ತಿದ ಕಂಠಮೆಟಲ್ವ ಕರ್ಣಮು
ಬ್ಬರಿಸುವ ಮೆಯ್ನವಿರ್ ಪನಿವ ಮುಂಬದನೊಪ್ಪಿರೆ ದೀವದೊಳ್ ಮರ
ಲ್ದೆರಲೆಯ ಭಾವಮಚ್ಚರಿಯನಚ್ಚಿಗೊಡರ್ಚಿದುದಾ ನೃಪೇಂದ್ರನಾ ೧೯

ಅದಂ ಕಂಡು ಚಂಡಶಾಸನನಂತರ್ಗತದೊಳಿಂತೆಂದಂ

ಹರಿಣೀಲೋಚನೆ ದೀವಮಾಂ ಹರಿಣನೆಂ ಪೆರ್ಗಾಡಿದೀ ಬೀಡು ಬಿ
ಣ್ಬರಿಗಳ್ ನೇಣ್ಬರಿ ಶಂಬರಾರಿ ಶಬರಂ ಪುಲ್ಲಂಬು ಕೆಲ್ಲಂಬು ಮದ್
ವಿರಹಾವಸ್ಥಿತಿ ಗೋರಿಗೋರಗೆಯೆನಿಪ್ಪಂತಾದುದೆಂತಾಗಿಯುಂ
ನೆರೆಯಲ್ ತೀರದು ಗೋರಿ ಸಾಯಿದೆನವೇಡೀ ನೋವೆ ಸಾವಲ್ಲವೇ ೨೦

ಆ ವಿನೋದಮಂ ನೀಡುಂ ನೋಡಿ ಪೊಗಟ್ದು ಪೋಪುದು ಮರಸನರಸಿವೆರಸು ಬೋನಮನೀ ನಂದನವನಕ್ಕೆ ಬರವೇಡೆಂದು ಸೂಟಾಯ್ತುರನರಮನೆಗೆ ಕಟಿಪಿ ಕಾಪುಗಾಡಿನೊಳ್ ಸೋಹಿನ ಬೇಂಟೆಯ ಬಿನದದಿನಿರ್ವರ ರಥಮುಂ ಬೇಱವೇರಾದಲ್ಲಿ ಚಂಡಶಾಸನಂ ವಸುಷೇಣನರಸಿ ಬರ್ಪ ಬಟ್ಟೆಯತ್ತಲೆ ಸಾರ್ದುಕೊಂಡಿರ್ಪಿನಂ ಪರಿಮಿತಾಂಗ

ರಕ್ಷಕಪರೀತೆಯುಂ ಪರಿಧಾವತ್ಕತಿಪಯಚೇಟಿಕಾಪುರೋಭಾಗೆಯುಂ ದೋಲಾದಂಡಿಕೋಭಯಭಾಗಸಂಭಾಷಿತಸಹಚರೀ ಯುಗಳೆಯುಮಾಗಿ ನಿಜವಲ್ಲಭನಟ್ಟಿದ ಬಟಿಗೆ ಬರುತ್ತುಮಿರ್ದ ಸುನಂದಾದೇವಿಯಂ ಕಂಡು

ಕಡೆಗಣ್ಗಳ್ ಪರಿದೆಯ್ದೆ ಮತ್ತೆ ಮನಮಂಗೋಪಾಂಗಸಂಗಕ್ಕೆ ದಾ
ಟಿಡೆ ಕಾಯ್ದುಳ್ಳಿರ್ದ ಗೂಡುವಾಯೆ ಪಿರಿದೊಂದೌತ್ಕಂಠ್ಯದಿಂ ಕಂಠದೊಳ್
ಮಿಡುಕಣ್ಮುತ್ತಿರೆ ಮೇಲೆವಾಯ್ದು ಭರದಿಂದಂ ನಲ್ಲಳಾಂದೋಳದಿಂ
ಕಡುಕಯ್ಯಂ ತೆಗೆದಿಟ್ಟುಕೊಂಡು ರಥದೊಳ್ ಬಂದಂ ಮನೋವೇಗದಿಂ ೨೧

ಕರುಳ ಕತ್ತರಿ ನಂಟರ ಮಾರಿ ತುತ್ತು ಮಿಂಚಿದೊಡೊಡನುಂಡು ಮತ್ತೆ ತೊಡೆ ಮಿಂಚಿಮೊಡಾ ಖಳನಂತು ಪಿಡಿದೊಯ್ವಾಗಳುರಗಂ ಪಿಡಿದಂತೆ ಬೆದಱಿ ಪಾವು ಪಿಡಿದಂತಿರೊದಱಿ ಕಡುಜರಪತ್ತಿದಂತು ಕಳವಳಿಸಿ ರಕ್ಕುಪತ್ತಿದಂತೆ ಮತಿಗೆಟ್ಟು ಸಿಡಿಲ್ ಪೊಡೆದಂತೆ ಹಮ್ಮದಂಬೋಗಿ ಸುನಂದೆಯಾಗಿಯುಮಸು ನಂದೆ ಕಿಱಿದಾನುಂ ಬೇಗದಿಂ ಬಟಿಕ್ಕೆ ಕಾಮಕಾಂಡಖಂಡಿತಹೃದಯಂ ಚಂಡಶಾಸನಂ ವಿಶ್ವಾಸ ಘಾತಕಂ ಕಾತರತೆಯಿಂ ತನ್ನಂ ಪಿಡಿದುದನಱಿದು

ಇನನಂ ವಂಚಿಸಿ ಚಂಡಶಾಸನನವಂ ಕಳ್ದೊಯ್ದಪಂ ನಾಥನಂ
ಗನೆಯಿಂದೆನ್ನ ಸುನಂದೆಯಂ ಸುಭಟರಣ್ಮಿಂ ವೀರರಡ್ಡೈಸಿಮೆ
ನ್ನಿನಿಯಂಗೆಯ್ದಿಸಿಮೂರ ನಾಡ ಜನಮೀ ಪೆಣ್ಬುಯ್ಯಲಂ ಹಾ ಸುಷೇ
ಣನೃಪಾ ಹಾ ನೃಪನೀಱಿ ಎಂದಬಲೆ ಬಾಯ್ವಿಟ್ಟಟ್ಟು ಹುಯ್ಯಲ್ಚಿದಳ್ ೨೨

ಪರವೆಣ್ಗಾಟಿಸಿ ಕಳ್ದ ಕಾತರನನಾರುಂ ಕಾಣರಾರುಂ ಕನ
ಲ್ದರಿದಿಕ್ಕರ್ ಧರೆ ನುಂಗದೇಂ ನೊಣೆಯರೇ ದಿಗ್ದೇವಿಯರ್ ತಿನ್ನವೇ
ಗಿರಿಗಳ್ ಬೆಂದೆನನಾಥೆಯಾದೆನೆನಗಿನ್ನಾರಾಸೆಯಾರ್ ಕಾವರಾರ್
ಶರಣೆಂದಾ ಕಳಕಂಠನಾದೆ ಬಸಿಱಿಂ ಬಾರೇಟ್ವಿನಂ ಮೋದಿದಳ್ ೨೩

ಮುನಿಸುಂಟಾದೊಡೆ ಮುಟ್ಟಿ ಮೂದಲಿಸಿ ಬಲ್ಪಿಂ ನಿನ್ನ ಬಾಳ್ ಆತನಾ
ತನ ಬಾಳ್ ನಿನ್ನ ಕಪಾಲದೊಳ್ ಮುಱಿದು ಮುಂತೆಟ್ಟುರ್ದಿನ್ನೊಪ್ಪುವಾ
ಳ್ತನಮುಂ ಗಂಡರ ಪಿಂದೆ ಕಳ್ವುದರಿದೇ ಸ್ತ್ರೀಬಾಲೆಯಂ ಬೂತೆ ಪಾಪ್
ಮನೆಯೊಳ್ ನಾಯ್ ಘೃತಭಾಂಡಮಂ ತೆಗೆವವೊಲ್ ಕಳ್ದೊಯ್ವುದಾಳ್
ಪಾಟಿಯೇ ೨೪

ಮನಮಿತ್ತು ಮಾತನಾಡಿದ
ಳನುವಿಸಿದಪಳೊಲ್ದಳೆಂದೊಡಂ ಕೇಳ ಪರಾಂ
ಗನೆಗೆ .......ವಯರ್ ಗಂಡರ್
ಮನವಱಿಯದೆ ಎಳೆಯ ಮನಕೆ ಸವಱುವೆ ಪೋಲೆಯಾ ೨೫

ಎಂದನೇಕಪ್ರಕಾರ ಪ್ರಳಾಪಾಕ್ರಂದನಂ ಸ್ಯಂದನ[ಂ] ವೇಗದಿಂ ದೂರಂ ಸಾರಪ್ಪ ಸಾರಂ ದೂರವಾಗಿ ಪೋತಪ್ಪಾಗಳವಂ ಸುರಮ್ಯ ವಿಷಯದ ಕಡೆಯ ಕಾಪಿಂಗೆ ವಸುಷೇಣನಿರಿಸಿದ ಪೆಸರ ಸಾಮಂತಂ ಸಿಂಹಚೂಡಂ ತನ್ನ ಪೋಟಲ ಪೊಱವೋಟಲ ನಂದನೋಪಾಂತದ ಗರುಡಿಯೊಳಗೆ ಪಲ ಕೆಲಂಬರ್ ಪಲಗೆವಿನ್ನಣಂಗಳೊಡನೆ ಕಾಮನ ಪರ್ವತದಂತೆ ಮಾರಚಿತ್ರ ಭಿತ್ತಿಯೊಳ್ ಪಿಡಿಯುತ್ತುಮಿರ್ದ ಕಡುಗಲಿ ಕೇಳ್ದು ನರತುರಗಬಳದ ನೆರಮನೊಲ್ಲದೆ ಸೆರಗಿನೊಳಲ್ಲದೆ ಬೆರಗಿನೊಳ್ ಸಲ್ಲದೆ ಕಯ್ಯ ಪಲಗೆಯೊಳಂ ಕಟ್ಟಿದ ಕಠಾರದೊಳಂ ಪಿಡಿದ ಕೂರಸಿಯೊಳಮೆಯ್ದಿಸಿ ಪರಿದು ಹರಿಣಿಯಂ ಪಿಡಿದುಯ್ವ ತರಕ್ಷುವಿನಂತೆ ತರುಣಿಯಂ ಪಿಡಿದುಯ್ವ ಚಂಡಶಾಸನನಂ ದೂರದೊಳ್ ಕಂಡು ಗಜಱಿ ಗರ್ಜಿಸಿ

ಇದಿರಾಗಿತ್ತಿತ್ತಲಣ್ಮಣ್ಮೆಱಿಯಿಱಿ ರಥಮಂ ಕೈದುಗೊಳ್ ಕೈದುಗೊಳ್ ಪೋ
ಗದಿರೆನ್ನಂ ಕಂಡು ಬೆನ್ನಂ ಕುಡುವರೆ ಸುಭಟರ್ ಸಿಂಹಚೂಡಂಗೆ ಮಾಱೊ
ಡ್ಡಿದ ವೀರರ್ ಮತ್ತೆ ಜೀವಂಬೆರಸುಟಿದವರಿಲ್ಲೆಂದು ಮುಟ್ಟಿರ್ದ ಲೇಸ
ಕ್ಕಿದೆ ಮೇಲ್ಬಿರ್ದೆನ್ನ ಬಾಹಾಪರಿಘದ ಬಲೆಯೊಳ್ ಸತ್ತೆಯಿನ್ನೆತ್ತವೋಪೈ ೨೬

ಎಂದು ಮುಟ್ಟಿ ಮೂದಲಿಸಿ ಕಟ್ಟಿದಿರ್ಗೆವಂದು ಮುಟ್ಟಿ ತಱುಂಬಿದ ಸಿಂಹಚೂಡನಂ ಸೂತದ್ವಿತಯನಾಗಿ ಪೋಗುತ್ತುಂ ಕಂಡು ತೇರಂ ನಿಲಿಸಿ ಸಾರಥಿಯಂ ವಾರಿಜವದನೆಗೆ ಕಾಪುವೇೞ್ದು ಕಿಱ್ತ ಬಾಳೊಳಂ ಅತ್ತಪರ ದೊಳಂ ಅವನೀತಳಕ್ಕೆ ಲಂಘಿಸಿ ಚಂಡಶಾಸನನಿಂತೆಂದಂ

ವಾನರನೇಂ ಸೆಳೆವುದೆ ಪೇ
ರಾನೆಯು ಕಯ್ವಿಡಿದ ಕರ್ಬನಾಂ ಪಿಡಿದವಳಂ
ನೀನೆ ಬಿಡಿಸುವೆಯ ಸಾಯದೆ
ಪೋ ನಿನ್ನಿಂ ನಿನ್ನ ಪತಿಗೆ ಪುಯ್ಯಲ್ಗಳದೇಂ ೨೭

ಎಂದ ನುಡಿಗೆ ಕಳಕಳಿಸಿ ನಕ್ಕು ಸಿಂಹಚೂಡನಿಂತೆಂದಂ

ವಸುಷೇಣನೃಪನ ಮುಂದ
ಣ್ಗೆ ಸುನಂದಾದೇವಿವೆರಸು ನಿನ್ನಯ ನೆತ್ತರ್
ಬಸಿವ ತಲೆ ಕಾಣ್ಕೆಯಾಗಿರೆ
ಬಿಸುಟಲ್ಲದೆ ಸಿಂಹಚೂಡನೇಂ ಪೋದಪನೇ ೨೮

ರಸೆ ಪೊಱುವುದೆ ಪರವೆಣ್ಗಾ
ೞಿಸಿದೊಡೆ ಕಳ್ದೊಯ್ದು ಕೂಡಿ ತಂದಪಯ್ ನಲ್ಮಾ
ನಸನಾದ ಚಂಡಶಾಸನ
ವೆಸರಂ ಚಂಡಾಲ ನೀರೊಳಿಂತರ್ದುವರೇ ೨೯

ಎನಲೊಡಂ ಚಂಡಶಾಸನನಿಂತೆಂದಂ

ನೀನೆನಗೆ ಬುದ್ಧಿವೇೞಲ
ದೇನಪ್ಪಯ್ ಬಾಳ ಬಾಯೆ ಪಲ್ಗೞಿಸಿಕೊಳಲ್
ನೀನಾರ್ದೆ ಬರ್ದುಂಕಿದ ಬೞಿ
ಕೇನಾದೊಡಮೆನ್ನ ಮುನ್ನಮಾಯುತಮಾಗಾ ೩೦

ಎಂದೊರ್ವರೊರ್ವರಂ ಮೂದಲಿಸಿ ನುಡಿಯುತ್ತು ಮಿರ್ವರುಂ ಭೂಮಾನದಳವಿಯೊಳ್ ಪರಿಯಲನುಗೆಯ್ವಾಗಳ್

ಬೆಳೆದಡವಿಯು ಕಳನಾದುದು
ನಳಿನದಳೇಕ್ಷಣೆಯ ಚಿತ್ತಮರಸಾಯ್ತಾಶಾ
ಳಳನೆಯುರೆ ನೋೞ್ಪರಾದರ್
ಬಳಯುತರರಸಂಕವಾದರಂತಾ ಕ್ಷಣದೊಳ್ ೩೧

ಆಗಳೊಡವಂದು ನೋಟ್ಪ ನೋಟಕರ್ ತಮ್ಮೊಳಿಂತೆಂದರ್

ಇಳೆಯೊಳಗೆ ಸಿಂಹಚೂಡನೆ
ಫಳಕಾರಂ ಚಂಡಶಾಸನಂ ಬಗೆವೊಡೆ ಭೂ
ತಳದೊಳ್ ಕೃತಘ್ನನಿವರತಿ
ಬಳರಿರ್ವರ ಸೋಲ ಗೆಲ್ಲವರಸನ ಪುಣ್ಯಂ ೩೨

ಇತ್ತ ಸುನಂದೆ ನಿಜಾಂತರ್ಗತದೊಳಿಂತೆಂದಳ್

ತಲೆಗಾಯೀ ಭಟನಂ ಪೊಣರ್ಚಿ ಪೊಡೆದಿಕ್ಕೀ ದ್ರೋಹನಂ ನೇಸಱೇ
ನೆಲನೇ ವ್ಯೋಮಮೆ ವಾಯುದೇವ ಸೆಱೆಯಿಂದಂ ತಪ್ಪಿದಂದೆನ್ನನಾಂ
ಬಲಿಗೆಯ್ವೆಂ ನಿಮಗೆಂದು ಮೈಕೊರಗಿ ಸುಯ್ ಕಯ್ಗಣ್ಮಿ ಕಣ್ಗಟ್ಟು ಕೋ
ಟಲೆಗೊಂಡಳ್ಗೆರ್ದೆ ಡಕ್ಕೆವಾಯ್ದು ಸತಿ ನಿಂದೌತ್ಸುಕ್ಯಮಂ ತಾಳ್ದಿದಳ್ ೩೩

ತತ್ಸಮಯದೊಳ್ ಸಿಂಹಚೂಡಂ

ಅಂಜದೆ ನಿಂದವಧರಿಸೆಲೆ
ಕಂಜದಳಾಯತ ವಿಲೋಲ ಲೋಚನೆ ಪಗೆಯಂ
ಮುಂ ಜವನೆಡೆಗೊಪ್ಪಿಸಿ ಬಟಿ
ಯಂ ಜನಪತಿಯೆಡೆಗೆ ನಿನ್ನನೊಯ್ದೊಪ್ಪಿಸುವೆಂ ೩೪

ಎಂದವಷ್ಟಂಭಮೆಸೆಯೆ

ಬಲದೊಳ್ ಪತ್ತಿದ ಮುಂಡಿ ಚಮ್ಮಟಿಗೆ ಕೈವೀಣಂ ಬೆಡಂಗಾಗೆ ಮೆಯ್
ಗಲಿ ಪೊಕ್ಕೆತ್ತಿದೊಡೊಡ್ಡಿದೊಡ್ಡಣದ ಕೈಗೊಂಬಾಳದಿಂ ಪೋದ ಮೆ
ಯ್ಯಲಗಂಬೆತ್ತಿರೆ ಬಾಹುಪೋರಗದೆ ಪೊಯ್ದಂ ಭೂಪನಾ ವೀರನಂ
ತಲೆಯುಂ ಮುಂಡಮುಮೊರ್ಮೆ ದಲ್ ಪಲಗೆಯೊಳ್ ಬಯ್ತಿಟ್ಟವೊಲ್
ಬೀಟ್ವಿನಂ ೩೫

ಅಂತು ಪೋಯ್ದು ರಥಕ್ಕೆ ಪಾಯ್ದು ಸಾರಥಿಯ ಚೋದನಾವೇಗದಿಂ ಗಾಳಿಗೆ ಗಱಿಮೂಡಿದಂತೆ ಮನಕ್ಕೆ ಮಡವೋಗೆದಂತೆ ಮುಹೂರ್ತಮಾತ್ರದಿನೆಯ್ದಿ ತನ್ನ ದುರ್ಗಮಂ ಪೊಕ್ಕನನ್ನೆಗಮಿತ್ತಲ್

ತರವೇಟ್ಟಿದ ಬೋನಮಾಗಳೆ ರಸಾಳೋದ್ಯಾನಮಂ ಪೊಕ್ಕುದೇ
ಕರಸಂ ಬಾರನೊ ಚಂಡಶಾಸನನದೆತ್ತಲ್ ಪೋದನೋ ದೇವಿಯುಂ
ಬರುತುಂ ತಳ್ವಿದರಂಗರಕ್ಕರಿದಿರ್ವೋರ್ಗಿಂ ನೀಮೆನುತ್ತುಂ ಮಹ
ತ್ತರರಿರ್ಪನ್ನೆಗಮೆಯ್ದೆ ವಂದನವನೀನಾಥಂ ತದುದ್ಯಾನಮಂ ೩೬

ಬಂದು ವರೂಥದಿಂದಿೞಿದು ಭೋಜನಶಾಳಿನಿಕಾಯಮಾನಪ್ರತಾನಸಂಫುಲ್ಲಮಲ್ಲಿಕಾಮಂಡಪದ ಮುಂದೆ ನಿಂದು

ಬಂದಳೆ ದೇವಿ ಪಂಕ್ತಿಗೆಡೆಮಾಡಿಸಿದಪ್ಪಳೆ ಚಂಡಶಾಸನಂ
ಬಂದನೆಯೆಂದು ಮಂದಿರಮಹತ್ತರರಂ ಬೆಸಗೊಳ್ವಿನಂ ನೃಪಂ
ಬಂದುದು ಚೇಟಿಕಾಸಹಚರೀಜನಮುಂ [ಶ್ಲಥ]ಕೇಶಪಾಶಮಾ
ಕ್ರಂದಿತವಕ್ತ್ರಮಾಹತಕೃಶೋದರಮಾಕಳಿತಾಶ್ರುಲೋಚನಂ ೩೭

ಅಂತು ಶೋಕರಸಮೆ ರೂಪುಗೊಂಡಂತೆ ಬರ್ಪ ನಿಜಾಗ್ರಮಹಿಷೀ ಪುರಜನಮಂ ದೂರದೊಳ್ ಕಂಡಿದೇನೆಂದತಿಚಕಿತ ಚಿತ್ತನುಂ ವಿಸ್ಫುರಿತವಿಲೋಚನನುಮುದ್ ಬದ್ಧಭ್ರೂಲತಾಮೂಲನುಮುತ್ತಾನಿತ ಕರಪತಾಕನುಮಾಗುತ್ತುಮಿರೆಯಿರೆ

ಹಾ ಲಲಿತಾಂಗಿ ಹಾ ಕುಸುಮಕೋಮಳೆ ಹಾ ಕಳಹಂಸಯಾನೆ ಹಾ
ನೀಲಸರೋಜ ಲೋಚನೆ ಸುನಂದೆ ನೃಪೇಂದ್ರನ ರಾಜ್ಯಲಕ್ಷ್ಮಿ ಭೂ
ಪಾಲನ ಭಾಗ್ಯಲಕ್ಷ್ಮಿ ವಸುಷೇಣನ ಮಂಗಳಲಕ್ಷ್ಮಿ ರಾಜಚಾಂ
ಡಾಲನ ಬಾಹುರಾಹುಗಿಳನ್ ನಿನಗೆತ್ತಣಿನೆತ್ತ ಬಂದುದೋ ೩೮

ಎಂದು ಬಾಯುಟಿದಟುತ್ತುಂ ಬಂದು ಮುನ್ನಡಿಯೊಳ್ ಕೆಡೆದುಂ ಪುಡಿಯೊಳ್ ಪೊರಳ್ವ ವಿಳಾಸಿನೀಸಮೂಹದೊಳಗೆ ರಾರಾಜಿತರತ್ನ ಪಾದುಕಾಗ್ರಾಹಿಣಿಯಪ್ಪ ಬಾಳಕಿಯದೊರ್ವಳ್ ದೇವರಟ್ಟಿದ ಬಟಿಗೆ ದೇವಿಯರ್ ಬರುತ್ತುಮಿರೆ ಚಂಡಶಾಸನಂ ಕಂಡೆಡೆದು ಪಿಡಿದು ಕೈಸೆಱೆ ವಿಡಿದು ಬಂದಿಕಾರನಂತೆ ಕೊಂಡುಪೋದಂ

ಪಡಲಿಡೆ ಪೊಯ್ದಂ ದೇವಿಯ
ಗೆರ್ಡೆಗುಡದಡ್ಡೈಸಿದಂಗರಕ್ಕರನೆಮ್ಮಂ
ಪಿಡಿದುಯ್ದಂ ಕಿಱಿದೆಡೆಯಂ
ನಡೆಗೆಟ್ಟು ಬಟಿಕ್ಕೆ ಬಿಟ್ಟನಾ ನಿಸ್ತ್ರಿಂಶಂ ೩೯

ಎನೆ ಕೇಳ್ದುಕ್ಕಿದ ಕೋಪವಹ್ನಿಗೆ ವಿಯೋಗೋದ್ರೇಕಶೋಕಪ್ರಭಂ
ಜನಸಂತಾಪಮುಳುರ್ಕೆಯಂ ಪಡೆದು ಕಿಂಕರ್ತವ್ಯತಾಮೂಢನೊಂ
ದಿನಿಸಂ ಜೀವಿತಶಂಕೆ ಭೋಂಕನಱಿದಲ್ಲಾಡುತ್ತುಮಿರ್ದಾತ್ಮನಾ
ಥನನಾಪ್ತರ್ ಸಚಿವರ್ ನಿಜಾಂಶುಕ ತಿರೋಧಾನಾವಿಲಂ ಮಾಡಿದರ್ ೪೦

ಮಳಯರುಹದ ಕರ್ಪೂರದ
ಪಳಿಕಿನ ಪನಿನೀರ ಕದಲಿದಳದಿಱಿಸಿಲ ತಣ್
ಗಳಸದ ತಿಳಿನೀರ್ಗಳ ಶೀ
ತಳತೆಯಿನವನಿಪನನಾಪ್ತರುಜ್ಜೀವಿಸಿದರ್ ೪೧

ಅಂತು ಪರಾಮರ್ಶಿತಹೃದಯನಾದ ನೃಪಾಳನಂ ನರ್ಮಸಚಿವರಿಂತೆಂದರ್

ಮದವದ್ವೈರಿಕುಳಂ ಭವದ್ಭುಜವಿಭಾಸ್ವತ್ಖಡ್ಗಧಾರಾನದೀ
ನದದೊಳ್ ಮುನ್ನ ಮುೞುಂಕದುದ್ಧತರ ದುರ್ಗಂ ನಿನ್ನ ಕೋಪಪ್ರತಾ
ಪದವಜ್ವಾಳೆಗಳಿಂ ಮುೞುಂಕದೆ ವೃಥಾ ಶೋಕಾಬ್ಧಿಯೊಳ್ ಧೀರುವಂ
ದದೆ ನೀನಿಂತು ಮುೞುಂಕಲಪ್ಪುದೆ ಧರಿತ್ರೀಪಾಲ ಚೂಡಾಮಣೀ ೪೨

ಆ ಪ್ರತಿಬೋಧನವಚನಂ ವಲ್ಲಭಾವಿಯೋಗವೈಕ್ಲಬ್ಯ ವಲ್ಮೀಕ ಸುಪ್ತಕೋಪವ್ಯಾಳಪ್ರತ್ಯುತ್ಥಾಪನದಂಡವಾಗೆ ಧರಾಧಿನಾಥನಿಂತೆಂದಂ

ಬಂಡಣದೊಳಟಿದು ಪೆಂಡಿರ್
ಭಂಡಾರಂ ಪೋದೊಡದು ವಿಧಾತೃವಶಂ ಬಲ್
ಗಂಡಂಗೆ ಸಂತಸೊಕಮಾ
ಪೆಂಡತಿ ಕೋಳ್ಪಟ್ಟು ಮಗುಳೆ ಪುಗುವೆನೆ ಪೊಳಲಂ ೪೩

ಪ್ರಾಣಪ್ರಿಯುಳಿಲ್ಲದೆ ನಿಃ
ಪ್ರಾಣಮುದೆಂತುಣ್ಬುದೀಗಳೀ ಒಡಲಹಿತ
ಪ್ರಾಣಾನಿಲನಿಂದೆನ್ನ ಕ್ಕ
ಪಾಣಾಹಿಯನೂಡಿ ಬಟಿಕಮಾನುಂಡಪ್ಪೆಂ ೪೪

ಎಂದೆತ್ತಿ ನಡೆಯಲುತ್ತವಳಿಸಿದ ಸಮಯದೊಳ್

ನೆರೆದಾಪ್ತರ್ ಸಚಿವರ್ ಚಮೂಪತಿಗಳಂದಾಳೋಚನಕ್ಕೆಂದು ಬಂ
ದಿರೆ ಕಂಡಿಂಗಿತಮಂ ನೃಪಂ ನುಡಿದನಿನ್ನೇವಾತೊ ಕಿರ್ಚೆದೊಡಂ
ಗರನಾದಂ ಗಡ ಮಾರಿ ಹೊಕ್ಕ ಮನೆಯೊಳ್ ಪರ್ವಂ ಗಡಾಳೋಚಮೇಂ
ಬೆರಗೇಂ ಬೆಂಬಲಮೇಂ ಸ್ವರಾದಿಬಲಮೇಂ ನೀಂ ಪೇಟ್ವುದೇಂಕೇಳ್ವು
ದೇಂ ೪೫

ಎಂದು ಮುಂದನಾರಯ್ಯದೆ ಪಿಂದಂ ಪಾರದೆ ಮುಂದೆ ನಿಂದ ನಿಜ ಸ್ಯಂದನಮನೇಱಿ ಸುಟ್ಟುರೆ ಮಸಗಿಟ್ಟುರಿಗೊಂಡನಾ ವ್ಯತಿಕರದೊಳ್

ರಣರಭಸೋತ್ಕಟಂ ಧರೆ ಪೆಸಂ ಮಗುಳ್ದಂತೆ ಚತುಸ್ಸಮುದ್ರಮು
ಲ್ಬಣವಿಕಟೋತ್ಕಟಂ ಮಸಗಿ ಮೇಲ್ಗವಿದಂತೆ ದಿಶಾಚತುಷ್ಟಯಂ
.ಪ್ರಣಹಿತಹೇತಿ ತಿಂತಿಣಿಸಿದಂತೊಡವಂದುದು ಪಣ್ಣಿದಾನೆ ಪ
ಲ್ಲಣಿಸಿದ ವಾಜಿ ಪೂಡಿದ ರಥಂ ಕವಚಂಬಗಿದಾಪ್ತಸೈನಿಕಂ ೪೬

ಅಂತು ಬಂದ ಚತುರಂಗಪೃತನಾಸಮೂಹಸಹಿತಂ ಕೃತ ಭುಜ ಬಲ ಪ್ರತಾಪನಪ್ರತಿಹತಾಲೇಪನದೀಕೃತಾಭಿ[ಷವ]ಣಂ ವಸುಷೇಣಂ ಸಾಮಂತಲಕ್ಷ್ಮೀಸೀಮಂತನೆನಿಪ ಸಿಂಹಚೂಡಂಗೆ ಬೀಡುಂದಾಣಮಾದ ಮಾಣಿಕ್ಯಪುರಮನೆಯ್ದುವಪರ್ಾಗಳ್ ಪೊಡೆವ ವೀರವಱೆಯ ಪಿಡಿವ ಬಿರುದಿನ ಕಾಳೆಯ ಸುತ್ತಿಱಿದ ಮುತ್ತಿನ ತಡೆಯ ತಲೆಗೆ ಮುಂದಲೆ ಯಾಗಿ ಲೆಂಕರ್ ಕುಡುವ ಸಿಡಿದಲೆಯ ಸಹಗಮನಸಮುತ್ಸುಕತೆಯುಂ ಕೈಪಿಡಿಸೆ ಕೈಗುಡುವ ಕೈದುಬರ್ಪ ಕೈಪಿಡಿದ ಪೆಂಡಿರ ತಂಡದ ನಡುವೆ ಪೊತ್ತ ಪೊನ್ನ ಪರಿಯಾಣದೊಳಗೆ ಜೋಳವಾಟಿಯ ನಿರ್ವಹಣದ ನಿಬ್ಬಣಕ್ಕೆ ಬೀರಸಿರಿ ಪೊತ್ತ ಪೊಂಗಳಸದಂತೆ ತಟತಟಿಸಿ ತೋರ್ಪ ಪಂದಲೆಯಂ ಕಂಡು ನಿಂದು ನೋಡ್ಪಾಗಳ್

ಮುರಿದಣ್ಪುಕ್ಕಿದ ಗಡ್ಡಮೀಸೆ ಮುಡಿಕಟ್ಟಂ ತಳ್ತ ಕೆಂಬಟ್ಟೆ ಕ
ತ್ತುರಿಯಂ ತೋಱುವ ಚಂಚುಮೀಸೆ ಸುಲಿಪಲ್ ದಷ್ಟಾಧರಂ ಭ್ರೂಕುಟಿ
ಸ್ಫುರಿತಂ ಕೈಮಿಗೆ ಭೂತಳಕ್ಕೆ ಪರಿವೇಷಂಗೊಂಡು ಬೀೞ್ತಂದ ಭಾ
ಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟಿನಾಳ್ದಟ್ಟಿನೊಳ್ ೪೭

ಪಗೆಯಂ ಕಂಡಟಿಯಾಸೆಗೆಯ್ದು ಪೊರೆದಾಳ್ದಂಗಾತುರಂ ಮುಟ್ಟೆಮೆಯ್
ದೆಗೆದಾಸ್ಥಾನದೊಳಾರ್ದು ಪಾರ್ದು ನೆರವಂ ಸಂಗ್ರಾಮದೊಳ್ ಜೋಳವಾ
ಟಿಗೆ ಕಯ್ಯಾಂಪಳೆ ವೇಳೆವಾಟಿ[ಗೆ]ನಸುಂ ಮುಯ್ಯಾಂಪ ಸಾಮಂತರಂ
ನಗುವಂತಿರ್ದುದು ಸಿಂಹಚೂಡನ ಶಿರೋಬ್ಜಂ ದಂತುರತ್ಕೇಸರಂ ೪೮

ಅಂತು ಪೊತ್ತು ಬಂದ ವೀರಂ ವೀರಪುರುಷನ ಶಿರೋಂಬು ರುಹಮಂ ಧಾರಿಣೀಪತಿಗೆ ನಿವಾಳಿಸಿ ನಿಂದು ವನಿತಾಹರಣವಾರ್ತೆಯಂ ಸೂಚಿಸಿ ಬಟಿಯಮಿಂತೆಂದಂ

ಕಾದಿದ ಕಾಳೆಗಂ ಜವನ ಜತ್ತಕುಱಿಕ್ಕೆ ಸಮಾನಮಾದುದೇ
ನಾದೊಡವೇಂ ಬರ್ದುಂಕಿ ಪಗೆ ಪೋದ ಬಟಿಕ್ಕೆ ವೃಥಾನುವಾದಮಿ
ನ್ನಾ ದಯಿತಾಜನಕ್ಕೆ ತೊಱೆದಂಕರ ಲೆಂಕರ ಗೊಂದಣಕ್ಕೆ ತ
ಳ್ವಾದಪುದುರ್ವರಾಧಿಪತಿ ಬೀಡ್ಗೊಡು ಕೂಡುಗೆ ಸಿಂಹಚೂಡನೊಳ್ ೪೯

ಎಂಬುದುಮರಸಂ ನಿಜಾಂತಃಕರಣಖೇದಕ್ಕಂ ವೀರಶಾಸನ ಪ್ರವಾದಕ್ಕಂ ಮೂದಲೆಯಂತಿರ್ದ ತಲೆಯಂ ನೋಡಿ ನೀಡುಮೊದ ವಿದಟಲಂ ಸಮುಚಿತೋಪಚಾರಂ ವಚನಕಾರುಣ್ಯಪ್ರಸಾದಪ್ರದಾನ ಪ್ರಸಂಗದಿಂ ಸಂತರ್ಜಿಸುತ್ತುಮಿರೆ

ತುಟಿಲಾಳ್ ಮುದ್ಗೋತ್ರಭವಂ
ಕಟಿದಂ ಕಲಿಸಿಂಹಚೂಡನೆಂದವಯವದೊಂ
ದಟಲಿಂದೆ ಕೆಂಪು ಮಿಗೆ ನೀರ್
ಇಟಿವಂತಿರೆ ಸೂರ್ಯನಪರಜಲನಿಧಿಗಿಟಿದಂ ೫೦

ಆ ಸಂರಂಭದೊಳ್

ಪರವೆಣ್ಣಂ ತಂದನೋ ತಂದನೊ ಪೆಸರ್ಗಿಡೆ ಪೆರ್ಮಾರಿಯಂ ನಮ್ಮ ದುರ್ಗ
ಕ್ಕರಸಂ ಸೇನಾಸಮಗ್ರಂ ನಿಜಗಲಿ ವಸುಷೇಣಂ ವಧೂವಿಹ್ವಲಂ ದ
ಳ್ಳುರಿ ದಾಟಿಟ್ಟಂತಿದಂ ಸುಟ್ಟುರಿಪದಿರಿಸನೇಗೆಯ್ವೆವೆಂತಿರ್ಪೆವೆತ್ತಲ್
ಪರೆವೆಂ ನಾವೆಂದು ಪೌರರ್ ಕುದಿದರದಿರ್ದರಳ್ಳಾಡಿ ತಳ್ಳಂಕಗೊಂಡರ್ ೫೧

ನೋಣೆಯಲ್ ನುಂಗಲಿಳಾತಳಂ ಮುರಿದು ಮೂರಿಟ್ಟಂತೆ ದುರ್ಗಕ್ಕೆ ನಿ
ಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ದರಂ ಗೆಗ್ಗಡೆಂ
ಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂ
ತಿಣಿ ಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾರ್ದು ಸೂಳ್ಪೈಸಿದಂ ೫೨

ಅಂತು ಸೂಳ್ಪೈಸುವ ನಿಸ್ಸಾಳ ಭೇರೀ ಢಕ್ಕಾ ಮೃದಂಗ ಕೋಳಾಹಳಮೆತ್ತಿ ಪೊತ್ತು ತಂದಿಟಿಪಿದುದೆನಿಸಿ ಗುಡವಿಡಂಬಿತಪಿಪೀಲಿಕಾಜಾಲದಂತೆ ಮುತ್ತಿ ಮುಸುಱಿ ಪತ್ತೆ ಕಟ್ಟಾಯದ ಕಡುಗಲಿಗಳೆಲ್ಲಮಣ್ಮಿಣ್ಮಿನಿಂದು ಮುಮ್ಮಿಟಿಯಾಗೆ ಪೋಯ್ತು ಪೋಯ್ತು ದುರ್ಗಮಿನ್ನೇನೆಂದೊಳಗೆಲ್ಲಮೆಯ್ದೆ ಸರಕುಗಟ್ಟಿ ಪೊಱಗೆಲ್ಲಮೆಯ್ದೆ ಗುಡಿಗಟ್ಟಿ ಸೀರೆಯಂ ಬೀಸಿ ಬೊಬ್ಬಿಱಿದಾರೆ ತೊಟ್ಟನೆ ಕಂಡು

ರಣಮಂಡಲದೊಳ್ ಪೆಱತೆಗೆ
ದಣಿಯಂ ತೆಗೆನೆಱೆದ ಬಿಲ್ಲವೋಲಿರ್ದ ಭಟಾ
ಗ್ರಣಿ ಪರುದು ದಂಡೆಗೊಂಡ
ಡ್ಡಣದಿಂದಂ ಚಂಡಶಾಸನಂ ಕೈಕೊಂಡಂ ೫೩

ಅದನಾಗಳ್ ಕಂಡು ಕಣ್ಣಿಂದುರಿ ಬರೆ ಪೋಗೆ ಪುರ್ವಿಂದಮುರ್ವೇಱೆ ಭೋಂಕಲ್
ಮದಮಾತಂಗಾರಿ ಪೂರ್ವಾಸನದಿನಿಟಿದು ಮೆಯ್ವೆತ್ತ ವಜ್ರಾಂಗಿ ಕಯ್ಯೆ
ತ್ತಿದ ಕೊಂತಂ ದಂಡೆಗೊಂಡಡ್ಡಣಮಿರೆ ವಸುಷೇಣಂ ಭರಂಗೆಯ್ವುದುಂ ಪೋ
ದುದು ಪೊತ್ತಿಂ ಕಾಲಿಡಲ್ ಕತ್ತಲೆ ಕದಡಿದುದೆಂದಾಪ್ತರಡ್ಡೈಸಿ ನಿಂದರ್ ೫೪

ಆಗಳೆರಡುಂ ಪಡೆಗಳಪಹಾರತೂರ್ಯಂ ಮೊಱಗೆ ಪೆಱತೆಗೆಯಲೊಡಂ ವಸುಷೇಣಂ ಬಂದು ನಿಜನಿವೇಶಿತಸ್ಕಂಧಾವಾರಮಂ ಪೊಕ್ಕನಿತ್ತ ಚಂಡಶಾಸನಂ ಮಂಡಳಿಸಿ ಪಿಡಿದ ಕೈದೀವಿಗೆಯ ಬೆಳಗಿನೊಳ್ ತೊಟ್ಟ ಗದ್ದಿಗೆಯ ಗರುಡವಕ್ಕದ ಕವಚದ ನವರತ್ನಕಿರಣಂಗಳ ಕಿಟ್ಟ ಕರವಾಳ ಬಾಯ್ದಾರೆಯೊಳ್ ಬಳ್ಳಿಗೊಂಡು ಮಿಳ್ಳಿಸಿ ಪೊಳೆಯೆಯುಂ ಕಟ್ಟಿದ ಕಠಾರದ ಬದ್ದಿಗೆಯ ತೊಂಗಲ್ದೆಗೆದು ಬಿಗಿದೆಟಲ್ವ ಬಾಲಗಚ್ಚೆಯ ವಿಳಸದ ಸೆಱಗಂ ಸೆಳೆದಳ್ಳಿಱಿಯೆಯುಂ ಒಂದೆ ಕಯ್ಯೊಳಿಕ್ಕಿದೆರಡು ಕಂಕಣದ ಝುಣಝುಣತ್ಕಾರಂ ಜಡಿವ ಬಾಳ ಕುಣಿವ ಕೊಂಕಿಂಗೆ ಕಿಂಕಿಣೀರವಮನಳಂಕೆಗೊಳಿಸಿಯುಮೋದುವ ರಾಯವಾಡದುಗ್ಘಡಿಸುವ ಘೂಂಗಳಿಕದ ಚಪ್ಪರಿಸುವ ಪಡಿಯಱರ ನೆಲನನುಗ್ಘಡಿಸುವ ಪಡೆವಳರ ತನ್ನ ಬೀರವಮಂ ಮನ್ನಿಸಿ ಪೊಗಟ್ದ ಕೈವಾರಿಗಳಾಡಂಬರಮಳುಂಬವಾಗೆ ಸುನಂದೆಯುಂ ತಂದು ಸೆಱೆಯಿಟ್ಟ ಮಣಿಮಾಡಕ್ಕೆ ಬಂದು

ಘನನಿಶ್ವಾಸತರಂಗಿತಾಳಕಿಯನಗ್ರಪ್ರಾಂತವಾರ್ವಿಂದುಲೋ
ಚನಪಕ್ಷ್ಮಾವಳಿಯಂ ವಿಯೋಗದಹನಪ್ಲುಷ್ಟಾಧರಚ್ಛಾಯೆಯಂ
ವಿನತಪ್ರಾಹ್ಣಸುಧಾಂಶುಬಿಂಬಮುಖಿಯಂ ಚೀನೋತ್ತರೀಯಾವಗುಂ
ಠನನಿರ್ಭಿನ್ನಕಪೋಲಪಾಂಡುರುಚಿಯಂ ಸಾರ್ದಂ ತದುರ್ವೀಶ್ವರಂ ೫೫

**ಆಗಳ್**

ಬಿದಿಯೆಂಬ ಮದಗಜಂ ನೃಪ
ಸದನ ಸರೋವರದೊಳೆಪೆದು ಸೆಳೆತಂದು ವನಾಂ
ತದೊಳಿಕ್ಕಿದ ಬಾಳಮೃಣಾ
ಳದವೊಲ್ ಸತಿ ಕೊರಗಿ ಕಣ್ಗೆ ಕರಮೆಸೆದಿರ್ದಳ್ ೫೬

ಅಂತು ಸಾರ್ದು ತನ್ನೊಡವಂದು ಬಾಗಿಲೊಳ್ ನಿಂದ ಪರಿಜನ ಮುಮಂ ಕೆಲಬಲದೊಳಿರ್ದ ಪಸಾಯಿತರುಮಂ ಪರಿಹರಿಸಿ ಕೃತಕ ವಿನ ಯೋಪಚಾರಮೆಸೆಯೆ ಚಂಡಶಾಸನಂ ಸುನಂದಾದೇವಿಗಿಂತೆಂದಂ

ನಯದಿಂ ನಿನ್ನೊಳೊಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸ
ಲ್ಗೆಯ ನೀಂ ಮನ್ನಿಸು ಕಾಮಿ ಕಣ್ಣುಱಿವನಲ್ತಾಂ ಗಂಡುದೊಟ್ಟೆನ್ನ ರಾ
ಣಿಯವಾಸಂ ಪರಿಚಾರಕಾದಿ ನಿನಗೀ ಸಾಮ್ರಾಜ್ಯಲಕ್ಷ್ಮೀಸುಖೋ
ದಯದೊಳ್ ವಲ್ಲಭೆಯಾಗಿ ನೀನಿರು ದಲನ್ನೀಲಾಬ್ಜಲೋಲೇಕ್ಷಣೇ ೫೭

ನುಡಿಯಲೊಡಂ ಮಿಂ ಪೇೞ್ದುಡ [?]
ನುಡಿಯಂ ತನ್ನಿದಿರೊಳಾ ಖಳಂ ಕಡೆಗಣ್ಣಿಂ
ಕಿಡಿಸೂಸೆ ಘೃತಾಹುತಿಯಂ
ಪೊಡೆವ ಶಿಖಿಜ್ವಾಲೆಯಂತೆ ಬಾಲೆ ಕನಲ್ದಳ್ ೫೮

ಅಂತು ಕನಲ್ದೊನಲ್ದು ಸ್ವೈರಿಸಲಾಱದೆ

ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ
ಮಱೆದುಂ ಕಾಣದನಾಥೆಯಂ ನುಡಿವವೊಲ್ ನಿನ್ನೊಂದು ಸಂಪತ್ತಿಯಂ
ಜಱುಚುತ್ತಿರ್ದಪೆ ಪಾಣ್ಬ ನಿನ್ನ ತಲೆಯುಂ ಕಾರಾಗೃಹದ್ವಾರದೊಳ್
ಮೆಱೆವಾಗಳ್ ನುಡಿ ನಾಳೆ ನೀನೆನಗೆ ಮಾಡಲ್ವೇೞ್ಪ ಸತ್ಕಾರಮಂ ೫೯

ಎಂದು ಬೆಟ್ಟವೆಟ್ಟನೆ ಬಯ್ದು ಬೆಟ್ಟು ಬಿದಿರ್ದು ನುಡಿದ ಸುನಂ ದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತಮಿಂತೆಂದಂ

ಕೆಳೆಗೆಟ್ಟಾಂ ಪಗೆಯಾದೆನಾಗೆ ವಸುಷೇಣಂ ಪೋದನಿನ್ನೆನ್ನ ಕ
ಯ್ಯೊಳದಂ ನಂಬಟಿಯಾಸೆಯಿಂ ನಮೆಯದಿರ್ ಬೇಡಾಗ್ರಹಂ ಸತ್ತು ಸ
ತ್ಫಳವಂ ತೋಱುವ ಬಾಡೆಯಾಗದಿರು ಪಾತಿವ್ರತ್ಯದಿಂ ಬತ್ತಿ ಬಾಡ್
ದಳಿರಾಗುತ್ತಿರದಾಳ್ದಿರಾತ್ಮ ಪರ ಸೌಖ್ಯ ಶ್ರೀ ವಿಳಾಸಂಗಳಂ ೭೦

ಎಂಬುದುಮೀತಂಗೆ ಮಾತಂ ತಪ್ಪಿನಮುತ್ತರಂಗುಡುತ್ತಿರಲೇಕೆಂ
ದಾಕೆಯಿಂತೆಂದಳ್

ಮಾವಿನ ಕೊಂಬಿನೊಳ್ ನಲಿದು ನರ್ತಿಪ ಕೋಗಿಲೆ ಪತ್ತಿದಂಟಿನಿಂ
ಬೇವಿನ ಕೊಂಬಿನೊಳ್ ನಲವುದೇ ಪ್ರಿಯನಿರ್ದವೊಲಪ್ರಿಯರ್ಗೆ ಸಂ
ಭಾವನೆಗೆಯ್ವರೇ ಸತಿಯರೇಂ ಗಡ ವೀರನ ತೋಳ ಬಾಳುಮಂ
ನಾವಿದ ಬಾಳುಮಂ ಸಮನೆ ಪತ್ತಿಪ ಸಾಣೆಯೊ ಮದ್ಭುಜಸ್ರಜಂ ೭೧

ವಸುಷೇಣನೃಪನೆ ಕೈವಿಡಿ
ದಸುವಿಂಗೊಡೆಯಂ ಚಿತಾಗ್ನಿಗೊಡೆಯುಂ ಒಡಲಿಂ
ತೆಸೆದೀ ಪಾತಿವ್ರತ್ಯದ
ಮಿಸುಗುವ ಜಸವೆಣ್ಣ ತಲೆಗೆ ತರ್ಪನೆ ಪುಲ್ಲಂ ೭೨

ಎಂಬುದುಮಾ ಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು
ಮಾಣದೆ ಮತ್ತಮಿಂತೆಂದಂ

ಬಿಡೆನಾಂ ನೀಂ ಸಯೆ ಸಾವೆನಲ್ಲದುಟಿಯೆಂ ನೀನೊಲ್ದಡೇನೊಲ್ಲದಿ
ರ್ದೊಡಮೇನಾನೆರಡಿಲ್ಲದೊಲ್ದೆನದಱಿಂ ಬೇಱೂರ ಬೇಟಕ್ಕೆ ಬಾಯ್
ಬಿಡಲಾಱೆಂ ಸೆಱೆಯಿಂದಮೆನ್ನ ಮನೆಯೊಳ್ ನೀನಿರ್ದೆಯೆಂಬಾಸೆಯು
ಳ್ಳೊಡೆ ಸಾಲ್ಗುಂ ಬಟಿಕಪ್ಪುದಕ್ಕೆ ರಣದಿಂದಂಭೋಜಪತ್ರೇಕ್ಷಣೇ ೭೩

ಎಂದು ತನ್ನಳಿಪನಡರೆ ಚಾಳಿಸಿ ನುಡಿದು ಪೋಗುತ್ತುಂ

ಪರಿಚಿತೆ ನೀಂ ತಳೋದರಿಗೆ ಮೆಯ್ವಟಿಯಿಂ ಮನಮಂ ತೊಡಂಕೆ ನಾಂ
ತುರಿಪದಿನಿರ್ದು ನಿಂದಟಲನಾಱಿಸು ತೋಱಿಸು ಭೀತಿಯುಂ ಮನಂ
ಕೊರಗದೆ ಮತ್ತೆ ಸಂತಮಿಡು ಗಂಡನ ಪಂಬಲನೊಯ್ಯನಾಗಿಯೆಂ
ದರುಣಿಕೆಯೆಂಬಳಂ ನಿಱಿಸಿ ಕಾಂತೆಯ ಕಾಪಿನೊಳಾ ನೃಪಾಳಕಂ ೭೪

ನೇಸಱ್ ಮೂಡಲೊಡಂ ಪುನ್ನೆ ಮುನ್ನೆ ಮೂಡಿರ್ದ ವಿರಹ ಪರಿತಾಪಂ ತೀರದೆಯುಮೇತಱೊಳಮಾ ತಳೋದರಿಯನೊಡಂಬಡಿಸಲ್ ಬಾರದೆಯುಮಾ ಕಿತವಂ ತನ್ನ ಕೈತವದೊಳ್

ಪತಿಯಿರೆ ಪಿಂಗದಾಸೆ ಮನದೊಂದಟಿಯಾಸೆಯಿನೆನ್ನನೊಲ್ಲಳೀ
ಸತಿಯಿವಳಂ ಮರುಳ್ಚಿದಪೆನೆಂದು ಬೆಸಂಗುಡೆ ಚಂಡಶಾಸನಂ
ಪ್ರತಿಬಳಮೆಯ್ದೆ ಕೆಟ್ಟುದಟಿದಂ ವಸುಷೇಣನೃಪೇಂದ್ರನೆಂಬ ಸಂ
ಗತಿಯನೊಡರ್ಚಿದಂ ಜನದ ಕಣ್ ಬೆಱಗಪ್ಪಿನಮಿಂದ್ರಜಾಲಿಗಂ ೭೬

ಆ ವ್ಯತಿಕರಮುಂ ಕಂಡು ನಮ್ಮರಸನಿರುಳಿನ ಕವಿಯ ಕಾಳೆಗದೊಳ್ ಮುತ್ತಿದ ಬೀಡಂ ತೊತ್ತಳದುಟಿದು ಪಗೆಯ ಪಂದಲೆ ಕಯ್ಗೆ ವಂದುದಿನ್ನೇನಿನ್ನೇನೆಂದು ಕೋಟೆಯೊಳಗೆ ಜನಂ ಕೋಟಿ ತೆಱದಿಂ ನಾಟಕಂ ನಲಿದು ಬೊಬ್ಬಿಱಿಯುತ್ತಿರೆ ಸುನಂದಾದೇವಿಯಿರ್ದ ಸೆಱೆವನೆಗೆ ತಾನೆ ವಂದು

ವಸುಷೇಣನೆ ಪತಿಯೆನಗೆಂ
ದು ಸುನಂದೆ ಸಿಡಿಲ್ವೆ ಮಾಟ್ಪೆ ಸೋವಡಿಕೆಯನೀ
ಬಸಿವ ತಲೆಗೆನುತುಮೀಡಾ
ಡಿಸಿದಂ ಮಾಯಾವಿ ಪತಿಯ ಮಾಯದ ಶಿರವಂ ೭೭

ಅಂತು ತಂದಿಟಿಪಿದ ಶಿರಮುಮಂ ಕಳ್ದು ತಱಿದ ವಲ್ಲಭನ ಮಣಿಮಕುಟ ಕೇಯೂರಮಂಡಳಾದೀಪನಮಂಡನಮುಮಂ ಪೇರುರದೊಳೋರಂತೆ ಮೆಱೆವ ತೋರಮುತ್ತಿನ ಹಾರಮುಮಂ ಕಾಣಲೊಡಂ

ಹೃದಯದೊಳಿರ್ದ ವಲ್ಲಭನನಾಕ್ಷಣಭೀತಿಯಿನೀಕ್ಷಿಪಂತೆ ಮು
ಚ್ಚಿದುವಲರ್ಗಣ್ಪೊಣರ್ ತಡವಿ ನೋಡುವವೋಲ್ ಕುಚಮಧ್ಯದಲ್ಲಿಗಾ
ಡುದು ಕರಪಲ್ಲವಂ ಸರಮನಾಲಿಸುವಂತೆ ಮೊಗಂ ಮಲಂಗಿತಂ
ಗದೊಳಿರ್ದ ಶೂನ್ಯಮಾಗಱಿಸುವಂತಸು ಪೋಯ್ತು ಸಿತಾಬ್ಜನೇತ್ರೆಯಾ ೭೮

ಬಟಿಯಟ್ಟೆ ಬಂದು ಮುನ್ನಂ
ಪುಟುವಗೆಗೊಳಗಾದಳೆಂದು ಸಾವಾಸಿಗಳಂ
ಕಟಿಪದೆ ನಲ್ಲಂ ತಲೆಯಂ
ಬಟಿಯಟ್ಟಿದನೆಂದು ಪೋದುದಸು ಶಶಿಮುಖಿಯಾ ೭೮

ಇನಿಯನಿರೆ ನೋಡ ಮತ್ತೊ
ರ್ಬನ ಕಣ್ಗಂ ಬಗೆಗವೊಪ್ಪಿದಪ್ಪುದು ಸುಡಲೀ
ತನುವನಿದನೆಂದು ಜೀವಂ
ಮುನಿದಂತಿರೆ ಬಿಟ್ಟು ಪೋಯಿತಸು ಶಶಿಮುಖಿಯಾ ೭೯

ಆಗಳಾ ವ್ಯತಿಕರಮಂ ಕಂಡತಿಚಕಿತ ಹೃದಯನುಮಾಕುಳಿತ ವಿಳೋಕನುಮಾಗಿ

ಸ್ಮರನೊಳ್ ದಾಯಿಗನಾಗಿ ಬೆಂದ ವಿಧಿಯೊಂದಂ ಮಾಡಿದಂ ಕೂಡುವೆಂ
ಬೆರಗಿಂದೆಂದಿದನಿಂತು ಮಾಡೆ ಮರಣಂ ಮೂಡಿತ್ತು ಹೋ ಬೆಂದೆನಾ
ನುರಿದೆಂ ನಂದಿದೆನೆಂದು ಬಂದು ಭರದಿಂ ತಪ್ಪೈಸೆ ತಳ್ತಾಂತು ತ
ತ್ತರುಣೀಗಾತ್ರದ ಸೋಂಕು ಸಮ್ಮನಿಸೆ ಮೂರ್ಛಾಪನ್ನನಾದಂ ಖಳಂ ೮೦

ಅವನಂ ಚಾಮರದಡಪದ
ಡವಕೆಯ ಕಿಡ್ವಾಳ ಮೇಳದಂಗನೆಯರ್ ಬೀ
ಸುವ ಬಿಜ್ಜಣಿಗೆಯ ಮಳಯಜ
ನವಜಳ ಕಣದೆಲರ ಸೋಂಕಿನಿಂ ನಿಲೆ ಪಿಡಿದರ್ ೮೧

ಅಂತು ಮೂರ್ಛೆಯಿಂ ಬೆಚ್ಚನೆ ಸುಯ್ದು ಬೆದೆಬೆದೆ ಬೆಂದುನೊಂದು ನಿಂದಿಸಿಕೊಂಡು ಮಾಣದೆ

ನೋಡಿ ಕನಲ್ದು ಬಾಯ್ಮುನಿದು ಮೋನದಿನೇಕೆಲೆ ದೇವಿ ನೀಂಮನಂ
ನೋಡುವೆ ಸಾವಿನಿಂ ಸರಸವಾಡುವರೇ ಮಱುಮೆಯ್ಯೊಳಾದೊಡಂ
ಕೂಡದೆ ಮಾಣೆನಬ್ಜದಳಲೋಚನೆ ನಿನ್ನೊಡನಿಂದು ಮೆಯ್ಗೆ ಮೆ
ಯ್ಗೂಡುವೆ ಧೂಮಸೌಧಗೃಹದೊಳ್ ಶಿಖಿಪಲ್ಲವರಾಗತಳ್ಪದೊಳ್ ೮೨

ಎಂದು ಬಾಯಟಿದು ಪಟಯಿಸಿ ಬಸಮುಟಿದಸುವೊಱೆಯಾಗಿ ಮನ ಮನಱಿದು ಕಳವಳಿಸಿ

ಎನಗಿನ್ನೋಲಗಸಾಲೆಯೇಕಿದು ವಿಮಾನಂ ನಂದೆಯಂ ಲೋಲಲೋ
ಚನೆಯಂ ಕುಳ್ಳಿರಿಸಿಲ್ಲಿ ಕೂಡೆ ಬಟಿಸಲ್ವಂತಃಪುರಸ್ತ್ರೀಯರಾ
ಳ್ತನಮಂ ತೋಱುವ ಲೆಂಕರೊಳ್ ನುಡಿಯುವೇಂ ವಿದ್ಯಾಜನಂ ಬರ್ಕೆ
ಚಂದನಗಂಧಾವಿಧದಿಂದಮೆನ್ನ ವಿರಹ ಜ್ವಾಲಾಗ್ನಿಯಂ ನಂದಿಪೆಂ ೭೩

ಎಂದು ತನ್ನ ಲಕ್ಷ್ಮೀಭವನಮೆನಿಸುವುಪರಿಮಂಡಪಮನೆ ಚಿತ್ತಕ್ಕೆ ಮಾಡಿ ಸುನಂದಾದೇವಿಯುಮಂ ತಾನುಮೇಕಾಸನದೊಳ್ ಕುಳ್ಳಿರ್ದು ರಾಣಿಯವಾಸದ ಪೆಂಡವಾಸದ ಭಾಷೆಯ ಲೆಂಕರ ಭಾರತಿಕನಿಕರದೋಲಗದ ಕೇಳೀವಿಳಾಸಮಂ ಕೆಟಗೆ ತಗುಳ್ಚಿದ ಹುತವಹಜ್ವಾಲಾಕಲಾಪಮಂ ಮೆಚ್ಚಿದಂತೆ ಮೂರ್ಛೆಕೊಳ್ವಿನ ಮೊಡನಟಿಯಲ್ ಪರಿಚ್ಛೇದಿಸಿದ ಕುಲಸ್ವಾಮಿಯವಸಾನ ಸಮಯಮಾಗೆ

ನಗೆಗಂ ನಾಚದೆ ನಮ್ಮನೊಲ್ಲದೆ ಪರಸ್ತ್ರೀಗೊಲ್ದವಳ್ ಸತ್ತೊಡಾ
ಕೆಗೆ ತಾಂ ಪ್ರಾಣಮನಿತ್ತಪಂ ಗಡರಸಂ ನೋಡಕ್ಕ ಮಾವಿಂಗೆ ಮ
ಲ್ಲಿಗೆಗಳ್ ಕೂರ್ತೊಡೆ ಮಾವು ಕೂರ್ತುದು ವಸಂತಶ್ರೀಗೆನಿಪ್ಪಂತೆ ಲ
ಜ್ಜೆಗೊಡಲ್ ಮಂಮಟಿವೋಪ್ಪುದಿನ್ನುಟಿವಿದಕ್ಕೇಗೆಯ್ವಮಬ್ಜೇಕ್ಷಣೇ ೭೪

ಆ ಮಾತಂ ಮಾರ್ಕೊಂಡು ಕುಲವತಿಯುಂ ಶೀಲವತಿಯು ಮೆನಿಸಿದ ವಿದಗ್ಧೆಯೊರ್ವಳಿಂತೆಂದಳ್

ಪಟಿಗೇವಯ್ಯುವ ಪಾಪವೆಂಬ ಪೆಱವೆಣ್ಗಾಟಿಪ್ಪುದಾ ಮಾಯದೊಂ
ದಟಿವೆಂಬೋಜೆಯಧೀಶವೃತ್ತಿಯಧಿಪಂಗೇನಾದುದಾದಲ್ಲಿ ಮೆಯ್
ನೆಟಲಂತಪ್ಪುದು ನಮ್ಮ ವಿತ್ತನವಗಿನ್ನಾ ಮಾತದೇಕೆಂದು ಪಿಂ
ದುಟಿವೊಂದಾಸೆಯನೊಲ್ಲದೆಯ್ದೆ ನೆರಪಿತ್ತಂತಃಪುರ ಸ್ತ್ರೀಜನಂ ೭೫

ಕ್ರಮದಿಂ ಕೈಯೆಡೆಗೊಟ್ಟೆನೀ ಹರಿಣಿಯಂ ಕೊಂಡಾಡಿಸೀ ರಾಜಕೀ
ರಮನೋವೀ ಕಳಹಂಸನಂ ಸಲಹು ನೀನೀ ಸೋಗೆಗಾಗೆಲ್ಲಮಂ
ನಮಗಿನ್ನೆಮ್ಮ ಸಮಾನಮೆಂದು ಕೆಲದಾಳೀಜಾಲಮಂ ಬೇಡಿ ತ
ಳ್ತ್ತಮೆಯಿಂದಂ ಕರೆಗಣ್ಮೆ ಸೂಸಿ ಕಱೆದರ್ ಕಯ್ಯೊಡ್ಡಿ ಕಣ್ಣೀರ್ಗಳಂ ೭೬

ಅಂತು ನಿರಂತರಶೋಕರಸಾವೇಗದೊಳ್

ನೆರೆದುದು ಲೆಂಕತಂಡಮೊಡವಂದುದು ರಾಣಿಯವಾಸಮೊಲ್ದಳಂ
ತರಿಸಿದನಾ ಧರಾಧಿಪತಿಯೋಲಗಸಾಲೆಗೆ ವಂದುದಾ ತನೂ
ದರಿಯ ವಿಶೇಷ ಭೂಷಿತ ಶರೀರಮನೇಕ ವಿಮಾನ ಯಾನಮು
ಬ್ಬರಿಸಿದುದಾದುದಿಂತು ಕರುಣಾದ್ಭುತರೌದ್ರರಸಾಕರಂ ಪುರಂ ೭೭

ಅನ್ನೆಗಮಿತ್ತಲ್

ವಸುಷೇಣಂ ಲಗ್ಗೆಮಾಡಲ್ಮೊಗಸಿ ಪೊಗಿಸಿ ದುರ್ಗಕ್ಕಿಭವ್ರಾತಮಂ ಪ
ಣ್ಣಿಸಿ ವಾಹವ್ಯೂಹಮಂ ಪಲ್ಲಣಿಸಿ ಸುಭಟರಂ ಕಯ್ದುಗೊಳ್ವಂತಿರಾಳೋ
ಚಿಸಿ ರಾಜಾವಾಸದಿಂ ತಾಂಪೊಱಮಡುತಮಿದೇಂ ಕೋಟೆಯೊಳ್ಕಾಮಿನೀ ವೀ
ರ ಸಮೂಹೋದ್ರೇಕ ಶೋಕಾಕುಳ ಬಹಳರವಂ ತಿಣ್ಣಮಾಯ್ತೆಂದನಾಗಳ್ ೭೮

ಚರನೆಯ್ತಂದೊರ್ವನಾ ವೃತ್ತಕಮನುಸಿದೊಡುರ್ವೀಶ್ವರಂ ಪ್ರಾಣನಾಥಾ
ಮರಣೋದಂತಾಭ್ರವಹ್ನಿಸ್ಫುಟಿತಹೃದಯನುಚ್ಛ್ವಾಸನಿಶ್ವಾಸಮೂಢಾಂ
ತರಿತಂ ಬಾಷ್ಪಾಂಬುನಿಷ್ಪಂದಿತನಯನಯುಗಂ ಖೇದದಿಂ ಕೀಲಿಸಿರ್ದರ್
ಕರುವಿಟ್ಟರ್ ತಿರ್ದುವಿಟ್ಟರ್ ಬರೆದು ಕರಿಯಮೇಲಿಟ್ಟರೆಂಬಂತಿರಿರ್ದಂ ೭೯

ಅಂತು ಕಿಱಿದು ಬೇಗಮಿರ್ದಂತೆಂತಾನುಂ ತನ್ನ: ತಾನಱಿದು ಬಾಯಟಿದಾಕಾಶವಚನನಿಂತೆಂದಂ

ಆನಟಿದೆನೆಂದು ಪುಸಿದೊಡೆ
ಮಾನಿನಿ ನೀಂ ಕಟಿದೆ ನಿನ್ನ ಸಾವನೆ ಕಂಡಿಂ
ತಾನುಟಿದೆಂ ನಿರ್ಲಜ್ಜರ್
ದೀನರ್ ಕೃಪಣರ್ ಕೃತಘ್ನರಾರೆನ್ನಿಂದಂ ೮೦

ಅನಂತರಂ ಪಾರ್ಷ್ಣಿಗ್ರಾಹಕನಾಗಿ ತನ್ನಂ ನೆಮ್ಮಿಸಿಕೊಂಡಿರ್ದ ದಯಿತಸಾಮಂತನೊಳಿಂತೆಂದಂ

ಇನಿಯಳ್ ಪೋದ ಬಟಿಕ್ಕಮೆನ್ನಿರವು ತಾರಾಮಂಡಲಂ ಪೋದ ಲೋ
ಚನಮಿರ್ಪಂತೆ ಸುಗಂಧ ಪೋದ ಕಟಿಪೂವಿರ್ಪಂತೆ ತೀವಿರ್ದ ಜೀ
ವನಮೆಲ್ಲಂ ನೆಱೆಪೋದ ಹೊಟ್ಟುಗೆಱೆ ತಾನಿರ್ಪಂತೆ ದೈನ್ಯಕ್ಕೆ ಭಾ
ಜನಮಿರ್ದೇನಸು ಪೋದ ಬಾಳ್ವೆಣನಿದರ್ಕಾನಿರ್ದೊಡೇಂ ಬಿಟ್ಟೊಡೇಂ ೮೧

ಅಂತುಮಲ್ಲದೆಯುಂ

ಇದಱೊಳ್ ವಲ್ಲಭೆ ಕಾದಿ ಕೊಳ್ವ ಧನಮಾ ಪ್ರಾಣೇಶ್ವರೀರತ್ನಮಿ
ಲ್ಲದ ಬಾಳ್ಗೋಟೆ ಗಡೇಕೆ ಕೋಟಲೆಗಳೇಟಲ್ ಶತ್ರು ಸಾಯಲ್ ಕಡಂ
ಗಿದಪಂ ತಾಂ ಗಡ ಕೊಲ್ವುದಾರನಕಟೀ ಬೇಳಂಬಮಿನ್ನೇಕೆ ಸಾ
ಯದೊಡಂ ತೀರದೆ ಕಾಯಮುಂ ತೊಱೆಯಲಿನ್ನುಂ ರಾಜ್ಯದೊಳ್ ಬಾಳ್ವುದೇಂ
೮೨

ಮುನಿಸಯ್ದುಂ ತೞಱಿಂದಲಪ್ಪುದದಱೊಳ್ ಸ್ತ್ರೀಸಂಭವಂ ತಿಣ್ಣಮಾ
ಮುನಿಸಂ ತಂದನ ಕಂಠಪೀಠತಳದೊಳ್ ತಂದಿಟ್ಟು ರಕ್ತಾಂಬು ಮ
ಜ್ಜನಮಂ ಮಾಡಿಸಿ ಮಸ್ತಕಾಂಬುರುಹದಿಂದಂ ಪೂಜೆಗೆಯ್ದಾಂತೊಡಾ
ತನ ಕೂರ್ವಾಳ್ ಕರವಾಳ್ ದಲುಂತು ಮಱವಾಳ್ ಪಾಱೂರ ಮ್ಯೈಲಾರನಾ
೮೩

ಎಂದು ಕೊಕ್ಕರಿಸಿ ಮಾಣದೆ

ಏಱು ಬರೆಗೊಂಡ ಜೂದುಂ
ಗಾಱಿನವೊಲ್ ಲಗ್ಗೆ ಮಾಡಲೊಲ್ಲದೆ ಪಡೆಯಂ
ಸ್ವಾಱಿಸಿ ಮುಂದುಂ ಪಿಂಗುವ
ನೀಱೆಯವೊಲ್ ತೆಗೆಯವೇಟ್ಟನಾ ವಸುಷೇಣಂ ೮೪

ಅಂತು ಪರವಿಗ್ರಹದ ಮೇಲಣ ತೋಳ್ವಲಮುಮಂ ನಿಜವಿಗ್ರಹದ ಮೇಲಣ ದಾಳ್ವಲಮುಮೋಸರಿಸದೆ ಸುತ್ತಿಱಿದ ಮುತ್ತಿದ ಬೀಡಂ ತೆಗೆಯಿಸಿ ಮಗುಳ್ದು ಬರ್ಪಾಗಳ್

ಬಿರುದಿನ ಕಾಳೆ ಬಾರಿಸುವ ಬೀರದ ಡೌಡೆ ತೆರಳ್ವ ಕೇತನೋ
ತ್ಕರದ ವಿಡಂಬವೊಲ್ಲನುಲಿತಪ್ಪ ಚತುರ್ಬಲದುರ್ವು ಕೂರ್ಪಿನಿಂ
ದುರಿವರಿವಸ್ತ್ರಶಸ್ತ್ರಕಿರಣಂ ವಸುಷೇಣನೊಳಾದುವೆಯ್ದೆ ಕೊ
ಕ್ಕರಿಕೆಗೆ ದುಃಖಿತೇ ಮನಸಿ ಸರ್ವಮಸಹ್ಯಮೆನಿಪ್ಪ ನೀತಿಯಿಂ ೮೫

ಅಂತು ನಿರ್ವೇಗಪರನಾಗಿ ಮಗುಳ್ದು ಬಂದಸ್ತಂಗತಪ್ರಭೆಯಂತೆ ನಿಜ ಮಂಡಲಮಂ ಪೊಕ್ಕು

ನಡುನಾಡ ತೀರ್ಥಮೆನಿಸಲ್
ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂ
ಬಿಡಿದು ನಿಜಕಟಕಮಂ ತಾಂ
ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ ೮೬

ಸಮಭಾಗಂ ಬರೆ ಹಸ್ತಿವಾಜಿಸಹಿತಂ ಭಂಡಾರಮಂ ಪಚ್ಚುಗೊಂ
ಡು ಮಗಂಗರ್ಧಮನಿತ್ತು ಚೈತ್ಯನಿವಹೋದ್ಯಾನಕ್ಕೆ ತಾಂ ಬಂದು ಧ
ರ್ಮಮನುದ್ಯೋಗಿಸೆ ಸಂಯಮೋಪಕರಣಕ್ಕರ್ಹತ್ಪದಾಭ್ಯರ್ಚನ
ಕ್ಕೆ ಮನೋರಾಗದಿನಿತ್ತನಿತ್ತು ಗಜ ವಾಜಿ ಸ್ತ್ರೀ ಸಮಾಜಂಗಳಂ ೮೭

ಇವು ಘಟಿಕಾಸ್ಥಾನಂ ಮ
ತ್ತಿವು ತೀರ್ಥಸ್ಥಾನಮೆಂಬ ರೂಢಿಯ ಭಗವದ್
ಭವನಕ್ಕಲಂಘ್ಯಮುಟಲುಂ
ತವೆ ಮುಕ್ಕೊಡೆಯೆತ್ತಿ ಬಿಟ್ಟನಾ ವಸುಷೇಣಂ ೮೮

ಲಲನಾ ವಿಯೋಗಹೇತು
ಚ್ಛಲಮೆರ್ದೆಯೊಳ್ ನಟ್ಟ ಶೂಲದಂತಿರೆ ತಪದಿಂ
ಗೆಲೆ ಜೀರ್ಣಮಾಗೆ ತನು ಕೂ
ರಲಗಿನ ಪಱಿದೊವಲೊಳಿರ್ದನಂತಾ ಮುನಿಪಂ ೮೯

ಅಂತು ತಪಸ್ತಪ್ತಶರೀರನಾಗಿ ನಿಜಾಯುರವಸಾನದೊಳೊಂದು ತಿಂಗಳ್ ವರಂ ಮರುಮಂಡಲದಂತಿರನಶನಕ್ಷೇತ್ರನಾಗಿ ನೋಂತು ಕಡೆಯೊಳೆನ್ನ ತಪದ ಫಲಮುಂಟಪ್ಪೊಡಾನನ್ಯಜನ್ಮದೊಳಾರ್ಗಮಜೇಯನುಮತಿ ಸುಭಗರೂಪ ಸೌಂದರ್ಯನುಮಶೇಷಧರಾವಲ್ಲಭಜ್ಯಾಯನುಮಾಗಿ ಪುಟ್ಟುವನಕ್ಕೆಂದು ನಿಶ್ಚಯಿಸಿ

ತೋಱಿ ನಟಿಯಿಸುವ ಜೋಹಮ
ನೇಱಿಸಿ ಕೊಳದಿರ್ದ ಜೋಹದುದ್ದೆಸದಿಂದಂ
ಜಾಱಿಸುವಂತಿರೆ ತಪದಿಂ
ತಾಱಿದ ತನುವಂ ನಿಧಾನದಿಂ ಮುಂಬಿಟ್ಟಂ ೯೦

ಅಂತು ಮುಡುಪಿ

ಕಟ್ಟಿತನಾರ್ಗಂ ಕಳೆಯಲ್
ನೆಟ್ಟನೆ ಬಾರದವೊಲಂತು ನೆಗಟ್ದುಗ್ರತಪಂ
ಕಟ್ಟಿದ ಪುಣ್ಯದ ಫಳದಿಂ
ಪುಟ್ಟಿ ಸಹಸ್ರಾರಕಲ್ಪದೊಳ್ ಸುರನಾದಂ ೯೧

———

# ಅನುಬಂಧ ೪

## ಜನ್ನನ ಶಾಸನಗಳು

### ೧

ಚೆನ್ನರಾಯಪಟ್ಟಣದ ಅನೆಕೆರೆ ಗ್ರಾಮದಲ್ಲಿ ಸಿಕ್ಕಿದ, ಕ್ರಿ.ಶ. ೧೧೯೧ರಲ್ಲಿ ಹುಟ್ಟಿದ, ತಾಮ್ರಶಾಸನದ ವಿಷಯವನ್ನು ಅದರ ಮಾತು ಗಳಿಂದಲೇ ಈ ರೀತಿ ಅಡಕವಮಾಡಬಹುದು :

''ಸ್ವಸ್ತಿ ಸಮಸ್ತ ಭುವನಾಶ್ರಯಶ್ರೀ ಪೃಥ್ವೀವಲ್ಲಭಮಹಾರಾಜಾಧಿ ರಾಜ ಪರಮೇಶ್ವರನ್ ದ್ವಾರಾವತೀಪುರವರಾಧೀಶ್ವರನ್, ಯಾದವ ಕುಳಾಂಬರದ್ಯುಮಣಿ ಸಮ್ಯಕ್ತ್ವಚೂಡಾಮಣಿ, ಮಲೆರಾಜ ರಾಜನ್ ಅತ್ಯತುಳತೇಜನ್, ಮಲೆಪರೊಳ್ ಗಂಡನ್ ಕದನಪ್ರಚಂಡನ್, ಅಸ ಹಾಯಶೂರನ್ ಏಕಾಂಗವೀರನ್, ಶನಿವಾರಸಿದ್ಧಿ ಶರಣಾಗತವಾರ್ಧಿ, ಗಿರಿದುರ್ಗ ಮಲ್ಲನ್ ಅದಟಹೃತ್‌ಸೆಲ್ಲನ್, ಚಲದಂಕರಾಮನ್ ಬಲ ದಂಕಭೀಮನ್, ನಿಶ್ಶಂಕಪ್ರತಾಪ ಚಕ್ರವರ್ತಿ ಶ್ರೀಮತ್ ಪೋಯ್ಸಳ ವೀರಬಲ್ಲಾಳ ದೇವರ್ ಶ್ರೀಮದ್‌ರಾಜುಧಾನಿ ದೋರಸಮುದ್ರದ ನೆಲೆ ವೀಡಿನೊಳ್ ಸುಖಸಂಕಥಾವಿನೋದದಿನ್ ಪೃಥ್ವೀರಾಜ್ಯಂಗೆಯುತ್ತು ಮಿರೆ ; ತತ್‌ಪಾದಪದ್ಮೋಪಜೀವಿ ಶ್ರೀಮನ್ ಮಹಾಪ್ರಧಾನನ್ ಅಧನಬುಧನಿಧಾನನ್, ಸರ್ವ್ವಾಧಿಕಾರಿ ಸಕಳೋಪಕಾರಿ, ಕರಣಾಗ್ರ ಗಣ್ಯನ್ ಸಾಕ್ಷರಶರಣ್ಯನ್, ಋಗ್ವೇದಚೂಡಾಮಣಿ ಸತ್‌ಕುಲನಭೋ ಮಣಿ, ಗೋತ್ರಪವಿತ್ರನ್ ಕವಿಜನಮಿತ್ರನ್, ಶ್ರೀಮತ್‌ಪ್ರಸನ್ನ ಕೇಶವ ದೇವ ದಿವ್ಯಪಾದಪಲ್ಲವೋತ್ತಂಸನ್ ಸುಜನಾವತಂಸನ್, ಶ್ರೀಕರಣದ ಹೆಗ್ಗಡೆ ಮಾಚಯ್ಯಂಗಳು ಶಕವರ್ಷ ೧೧೧೩ನೆಯ ಸಾಮ್ಯಸಂವತ್ಸರದ ಪುಷ್ಯ ಬಹುಳ ೧೧ ಆದಿತ್ಯವಾರದುತ್ತರಾಯಣ ಸಂಕ್ರಮಣದಂದು, ಕಬ್ಬುಹುನಾಡೊಳಗಣ ಕೇಶವಪುರಾಪರನಾಮಧೇಯಾಗ್ರಹಾರಮಪ್ಪಾ ನೆಗನಕೆಱೆಯಂ ಸರ್ವಬಾಧಾಪರಿಹಾರಮಾಗಿ ಸ್ವಸ್ತಿಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಲಗುಣ ಸಂಪನ್ನರುಂ ಯಜನ ಯಾಜನಾಧ್ಯಾಯನಾಧ್ಯಾಪನ ದಾನ ಪ್ರತಿಗ್ರಹಾ

ನೂನ ಷಟ್ಕರ್ಮಪ್ರಸನ್ನರುಂ ಶ್ರೀಮತ್ ಪ್ರಸನ್ನಕೇಶವದೇವ ದಿವ್ಯ ಪಾದ ಕಲ್ಪಪಾದಪ ಚ್ಛಾಯಾಸನರುಂ ನಾನಾಗೋತ್ರ ಸಮುತ್ಪನ್ನರುಂ ಅಪ್ಪಮಹಾಜನಂಗಳ್ಗೆ, ಶ್ರೀಮದ್‌ವಜ್ರೇಶ್ವರದೇವರ ಸಂನಿಧಾನದೊಳ್ ಪಾದಪೂಜಾಪುರಸ್ಸರಂ, ಶ್ರೀವೀರಬಲ್ಲಾಳದೇವರ ಶ್ರೀಹಸ್ತದಿಂ ಧಾರಾ ಪೂರ್ವಕಂ ಮಾಡಿಸಿ ಬಿಡಿಸಿಕೊಟ್ಟರ್—ಇಂತೀ ಧರ್ಮಮಾಚಂದ್ರಾರ್ಕ ತಾರಮುತ್ತರೋತ್ತರಾಭಿವೃದ್ಧಿಯಂ ಸಲುತ್ತುಮಿರ್ಕೆ ಮಂಗಳಮಹಾ ಶ್ರೀಶ್ರೀಶ್ರೀ.

ಸ್ವದತ್ತಾಂ ಪರದತ್ತಾಂ ವಾ
ಯೋ ಹರೇತ ವಸುಂಧರಾಂ
ಷಷ್ಟಿವರ್ಷಸಹಸ್ರಾಣಿ
ವಿಷ್ಠಾಯಾಂ ಜಾಯತೇ ಕ್ರಿಮಿಃ ''

ಕಂದ ವೃತ್ತ ವಚನಗಳನ್ನು ಒಳಕೊಂಡು ಚಂಪೂ ಶೈಲಿಯಲ್ಲಿ ಬರೆದು, ಇನ್ನೂರು ನಿಡುಸಾಲುಗಳಿಗೆ ಮೇಲ್ಪಟ್ಟು ಕೆತ್ತಿರುವ ಈ ಶಾಸನ ದಲ್ಲಿ ಆವಶ್ಯಕ ವಿಷಯವೊಂದನ್ನೂ ಬಿಡದೆ ಮೇಲೆ ಅಡಕವಾಗಿ ಕೊಟ್ಟಿ ರುವ ವಚನಭಾಗ ಶಾಸನದ ಸುಮಾರು ನಲವತ್ತು ಸಾಲುಗಳನ್ನು ತುಂಬುತ್ತದೆ. ಕೊನೆಯಲ್ಲಿ ಅಗ್ರಹಾರದ ಹರವು, ಗಡಿ ಮೊದಲಾದು ವನ್ನು ಹೇಳುವ ಸುಮಾರು ಮೂವತ್ತು ಸಾಲುಗಳನ್ನು ಬಿಟ್ಟರೆ ಉಳಿದ ಭಾಗವೆಲ್ಲಾ ಹೊಯ್ಸಳ ವಂಶ ವರ್ಣನೆಯನ್ನೂ ಮಾಚಿರಾಜನ ವಂಶ ವರ್ಣನೆಯನ್ನೂ ಕುರಿತದ್ದಾಗಿದೆ.

೨

ತರಿಕೆರೆಯ ಅಮೃತಾಪುರದ ಅಮೃತೇಶ್ವರ ದೇವಾಲಯದಲ್ಲಿರುವ, ಕ್ರಿ.ಶ. ೧೧೯೭ರಲ್ಲಿ ಹುಟ್ಟಿದ, ಶಿಲಾಶಾಸನದ ವಿಷಯವನ್ನು ಅದರ ಮಾತುಗಳಿಂದಲೇ ಹೀಗೆ ಅಡಕಮಾಡಬಹುದು :

'' ಸ್ವಸ್ತಿ ಸಮಸ್ತ ಭುವನಾಶ್ರಯನ್ ಶ್ರೀ ಪೃಥ್ವೀವಲ್ಲಭ ಮಹಾ ರಾಜಾಧಿರಾಜ ಪರಮೇಶ್ವರನ್ ದ್ವಾರಾವತೀಪುರವರಾಧೀಶ್ವರನ್ . . . ನಿಶ್ಶಂಕಪ್ರತಾಪ ಚಕ್ರವರ್ತಿ ಹೊಯ್ಸಳ ವೀರಬಲ್ಲಾಳದೇವರ್ ದುಷ್ಟ

ನಿಗ್ರಹಶಿಷ್ಟಪ್ರತಿಪಾಳನಾರ್ಥಂ, ಉತ್ತರದಿಗ್ವಿಜಯ ಪ್ರಸಂಗದಿಂ ಬಂದು ವಿಜಯಸಮುದ್ರಾಪರನಾಮಧೇಯಮಪ್ಪ ಹಳ್ಳವೂರ ನೆಲೆವೀಡಿನೊಳ್ ಸುಖಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯ್ಯುತ್ತುಮಿರೆ ; ಸ್ವಸ್ತಿ ಸಮಸ್ತ ಭುವನ ರಾಜ ರಾಜಿ ವಿರಾಜಿತ ಚೂಡಾಮಣಿ ಮರೀಚಿ ಮಂಜರೀ ರಂಜಿತ ಚರಣ ನಳಿನ ಶ್ರೀಮದಮೃತೇಶ್ವರ ದೇವ ಲಬ್ಧ ವರಪ್ರಸಾದನುಂ ಅನವರತ ಪಾತ್ರದಾನ ವಿನೋದನುಂ, ಯಾದವಾನ್ವಯ ಗಗನ ಗಭಸ್ತಿ ಮಾಳಿ ನಿಶ್ಶಂಕಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ರಾಜ್ಯಾಭ್ಯುದಯ ಕರಣಕಾರಣನುಂ ವಿಜಯಗೋಮಿನೀ ಮಂಗಳಾಯತನ ರತ್ನತೋರಣ ನುಂ, ಚತುರ್ಥಕುಳಕುಮುದಿನೀ ಶರಚ್ಚಂದ್ರ ಚಂದ್ರಿಕೋಪಮಾನಮಾನಾ ನೂನ ಸರ್ವಲಕ್ಷಣಸಂಪೂರ್ಣ ಸುಗ್ಗಾಂಬಿಕಾ ಗರ್ಭದುಗ್ಧಾರ್ಣವ ಪಾರಿ ಜಾತನುಂ ಸೌಂದರ್ಯ ವಿಜಿತ ಚೇತೋಜಾತನುಂ, ವೀರವೈರಿಧಾರಿಣೀ ನಾಥ ಹಸ್ತ್ಯಶ್ವ ರಥ ಪದಾತಿಸಂಘಾತನಿರ್ಘಾತಪಟಿಷ್ಠ ನಿಷ್ಠುರ ಕೃಪಾಣ ಕುಳಿಶ ದಂಡಮಂಡಿತ ಭುಜಾಮಂಡಳನುಂ ವೀರಲಕ್ಷ್ಮೀಪ್ರಸಾದನೋಪ ಚಿತ ಕರ್ಣಕುಂಡಳನುಂ, ಸಂಧಿ ವಿಗ್ರಹ ಯಾನಾಸನ ಸಂಶ್ರೇಯದ್ವೈಧೀ ಭಾವ ಭಾವಿತ ಪ್ರಯೋಗ ನಿಪುಣ ಮಂತ್ರಿ ಮಂಡಳ ನಿತ್ಯಾವಲೋಕ ರತ್ನ ದರ್ಪಣನುಂ ಪರಿವಾರನಿವಹ ಚಿತ್ತಸಂತರ್ಪಣನುಂ, ವಿದ್ಯುದ್ದಂಡ ನರ್ತ ನಾನುಸಾರಿ ಸ್ವೈರ ಚಾರ ಶೂಕಳ ತುರಂಗಮಾರೂಢ ಪ್ರೌಢ ದಂಡಾಂಕ ಶಬ್ದ ಶಿಕ್ಷೋಪಜಾತ ರೇಫರೇಖಾ ವಿಳಾಸವತ್ಸರಾಜನುಂ ಶಸ್ತ್ರಶ್ರಮಾ ಚಾರ್ಯ ಭಾರದ್ವಾಜನುಂ, ಕಲಿದೇವ ಮಸಣಿದೇವ ಬಸವರಾಜ ಪ್ರಸಿದ್ಧ ಸೋದರ ತ್ರಿತಯ ಶಾಖಾನುಬಂಧ ಬಂಧುಜನಫಳಪ್ರದಾಯಕ ಕಳ್ಪವೃಕ್ಷ ನುಂ ಶರಣಾಗತಮಂಡಳಿಕ ರಕ್ಷಾದಕ್ಷನುಂ, ಸತ್ಯತ್ಯಾಗ ವಿಕ್ರಮ ಕ್ರೀಡಾನವೀನ ರಾಧೇಯನುಂ ಶೌಚಗಾಂಗೇಯನುಂ, ಸ್ವಾಮಿದ್ರೋಹ ಮೋಹಾಂಧಕಾರಸಂಹಾರ ಸಹಸ್ರಕಿರಣನುಂ ಯಾದವ ಕಟಕ ರತ್ನಾಭರ ಣನುಂ, ದಂಡನಾಥಮೌಳಿ ಮಾಣಿಕ್ಯನುಂ . . . ಸಕಳಜನಾರಾಧನುಂ ಎನಿಸಿ ಮಹಿಮೆಗಾಸ್ಪದಮಾದಮೃತೇಶ್ವರ ದಂಡನಾಯಕನ್ ಕಗ್ಗಿಯ ವೃತ್ತಿಯೊಳಗಣಮೃತಸಮುದ್ರದೊಳ್ ಶ್ರೀಮದಮೃತೇಶ್ವರ ದೇವರಂ ಸುಪ್ರತಿಷ್ಠಿತಂ ಮಾಡಿ, ಶಕವರ್ಷಂ ೧೧೧೯ನೆಯ ಪಿಂಗಳ ಸಂವತ್ಸರದ ಪುಷ್ಯ ಬಹುಳ ಸಪ್ತಮಿ ಸೋಮವಾರದುತ್ತರಾಯಣ ಸಂಕ್ರಮಣದಂದು

ಶ್ರೀಮದ್ ವಜ್ರೇಶ್ವರ ದೇವರ ಸಂನಿಧಾನದೊಳ್, ಪಾದಪೂಜಾಪುರಸ್ಸರಂ, ಶ್ರೀಮತ್ ಪ್ರತಾಪಚಕ್ರವರ್ತಿ ವೀರಬಲ್ಲಾಳದೇವರ ಶ್ರೀಹಸ್ತದಿಂ ಧಾರಾಪೂರ್ವಕಂ ಪಡೆದು, ತನ್ನ ಮಾಡಿಸಿದಮೃತೇಶ್ವರ ದೇವರ ಅಂಗಭೋಗರಂಗಭೋಗಕ್ಕಂ, ಚೈತ್ರಪವಿತ್ರಾರೋಪಣಕ್ಕಣಂ, ದೇವರ ಪೂಜಾರಿಗ ಪರಿಚಾರಕರ್ಗಂ, ಬ್ರಾಹ್ಮಣರಾಹಾರದಾನಕ್ಕಂ, ಖಂಡ ಸ್ಫುಟಿತ ಜೀರ್ಣೋದ್ಧಾರಕ್ಕಮಾಗಿ, ಆಸಂದಿನಾಡೊಳಗಣಗ್ರಹಾರ ಹುಣಿಸೆಯ ಕಟ್ಟವಂ ಸರ್ವ ನಮಸ್ಯವಾಗಿ ಕೊಟ್ಟ ದತ್ತಿ . . . .

ಪ್ರಿಯದಿಂದಿಂತಿದನೆಯ್ದೆ ಕಾವ ಮನುಜಂಗಾಯುಂ ಜಯಶ್ರೀಯುಮು ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರಂಗಳೊಳ್ ವಾರಣಾ ಶಿಯೊಳೆಕ್ಕೋಟಿಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂ ದಯಶಂ ಪೊರ್ದುಗುಮೆಂದು ಸಾಱಿದಪುವೀ ಶೈಲಾಕ್ಷರಂ ಧಾತ್ರಿಯೊಳ್''

ಈ ಶಾಸನವೂ ಕಂದ ವೃತ್ತ ವಚನಗಳನ್ನು ಒಳಗೊಂಡು ಚಂಪೂ ಶೈಲಿಯಲ್ಲಿದೆ. ಇದರಲ್ಲಿ ೧೨೦ಕ್ಕೆ ಮೇಲ್ಪಟ್ಟು ಉದ್ದ ಸಾಲುಗಳಿವೆ. ಮೇಲೆ ಎತ್ತಿಕೊಟ್ಟಿರುವ ಭಾಗ ಶಾಸನದ ಸುಮಾರು ೧೫ ಸಾಲು ಗಳಾಗುತ್ತವೆ. ಉಳಿದ ಭಾಗದ ಮುಕ್ಕಾಲು ಮೂರುವೀಸ ಪಾಲೆಲ್ಲಾ ಹೊಯ್ಸಳವಂಶವರ್ಣನೆ ಮತ್ತು ಅಮೃತೇಶ್ವರ ದಂಡನಾಯಕನ ವಂಶ ವರ್ಣನೆ.

ಮೇಲೆಯೇ ಹೇಳಿದಂತೆ ಈ ಶಾಸನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ದೊರೆಯ ಮತ್ತು ದೊರೆಮನೆತನದ ವರ್ಣನೆಯೂ, ಉಳಿದದ್ದರಲ್ಲಿ ಅರ್ಧಕ್ಕಿಂತ ಹೆಚ್ಚಾಗಿ ದಾತನ ಮತ್ತು ಅವನ ಮನೆತನದ ವರ್ಣನೆಯೂ ತುಂಬಿಕೊಂಡಿವೆ. ವೀರಬಲ್ಲಾಳನ ಮನೆತನ ಹೇಳಬೇಕಾದರೆ ಚೆನ್ನ ರಾಯಪಟ್ಟಣದ ಶಾಸನದಲ್ಲಿ

'' ಉದಯಿಸಿದಂ ಗದಾಧರನ ನಾಭಿಸರೋಜದಿನಬ್ಜಜಂ, ಚತುರ್
ವದನನಿನತ್ರಿ, ಅತ್ರಿಮುನಿಯಿಂ ಶಶಿ, ಸೋಮನಿನಾ ಪುರೂರವಂ,
ವಿದಿತಪುರೂರವಃ ಪ್ರವರನಿಂ ನಹುಷಂ, ನಹುಷಾಂಕನಿಂ ಯಯಾ
ತಿ ದಲ್, ಅವನಿಂ ಯದುಕ್ಷಿತಿಭುಜಂ, ಯದುವಿಂ ಗಡ ಯಾದವಾನ್ವಯಂ

ಅಂತು ನೆಗಪ್ತೆಯಂ ತಳೆದ ಯಾದವವಂಶದೊಳತ್ಯುದುಗ್ರವಿ
ಕ್ರಾಂತ ಭುಜಾಬಳಂ ಪೆಸರ್ಗೆ ಸಂದ ಸಳಂ ಪೊಸವೂರ್ಗೆ ವಂದು ವಾ
ಸಂತಿಕೆಯಂ ಸಮರ್ಚಿಪೆಡೆಯೊಳ್ ಪುಲಿ ಪಾಯೆ ಮುನೀಂದ್ರನಿರ್ದು ನಿಃ
ಚಿಂತದೆ ಪೊಯ್'ಸಳೆಂದನೆನೆ ಪೊಯ್ದುದುವಾದುದು ಪೊಯ್ಸಳಾನ್ವಯಂ''

ಎಂದೋ ; ಇಲ್ಲವೆ ತರಿಕೆರೆಯ ಶಾಸನದಲ್ಲಿ

''ಆ ನಿಶ್ಶಂಕಪ್ರತಾಪಚಕ್ರವರ್ತಿಯನ್ವಯಾವತಾರಮದೆಂತೆಂದೊ
ಡಮೃತದಮೃತಕರನ ಕಮಳೆಯ ಕೌಸ್ತುಭದ ಪಾರಿಜಾತದೈರಾವತ
ದುಚ್ಚೈಶ್ರವದಚ್ಚರಸೆಯರ ಸಂಭೂತಿಯಿಂ ಖ್ಯಾತಿಗಾಕರವಾದ ಪೀಯೂಷ
ರತ್ನಾಕರದ ನಡುವೆ

ಸಿರಿಯಂ ಕೌಸ್ತುಭರತ್ನಮಂ ಹರಿಯನಂತಾ ಶಂಖಮಂ ಚಕ್ರಮಂ
ಭರದಿಂ ಪೇೞ್ ಬಹಿತ್ರದಂತಿರೆಸೆದಿರ್ದಂ ಶೇಷನಾ ಕ್ಷೀರಸಾ
ಗರದೊಳ್ ದೇವನ ನಾಭಿಪದ್ಮದ ಮೃಣಾಳಂ ಕೂವಕಂಬೊಲ
ಚ್ಚರಿಯಾಗಿರ್ದುದು ಕರ್ಣಧಾರನವೊಲಿರ್ದಂ ಪುಟ್ಟಿ ಪದ್ಮೋದ್ಭವಂ

ಪರಮಬ್ರಹ್ಮನ ಚಿತ್ತದೊಳ್ ಮುನಿಗಳೇೞ್ವರ್‌ಪುಟ್ಟಿದರ್ ತನ್‌ಮುನೀ
ಶ್ವರರೊಳ್ ಪೆಂಪೆಸೆವತ್ರಿ ಪದ್ಮದಲರೊಳ್ ಪದ್ಮೋದರಂ ಪದ್ಮ ವಿ
ಷ್ಟರನಂ ಪುಟ್ಟಿಸಿತರ್ಕೆ ಮಚ್ಚರಿಪವೋಲ್ ಕಣ್‌ನೆಯ್ದಲಿಂದಂ ಸುಧಾ
ಕರನಂ ಪುಟ್ಟಿಸಿದಂ ಪವಿತ್ರಮುದಯಸ್ಥಾನಂ ಮಹಾಭಾಗದೊಳ್

ಇಂದುವಿಳೋಚನೋತ್ಸವದಿನಿಂದು ಮನೋಜಸಹಾಯವೃತ್ತಿಯಿಂ
ದಿಂದುಕಳಾಳಿಯಿಂ ಮೆಱೆವನೆಂದು ನೃಸಿಂಹ ನೃಪಾಳಸೂನು ತಾ
ನಿಂದುವಿಳೋಚನೋತ್ಸವದಿನಿಂದು ಮನೋಜ ಸಹಾಯವೃತ್ತಿಯಿಂ
ದಿಂದುಕಳಾಳಿಯಿಂ ಮೆಱೆವುತಿರ್ದಪನಿಂದುಕುಳಪ್ರದೀಪಕಂ

ಆ ರಾಜನ ಪುತ್ರಂ ಮದ
ವಾರಣ ವಿದ್ಯಾ ವಿಳಾಸದಿಂ ಬುಧನೆಂಬಂ
ಧಾರಿಣಿಯೊಳ್ ನೆಗಳ್ದಂ ದ್ವಿರ
ದಾರೋಹಕ ಚಕ್ರವರ್ತಿ ಬಲ್ಲಾಳನವೊಲ್

ಆತನ ಮಗಂ ಪುರೂರವ
ನಾತಂಗಂ ದೇವಲೋಕದೂರ್ವಸಿಗಂ ವಿ
ಖ್ಯಾತನುದಯಿಸಿದನುಪಮಾ
ತೀತ ಬಳಕಾಯುಃವಾಯುವೆಂಬ ನೃಪೇಂದ್ರಂ

ಅವನ ಮಗಂ ನಹುಷಂ ಮ
ತ್ತವನ ತನೂಜಂ ಯಯಾತಿ ತದ್ವಿಧರುರ್ವೀ
ಧವರಾಗೆ ಬಳಿಕೆ ಪಲರು
ದ್ಭವಿಸಿದರಾ ಸೋಮವಂಶದೊಳ್ ಯದುವೆಂಬಂ

ಆಯದುದಗ್ರತೆ ಮಿಗೆ ನೆಗ
ಟ್ದಾ ಯದುವಿಂ ಯಾದವಾಭಿಧಾನಂ ಸೋಮಾ
ಮ್ನಾಯಕ್ಕೆ ರೂಢಿವಡೆದ
ತ್ತಾ ಯಾದವರೊಳಗೆ ನೆಗಟ್ದನಸಹಾಯಬಳಂ

ಸಳನೆಂಬಂ ಶಶಕ ಪ್ರಸಿದ್ಧ ಪುರದೊಳ್ ವಾಸಂತಿಕಾದೇವಿಯಂ
ತಳೆದಾರಾಧಿಸುವಾಗಳುತ್ತರಳನೇತ್ರಂ ಘೋರವಕ್ತ್ರಂ ವಿಶ್ರಂ
ಖಳಗಾತ್ರಂ ಪುಲಿ ಪಾಯೆ ಕಂಡು ಮುನಿನಾಥಂ ಕುಂಚಮಂ ಕೊಟ್ಟು ಪೊಯ್
ಸಳಯೆಂದಂ ಬಳಿಕಾಯ್ತು ಪೊಯ್ಸಳ ವೆಸರ್ ತಾಂ ಯಾದವೋರ್ವೀಶರೊಳ್

ಅಲಗಿಂ ಸಿಂಗಮನಿಱದನ
ಕಲಿತನಮಂ ನಗುವ ತೆಱದೆ ಮೆಱೆವುದು ಸೆಳೆಯಿಂ
ಪುಲವೊಯ್ದ ಕುಱುಪು ಪೊಯ್ಸಳ
ಕುಲತಿಲಕನ ಮತ್ತಗಜದ ಟಕೆಯದೊಳೀಗಳ್ ''

ಎಂದೋ ಆದಿ ಬ್ರಹ್ಮಸೃಷ್ಟಿಯಿಂದ ಮೊದಲು ಮಾಡಬೇಕು. ಕೊನೆಗೆ, ' ಆಚಂದ್ರಾರ್ಕತಾರಂ ಸಲುತ್ತುಮಿರ್ಕೆ ' ಎಂದು ವಿಶ್ರಾಂತ ಮಹಾಪ್ರಳಯದವರೆಗೆ ಮುನ್ನೋಟ ಬೀರಿ ಮುಡಿವು ಮಾಡಬೇಕು. ಹೇಳುವುದಕ್ಕೆ ಹೊರಟಿರುವುದು ಚರಿತ್ರೆಯ ವಾಸ್ತವಿಕ ವಿಷಯ. ಹೇಳುವ ಧಾಟಿ : ' ಮಾಳವ ಚೇರ ಕೇರಳ ನೊಳಂಬ ಕದಂಬ ಕಳಿಂಗ ವಂಗ ಬಂಗಾಳ ವರಾಳ ಚೋಳ ಖಸ ಬರ್ಬರ ಒಡ್ಡಹರಾದಿ ವೈರಿ ಭೂಪಾಳರ ಮೂಳೆಯಂ ಮುಱಿದ ಮುಂಡಿಗೆಯೊಳ್ ಸೆಱಗೆಯ್ದು ವೀರ ಶಾರ್ದೂಳಮನೊತ್ತಿ ಬಿಟ್ಟಣಕದಗ್ಗದ ಮೆಯ್ಗಲಿ ವಿಷ್ಣುವರ್ಧನಂ ' ಎಂದು.

ಯಾವ ಮೂಲೆಯೂರಿನಲ್ಲಾದರೂ ಯಾರಿಗಾದರೂ ಮೂರು ಮಕ್ಕಳಾದರೆಂದರೆ ' ಪುರುಷಾರ್ಥ ತ್ರಿತಯಂ ಸಹೋದರತೆಯಂ ತಾಳ್ದಿತ್ತು, ವೇದತ್ರಯಾಚರಣಂ ಪೆಂಪಳವಟ್ಟ ಗಂಡವರಿಜಂ ಕೈಕೊಂಡುದು ' ಎಂಬಂತೆಯೇ ವರ್ಣಿಸಬೇಕು. ಇಲ್ಲದಿದ್ದರೆ, ಕವಿತೆ ಆಗುವುದಿಲ್ಲ.

---

# ಯಶೋಧರ ಚರಿತೆಯ ಟಿಪ್ಪಣಿ

೧. ಪು. ೪, ಪ. ೧೭ : "ಗಮನಪ್ರಾಯಶ್ಚಿತ್ತ ನಿಮಿತ್ತಂ" ಜೈನ ಯತಿ ನಡೆಯುವಾಗ ತನ್ನ ಹೆಜ್ಜೆಗೆ ಯಾವ ಜೀವವೂ ಸಿಕ್ಕಿ ಹಿಂಸೆ ನಡೆಯಬಾರದು. ಇದಕ್ಕಾಗಿ ನೆಲದ ಮೇಲೆ ೩॥ ಗಜ ದೂರದಲ್ಲಿ ಅವನ ಕಣ್ಣು ನಟ್ಟಿರಬೇಕು. ಹೀಗೆ ನಡೆಯುವಾಗ ಏನಾದರೂ ಪ್ರಾಣಿಹಿಂಸೆ ನಡೆಯಲಿ ನಡೆಯದಿರಲಿ, ಸಂದೇಹ ಪರಿಹಾರಕ್ಕಾಗಿ ಅವನು ತನ್ನ ಗಮನಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಇದಕ್ಕೆ "ಗಮನ ಪ್ರಾಯಶ್ಚಿತ್ತ" ವೆಂದು ಹೆಸರು.

೨. ಪು. ೧೪, ಪ. ೧೬ : **ಚಿತ್ರಂ ಅಪಾತ್ರೇ ರಮತೇ ನಾರೀ**
ವಿಚಿತ್ರ ! ಅಯೋಗ್ಯನಲ್ಲಿ ಹೆಂಗಸು ರಮಿಸುತ್ತಾಳೆ.

೩. ಪು. ೩೩, ಪ. ೫೭. **ಶುಚಿಃ ಅಜರಜಸಿ ಭವೇತ್ ಮಾಸ್ ಪಚನೇ ಶ್ವಸ್ಪೃಷ್ಟ ದೋಷ್ಃ**
ಮಾಂಸ ಪಚನ ಮಾಡುವಲ್ಲಿ ನಾಯಿ ಮುಟ್ಟಿದ ದೋಷ ಆಡಿನ ರಜಸ್ಸಿನಿಂದ ಶುದ್ಧಿಯಾಗುತ್ತದೆ.

೪. ಪು. ೪೫, ಪ. ೩೬ : **ಕಿಂ ಮಿತ್ರಂ ? ಯತ್ ನಿವರ್ತಯತಿ ಪಾಪಾತ್**
ಮಿತ್ರ ಯಾರು ? ಪಾಪದಿಂದ ಯಾರು ತಿರುಗಿಸುತ್ತಾನೋ ಅವನು.

೫. ಪು. ೪೫, ಪ. ೩೮ : **ದುರ್ಬಲಸ್ಯ ಬಲಃ ರಾಜಾ**
ದುರ್ಬಲರಿಗೆ ಬಲ ದೊರೆ.

೬. ಪು. ೪೬, ಪ. ೪೨; **ಸಂಸ್ಕಾರ ಶತೇನ ಅಪಿ ನ ಗೂಥಃ ಕುಂಕುಮಾಯತೇ**
ಸಂಸ್ಕಾರಗಳು ನೂರು ಆದರೂ ಅಮೇಧ್ಯ ಕುಂಕುಮ (ಕೇಸರಿ) ಆಗುವುದಿಲ್ಲ.

೭. ಪು. ೪೯, ಪ. ೫೬: **ಯಥಾ ರಾಜಾ ತಥಾ ಪ್ರಜಾ**
ರಾಜನಂತೆ ಪ್ರಜೆ.



# ಶಬ್ದಕೋಶ

[ಆಯಾ ಮಾತು ಮೊದಲ ಸಲ ಬರುವ ಸಂದರ್ಭವನ್ನು ಮಾತ್ರ ಸೂಚಿಸಿದೆ]

## ಅ

| | | |
|---|---|---|
| ಅಘ | III ೩೨ | ಪಾಪ |
| ಅಘಜಲಧಿ | IV ೧೯ | ಪಾಪ (ವೆಂಬ) ಸಮುದ್ರ |
| ಅಘಧ್ವಾಂತ+ಓಘ +ಮಧುಪ ಮಾಲಿಕೆ | I ೪೦ | ಪಾಪವೆಂಬ ಕತ್ತಲೆಯ ಗುಂಪು ಎಂಬ ದುಂಬಿಸಾಲು |
| ಅಂಗಚ್ಛವಿ | III ೩೪ | ಮೈಕಾಂತಿ, ಹೊಗರು |
| ಅಂಗಿ | IV ೯ | ಅಂಗಗಳುಳ್ಳವನು, ದೇಹಿ |
| ಅಚ್ಛದ | IV ೭ | ಅಚ್ಚಟ್ಟ ? |
| ಅಜಗರ್ಭಿಣಿ | III ೫೩ | ಬಸಿರಾದ ಆಡು |
| ಅಜಪೋತ | III ೫೯ | ಆಡಿನ ಮರಿ |
| ಅಜೆ | III ೫೨ | ಹೆಣ್ಣಾಡು |
| ಅಟ್ಟಿಸು | III ೬೭ | ಕಳಿಸು |
| ಅಟ್ಟೆ | III ೨೩ | ತಲೆಯಿಲ್ಲದ ಮೈ |
| ಅಡಗು | I ೧೦ | ಬಾಡು, ಮಾಂಸ |
| ಅಡಸು | III ೧೦ | (ಮೇಲೆ, ಮುಂದೆ) ಒಂದು ಅಮರಿಕೊ |
| ಅಡಿಸು | III ೪೮ | ಅಡಿಗೆ ಮಾಡಿಸು, ಬೇಯಿಸು |
| ಅಡೆಯೊತ್ತು | IV ೧೩ | ಅಡಚು, ಗಿಡುಗು |
| ಅಣಕ | II ೪೯ | ಆಟ, ಸೋಗು |
| ಅಣಂ | IV ೨೨ | ಕೊಂಚವೂ |
| ಅಣುವ್ರತ | IV ೨೩ | ಜೈನ ಗೃಹಸ್ಥರು ಕೈಕೊಳ್ಳುವ ಸುಲಭವ್ರತ |
| ಅಣ್ಮು | II ೩೩ | ಸಾಹಸ, ಪ್ರಯತ್ನ-ಮಾಡು |
| ಅನಂಗನ ಕೃತಿ | II ೪೩ | ಕಾಮಚೇಷ್ಟೆ |
| ಅನಂತ ಪ್ರಬೋಧ ದರ್ಶನ ಸೌಖ್ಯನ | IV ೨೭ | ಅನಂತವಾದ, ಕೇವಲವಾದ-ಜ್ಞಾನ, ದರ್ಶನ (ದೃಷ್ಟಿ), ಸೌಖ್ಯ ಉಳ್ಳವನು |
| ಅನುಜ | IV ೫೦ | ತಮ್ಮ |
| ಅನುಜೆ | IV ೫೭ | ತಂಗಿ |
| ಅಬ್ಬೆ | I ೩೦ | ಅಮ್ಮ (ಇಲ್ಲಿ: ಮಾರಿ) |
| ಅಭಿಧಾನ | IV ೩೧ | ಹೆಸರು |
| ಅಭ್ರಗಜ | II ೧೧ | ಐರಾವತ |
| ಅಭ್ರಮು | II ೧೧ | ಐರಾವತದ ಹೆಂಡತಿ |

| | | |
|---|---|---|
| ಅಮರ್ | IV ೬೯ | ಸೇರಿಬರು, ಒಪ್ಪು |
| ಅಮಳದೃಷ್ಟಿ | I ೪ | ನಿರ್ಮಲ, ಪರಿಶುದ್ಧ-ಜ್ಞಾನ |
| ಅಮಳ್ಗಳ್ | IV ೩೧ | ಜತೆ, ಎರಡು |
| ಅಮೋಘ | III ೨೬ | ತಪ್ಪದ, ವ್ಯರ್ಥವಾಗದ |
| ಅಂಬರತರಂಗಿಣೀ | II ೧೧ | ಆಕಾಶ ನದಿ, ಗಂಗೆ |
| ಅಂಬಾಚರಿ | III ೪೦ | ಹಿಂದಿನ ಜನ್ಮದಲ್ಲಿ ತಾಯಾಗಿದ್ದವಳು |
| ಅಂಬಿಕೆ | III ೧೪ | ತಾಯಿ |
| ಅಂಬುಜ | IV ೪೪ | ತಾವರೆ |
| ಅರಿ | III ೬೮ | ಕತ್ತರಿಸು, ಕೊಯ್ಯು |
| ಅಱಸು | I ೧೬ | ಹುಡುಕು |
| ಅಱಿ | II ೧೮ | ತಿಳಿ |
| ಅಱಿಕೆ | I ೧೬ | ತಿಳಿವಳಿಕೆ, ಅರಿವು, ಜ್ಞಾನ |
| ಅಱುನೀರ್ | III ೫ | ಬತ್ತಿದ ನೀರು |
| ಅರ್ಕಾಡು | IV ೨೪ | ನಾಶವಾಗು (ಅದ್ಕಾಡು—ಜೀರ್ಣವಾಗು) |
| ಅರ್ತಿ (ಅಱ್ತಿ) | I ೩೪ | ಪ್ರೀತಿ |
| ಅರ್ದಳೊ | III ೬೨ | ಅದ್ದಿ, ಮುಳುಗಿ, ಸತ್ತು-ಹೋದಳೊ (ಧಾತು : ಅದ್) |
| ಅಲಂಘನೀಯ | III ೧೫ | ದಾಟ, ಮೀರ-ಬಾರದು |
| ಅಲಂಪು | II ೪೮ | ಸಂಭ್ರಮ, ಪ್ರೀತಿ, ಮುದ |
| ಅಲರ್ | IV ೨ | ಅರಳು, ವಿಕಾಸವಾಗು |
| ಅಲರ್ವೋಗು | I ೧೦ | ಹೂಬಿಡು |
| ಅಲವಱಲ್ | IV ೨೨ | ಹಂಬಲು, ಪೇಚಾಟ |
| ಅಲಸು | III ೫೪ | ಆಯಾಸ, ಆಸರು-ಪಡು |
| ಅವಧಾರಿಸು | IV ೮ | ಗಮನಕೊಡು |
| ಅವಧಿ | IV ೮ | ಒಂದು ಬಗೆಯ ದಿವ್ಯಜ್ಞಾನ (ಇಂದ್ರಿಯಗಳ ಸಾಧನವಿಲ್ಲದೆಯೆ ತಿಳಿಯಲಾಗುವ, ಆದರೆ, ಕೆಲವು ಅವಧಿ ಅಥವಾ ಮಿತಿಗಳುಳ್ಳ ಜ್ಞಾನ) |
| ಅವಱ | I ೨೯ | (ನಪುಂಸಕ ಬಹುವಚನ) ಅವುಗಳ (ಅದಱ-ಅದರ) |
| ಅವಿಕಲ್ಪಂ | IV ೮ | ವಿಕಲ್ಪವಿಲ್ಲದೆ, ಎರಡಿಲ್ಲದೆ, ನಿಶ್ಚಯವಾಗಿ |
| ಅಸಿಯಳ್ | II ೧೮ | (ಕೋಮಲವಾದ)ತೆಳು ಹೆಣ್ಣು, ಕೃಶಾಂಗಿ |
| ಅಸುಕೆ | I ೯ | ಅಶೋಕ |
| ಅಳವು | I ೧೮ | ಶಕ್ತಿ, ಸಾಮರ್ಥ್ಯ |
| ಅಳಿಪು | II ೩೮ | ಆಸೆ, ಪ್ರೀತಿ |
| ಅಳುರ್ಕೆ | II ೫೨ | ಹೆಚ್ಚಿಗೆ |
| ಅಳ್ಕು | IV ೬೭ | ಹೆದರು |
| ಅೞಲಿಸು | I ೩೮ | ನೋಯಿಸು, ವ್ಯಥೆಪಡಿಸು |
| ಅೞಿ | III ೪೨, IV ೨೪ | ಸಾಯಿ, ಸಾಯಿಸು |
| ಅೞಿಗಣ್ | II ೨೦ | ವಿಕಾರವಾದ ಕಣ್ಣು |
| ಅೞ್ಕಱ್ | II ೫೨ | ಅಕ್ಕರೆ, ಪ್ರೀತಿ |
| ಅೞ್ದಳ್ | IV ೪೭ | ಅದ್ದಿ, ಮುಳುಗಿ-ಹೋದಳು (ಧಾತು : ಅದ್) |

## ಆ

| | | |
|---|---|---|
| ಆಗ | III ೧೧ | ಆಗದು, ಕೂಡದು, ಬೇಡ |
| ಆಗಮ | IV ೨೧ | ವೇದದಂತೆಯೇ ಪೂರ್ವದಿಂದ ಬಂದ ಪವಿತ್ರ ಗ್ರಂಥ, ಶಾಸ್ತ್ರ |
| ಆತೋದ್ಯ | II ೪೬ | ವಾದ್ಯ |
| ಆಂದೆಯ | IV ೭ | ಒಂದು ಬಗೆಯ ಗೂಬೆ, ಹಾಲವಕ್ಕಿ |
| ಆಂದೋಳಮಾನಾಡು | III ೨೦ | ತೂಗಾಡು, ಹೊಯ್ದಾಡು |
| ಆಪ್ರೊತ್ತುಂ | I ೭ | ಯಾವಾಗಲೂ |
| ಆಪೋಶಿಪಲ್ಲಿ | III ೪೯ | (ಊಟಕ್ಕೆ ಮೊದಲು ಅಥವಾ) ಊಟದ ಕೊನೆಯಲ್ಲಿ ಅಂಗೈಯಲ್ಲಿ ನೀರು ತೆಗೆದು ಕುಡಿಯುವಾಗ |
| ಆಮಿಷ | II ೮ | ಆಸೆ, ಭೋಗ |
| ಆಮುತ್ರಿಕ | IV ೨೩ | ಪರಲೋಕ, ಮೋಕ್ಷ |
| ಆಮೂಲ ಚೂಲ | I ೩೮ | ಬುಡದಿಂದ ತುದಿವರೆಗೆ, ಸಂಪೂರ್ಣವಾಗಿ |
| ಆಯತಿ | IV ೩೫ | ಬಲ, ಶಕ್ತಿ |
| ಆರ್ | III ೭೫ | ಕೂಗು |
| ಆರೋಗಿಸು | III ೨೯ | ಆರೋಗಿಸು, ಊಟಮಾಡು |
| ಆವಹನ | III ೫೯ | ಆವಾಹನ, ಬರಮಾಡಿಕೊಳ್ಳುವುದು; (ನೆನಪನ್ನು) ಎಬ್ಬಿಸುವುದು, ಉಂಟು ಮಾಡುವುದು |
| ಆವೀಕ್ಷಿತಘೃತನ್ | II ೪೭ | ತುಪ್ಪನೋಡಿ(ದವನು) |
| ಆಸನ್ನಭವ್ಯ | IV ೮ | ಜೈನಧರ್ಮಸ್ವೀಕಾರಕ್ಕೆ ಯೋಗ್ಯತೆಬಂದವನು (-ಹೆಚ್ಚುಕಾಲ ಕಾಯಬೇಕಾಗಿಲ್ಲದವನು) |
| ಆಸ್ಪೃಷ್ಟಕಪಿಳನ್ | II ೪೭ | ಹಸುಮುಟ್ಟಿ(ದವನು) |
| ಆಸ್ಯ | II ೮ | ಮುಖ |
| ಆಸ್ರವ | III ೧೯ | ಕರ್ಮ (ಜೀವದೊಳಕ್ಕೆ) ಹರಿದು ಬರುವುದು, ಒಳಸೇರಿಕೊಳ್ಳುವುದು |

## ಇ

| | | |
|---|---|---|
| ಇನಿತು | IV ೬೧ | ಇಷ್ಟು |
| ಇನರ್ | I ೩೩ | ಇಂಥವರು |
| ಇಂಬುಕಯ್ | I ೩೭ | ಎಡೆಮಾಡು, ಹಿಡಿ, ರುಚಿಸು |
| ಇಷಂ | I ೮ | ಆಶ್ವಯುಜ |
| ಇಳಾಕಾಂತೆ | II ೧ | ಭೂಮಿ (ಎಂಬ ಹೆಣ್ಣು) |
| ಇಳಿಕಯ್ | II ೨೪ | ಕಡಮೆಯಾಗಿತಳಿ, ಕಡೆಗಣಿಸು |
| ಇಳಿಕಯ್ಯರ್+ಆಗ | III ೧೧ | ಕಡೆಗಣಿಸಲು+ಆಗದು |

| | | |
|---|---|---|
| ಇಳಿದು | II ೨೭ | ಹಗುರವಾದ್ದು, ಬೆರೆಯುಲ್ಲದ್ದು (ವಿರುದ್ಧಪದ: ಅರಿದು) |
| ಇಟಿದೆರ್ದೆ | II ೨೦ | ಕುಗ್ಗಿ, ಅಡಗಿ- ಹೋದ ಎದೆ |

## ಈ

| | | |
|---|---|---|
| ಈಕ್ಷಣ | II ೨೩ | ಕಣ್ಣು |
| ಈ ದೊರೆಯಾನ್ | II ೧೯ | ಇಂಥವನು (ದೊರೆ=ಎಣೆ, ಸಮಾನ) |
| ಈಶಾನಕಲ್ಪ | IV ೬೯ | (ಜೈನ) ಒಂದು ಸ್ವರ್ಗ |
| ಈಡ್, ಇಡ್ | III ೪ | ಎಳೆ |

## ಉ

| | | |
|---|---|---|
| ಉಕ್ಕಡ | II ೧೨ | (ಊರಬಾಗಿಲ) ಠಾಣೆ |
| ಉಗಿ | IV ೧೧ | ಕಿತ್ತು, ತೆಗೆ |
| ಉಗು | II ೫೨ | ಉಕ್ಕಿಬರು, ಹೊರಬರು |
| ಉಚ್ಛ್ವಾಸನಿತಪ್ತಾ-ಧರರುಚಿ | II ೧೭ | ಮೇಲುಸಿರಿನಿಂದ ಬೆಂದ ತುಟಿಯ ಕಳೆಯುಳ್ಳವಳು, ತುಟಿ ಒಣಗಿದವಳು |
| ಉಡಿ | I ೨೭ | ಒಡೆ, ಮುರಿ |
| ಉಣ್ಮು | III ೨೪ | ಮೇಲೇಳು, ಹೊಮ್ಮು, ಉಂಟಾಗು |
| ಉತ್ಕರ್ಷ | I ೫ | ಮೇಲಾದ, ಹೆಚ್ಚಾದ |
| ಉದಧಿ | III ೪ | ಕಡಲು, ಸಮುದ್ರ |
| ಉದರ | III ೩೨ | ಬಸಿರು, ಹೊಟ್ಟೆ |
| ಉದ್ಗಾರವೆತ್ತು | II ೧೫ | ಅಸಹ್ಯಪಟ್ಟು, ಹೇಸಿ (ಪೆಱು=ಪಡೆ, ಹೊಂದು) |
| ಉದ್ದೀಪನ | III ೩೨ | ಕೆರಳಿಸುವುದು, ಕೆರಳಿಕೆ |
| ಉದ್ವೇಗಪರಂ | IV ೬೨ | ಚಿಂತಾಕ್ರಾಂತ, ಕಲಕಿದ ಮನಸ್ಸಿನವನು |
| ಉಂತೆ | II ೩೩ | ಹಾಗೆಯೇ, ಸುಮ್ಮನೆ |
| ಉಪಾಯನ | III ೩೭ | ಮೆಚ್ಚುಗೆ, ಕಾಣಿಕೆ(ಯಾಗಿ ಕೊಟ್ಟದ್ದು) |
| ಉಬ್ಬೆಗ | III ೨೭ | ಉದ್ವೇಗ, ತಾಪ, ಚಿಂತೆ |
| ಉಭಯ ಭವ | IV ೨೭ | ಇಹ ಪರ ಲೋಕಗಳು ಎರಡೂ |
| ಉಯ್ಯಲ್ | IV ೩ | ಉಯ್ಯಾಲೆ, ತೂಗು(ಮಣೆ) |
| ಉರಗಿ | III ೪೪ | ಹೆಣ್ಣುಹಾವು |
| ಉರ್ಕು | IV ೩೪ | ಕೆಚ್ಚು, ಪರಾಕ್ರಮ, ಪೌರುಷ |
| ಉರ್ಚು | I ೨೦ | ಕೊರದೆಗೆ, ಕಳಚು, ಕೀಳು |
| ಉರ್ವರೆ | I ೨೯ | (ಬೆಳೆ) ನೆಲ |
| ಉರ್ವೀಭರ | IV ೫೫ | ರಾಜ್ಯಭಾರ |
| ಉರ್ವೀರಮಣ | IV ೩೦ | ನೆಲದೊಡೆಯ, ದೊರೆ |
| ಉಲ | III ೨೩ | ಧ್ವನಿ |
| ಉಟಿದಿರ್ದ | III ೪೯ | ಉಳಿದಿದ್ದ, ಕುಳಿತಿದ್ದ |

## ಊ

| | | |
|---|---|---|
| ಊಳ್ | III ೫೦ | (ನಾಯಿ ನರಿ) ಕೂಗು, ಬಗುಳು |

## ಎ

| | | |
|---|---|---|
| ಎಚ್ಚನ್ | III ೫೩ | ಬಾಣಹೊಡೆದನು (ಇಸು = ಬಾಣಬಿಡು) |
| ಎಡೆವೋಗು | IV ೩೮ | ನಡುವೆಬರು, ಸಂಧಿಸು |
| ಎನ್ನನ್ | IV ೨೦ | ಎಂಥವನು |
| ಎಯ್, ಎಯ್ಯಮ್ಮಗ | III ೪೩ | ಮುಳ್ಳುಹಂದಿ |
| ಎರವಿಗೊಳ್ | II ೨೬ | ಬೇಡು, ಕೇಳು (ಧಾತು : ಎರೆ) |
| ಎಱಗು | I ೪೧ | ಬಗ್ಗು, ಮಣಿ, ನಮಸ್ಕರಿಸು |
| ಎಲುವು | IV ೧೧ | ಎಲುಬು, ಮೂಳೆ |
| ಎಸಗು | II ೪೬ | ಮೊಳಗು, ಹರಡು |
| ಎಸೆ | I ೧೦ | ಚೆನ್ನಾಗಿ ಕಾಣು, ಶೋಭಿಸು, ಒಪ್ಪು |
| ಎಸೆ | IV ೫೨ | ಬಾಣಹೊಡೆ |
| ಎಳವೆಱೆ (+ಪೆಱೆ) | I ೯ | ಎಳೆಯಚಂದ್ರ, ಬಾಲಚಂದ್ರ |
| ಎೞಲ್ | I ೨೮ | ತೂಗಾಡು, ನೇತಾಡು |
| ಎೞ್ತರ್ | III ೨೧ | ಬರು |

## ಏ

| | | |
|---|---|---|
| ಏನಂಗಳ್ | IV ೬೭ | ಪಾಪಗಳು |
| ಏಱು | III ೫೪ | ಗಾಯ, ಹುಣ್ಣು |
| ಏಱುವ | I ೨೭ | ಏರಿಸುವ |
| ಏೞ್ಗೆ | III ೭೪ | ಏಳಿಗೆ, ಅಭಿವೃದ್ಧಿ |

## ಐ

| | | |
|---|---|---|
| ಐಹಿಕ | IV ೨೩ | ಇಹಲೋಕದ್ದು, ಇಲ್ಲಿಯ ಬಾಳು |

## ಒ

| | | |
|---|---|---|
| ಒಗೆ | I ೩೫ | ಹುಟ್ಟು |
| ಒಪ್ಪತ | III ೭೧ | ಸೇರಿಕೆ, ಒಪ್ಪಿಕೆ, ನಲವು ? |
| ಒಡರಿಸು | IV ೬೬ | ಉಂಟುಮಾಡು, ಮಾಡಿಸು |
| ಒತ್ತಿನ | III ೩೪ | ಮಗ್ಗುಲಿನ |

| | | |
|---|---|---|
| ಒದವಿಸು | IV ೬೭ | (ಉಂಟು)ಮಾಡು |
| ಒಪ್ಪಂಬಡೆ | IV ೬೨ | ಬೆಳಗು, ಪ್ರಕಾಶಿಸು |
| ಒಱುವಾಯ್ | II ೨೦ | ಜೊಲ್ಲುಸೋರುವ ಬಾಯಿ |
| ಒಲವು | II ೨೫ | ಪ್ರೀತಿ, ಪ್ರಣಯ |
| ಒರೆ | III ೧ | ತೂಗಾಡು, ಆಂದೋಲವಾಡು |
| ಒಸದು | III ೫೮ | ನಲಿದು, ಹಿಗ್ಗಿ, ಸಂತೋಷಪಟ್ಟು |
| ಒಳನ್ | IV ೧೮ | ಇದ್ದಾನೆ (ಧಾತು - ಉಳ್) |
| ಒಳಱು | I ೨೯ | ಕೂಗು, ಅರಚು |
| ಒಳ್ಪು | III ೬ | ಒಳ್ಳೆಯದು |

## ಓ

| | | |
|---|---|---|
| ಓಜೆ | IV ೫೬ | ಪಾಳಿ, ಕ್ರಮ |
| ಓದು | III ೫೬ | ಹೇಳು |
| ಓಪಳ್ | III ೭೨ | ಪ್ರೀತಿಪಾತ್ರೆ, ನಲ್ಲೆ, ಪ್ರಣಯಿನಿ |
| ಓಲಗಿಸು | III ೭೪ | ಕಾಣಿಕೆಕೊಡು |
| ಓವು | III ೭೦ | ಕಾಪಾಡು, ಸಲಹು, ನೋಡಿಕೊ |

## ಕ

| | | |
|---|---|---|
| ಕಡಲ್ವರಿ | II ೧೪ | ಹೆಚ್ಚಾಗು, ಮೇರೆವರಿ |
| ಕಣ್ | IV ೨ | (ಮಲ್ಲಿಗೆಯ ಅಂಟಿನಲ್ಲಿ) ಕುಡಿ ಒಡೆಯುವ ಗೆಣ್ಣು, ಕಣ್ಣು |
| ಕತಕಬೀಜ | II ೧೩ | ಕದಡಿದ ನೀರನ್ನು ತಿಳಿಮಾಡುವ ಒಂದು ಬೀಜ, ಚಿಲ್ಲದ ಬೀಜ |
| ಕತಿಪಯ | II ೪೭ | ಕೆಲವು |
| ಕದಂಬ | IV ೬೨ | ಗುಂಪು |
| ಕನಲ್ | II ೩೫ | ಉರಿಯಾಗು, ಕೋಪಗೊಳ್ಳು |
| ಕಂತು | II ೧೮ | ಮನ್ಮಥ |
| ಕಯ್ದು | II ೫೦ | ಆಯುಧ, ಸಾಧನ |
| ಕಯ್ಪುಸೊರೆ | II ೩೭ | ಕಯ್ಪಾದ ಸೋರೆಕಾಯಿ |
| ಕರಣತತಿ | IV ೫ | ಇಂದ್ರಿಯ ಸಮೂಹ |
| ಕರವಾಳ್ | I ೩೪ | (ಕೈ) ಕತ್ತಿ |
| ಕರಿ | II ೩೬ | ಆನೆ |
| ಕರುಮಾಡ | II ೧೨ | ಉಪ್ಪರಿಗೆ ಮನೆ (ಕರು = ಬಣ್ಣ ?) |
| ಕಱುದೊವಲ್ | II ೨೧ | ಕರೆಯಾದ ಚರ್ಮ |
| ಕಲಾಪಿಸ್ತ್ರೀ | III ೩೨ | ಹೆಣ್ಣುನವಿಲು |
| ಕಳ್ | III ೭೧ | ಹೆಂಡ, ಮದ್ಯ |

| | | |
|---|---|---|
| ಕೞಲ್ | III ೭ | ಕಳಪೆ, ಹೀನ |
| ಕೞಲ್ | IV ೨೮ | ಉದುರು, ಬೀಳು |
| ಕೞಿ | III ೧೬ | ತಪ್ಪಿಸಿಕೊ, ಹೋಗಲಾಡಿಸು |
| ಕೞಿ | IV ೪೬ | ಸಾಯಿ |
| ಕೞಿಪು | II ೪೪ | ಒಸುಡತಕ್ಕದ್ದು, ಕಳಪೆ (ಕುಂದು, ದೋಷ) |
| ಕೞಿಯುಂಡು | III ೪೯ | ತೃಪ್ತಿಯಾಗಿ ತಿಂದು |
| ಕಾದಲನ್ | II ೧೯ | ನಲ್ಲ, ಪ್ರೇಮಿ |
| ಕಾರ್ | III ೮ | ಮಳೆ (ಗಾಲ) |
| ಕಾಲಲಬ್ಧಿ | I ೪೨ | ಸರಿಯಾದ, ಪಕ್ವ---ಕಾಲ ಬರುವುದು |
| ಕಾವರ್ | III ೧೬ | ಕಾಪಾಡುವವರು |
| ಕಾಷ್ಠ | IV ೧೫ | ಕಟ್ಟಿಗೆ |
| ಕಿತ್ರಡ | II ೫೧ | ಕೆಟ್ಟ ಕೆಲಸ, ಅವಹೇಳನ |
| ಕಿಱುವರೆಯ | I ೧೬ | ಎಳೆಯ ಪ್ರಾಯ |
| ಕಿಸುಗುಳ | II ೩೮ | ಹೇಯ, ಕ್ಷುದ್ರ, ನೀಚ—ವಸ್ತು |
| ಕಿಸುಗುಳಿ | III ೬೯ | ನೀಚೆ, ಅಲ್ಪಳು |
| ಕುಕ್ಕುಟ | IV ೪೮ | ಕೋಳಿ |
| ಕುಕ್ಕುರಿ | III ೩೬ | ಹೆಣ್ಣುನಾಯಿ |
| ಕುಟ್ಮಳ | II ೧ | ಮೊಗ್ಗು |
| ಕುಡಿಯನ್ | II ೩೨ | ಒಕ್ಕಲಿಗ |
| ಕುದಿರ್ | IV ೧೨ | ಹಗೇವು, ಕಣಜ |
| ಕುಸಿ | IV ೫ | ಬಗ್ಗು, ಕುಗ್ಗು, ಅಡಗಿರು |
| ಕುನ್ನಿ | IV ೩೪ | ನಾಯಿ(ಮರಿ) |
| ಕುಂದು | IV ೧೩ | ಕಡಮೆಯಾಗು |
| ಕುರಂಗ | III ೨೬ | ಜಿಂಕೆ, ಚಿಗರಿ |
| ಕುರಂಗರಿಪು | III ೪೪ | ಹುಲಿ |
| ಕುಱುಗಣ್ | II ೨೧ | (ನೀಳವಲ್ಲದ) ಸಣ್ಣ ಕಣ್ಣು (ಕುಱು = Short ; ಕಿಱು = Small) |
| ಕುಱುಪು | IV ೯ | ಗುರುತು (ಕುಱು + ಪು) |
| ಕುವಳಯ | I ೪ | ಕನ್ನೈದಿಲೆ |
| ಕುಸುರಿದಱು | I ೧೦ | ಸಣ್ಣಸಣ್ಣಗೆ ಕತ್ತರಿಸು |
| ಕುೞಿ | II ೨೧ | ಗುಳಿ, ಗುಂಡಿ |
| ಕುೞಿನೊಸಲ್ | II ೨೦ | ಗುಂಡಿಬಿದ್ದ ಹಣೆ |
| ಕೂರ್ | II ೪೪ | ಪ್ರೀತಿಸು |
| ಕೂರ್ + ಅಸಿ | II ೧೮ | ಹರಿತಕತ್ತಿ |
| ಕೂರ್ತೆ | II ೧೮ | ಪ್ರೀತಿಸಿದೆ (ಧಾತು : ಕೂರ್) |
| ಕೂರ್ಪು | III ೭೫ | ಮೊನಚು, ಹರಿತ |
| ಕೂೞ್ | I ೨೭ | ಅನ್ನ, ಆಹಾರ |
| ಕೃಕವಾಕು | III ೨೪ | ಕೋಳಿ |
| ಕೃತಕ | III ೨೫ | ಮಾಡಿದ್ದು, ಸಹಜವಲ್ಲದ್ದು |

| | | |
|---|---|---|
| ಕೃತನಿಶ್ಚಯದಾನನ್ | II ೪೭ | ಮಾಡಬೇಕಾದ ದಾನಮಾಡಿ(ದವನು) |
| ಕೃತಾಂತ | I ೨೬ | ಯಮ |
| ಕೆಮ್ಮನೆ | IV ೫೬ | ಸುಮ್ಮನೆ, ಬರಿದೆ |
| ಕೆಳರ್ | IV ೩೫ | ಕೆರಳು, ರೇಗು |
| ಕೇಕಿ | III ೩೫ | ನವಿಲು |
| ಕೇರೆ | II ೩೨ | ಕೇರೆ ಹಾವು |
| ಕೇಸರ | III ೭೫ | ಹೂವಿನ ಎಳೆ ; ಕೊರಲ ಕುಚ್ಚು, ಕೂದಲು |
| ಕೈಗುಡು | I ೨ | ನೆರವಾಗು, ಸಹಾಯಮಾಡು |
| ಕೈರವ | II ೨೯ | ನೈದಿಲೆ |
| ಕೈವೋದ | I ೯ | ಚಿಗುರಿದ ? |
| ಕೊಕ್ಕ | III ೪೪ | ಒಂದು ಹಕ್ಕಿ |
| ಕೊಂಕಿಂ | II ೪೯ | ವಕ್ರವಾಗಿ, ವ್ಯಂಗ್ಯವಾಗಿ |
| ಕೊಂಕು | II ೨೨ | ಡೊಂಕು, ಸೊಟ್ಟು |
| ಕೊಟ್ಟು | III ೭೫ | ದಾನ ಕೊಟ್ಟು : ಜುಟ್ಟು, ಶಿಖೆ |
| ಕೊಳ್‌ಕೊಳಿಸು | IV ೩೪ | ಕೊಳ್‌ಕೊಳ್ ಎಂದು ಚೂಬಿಡು |
| ಕೋಟರೆ | II ೨೫ | ಕಾಟ, ತೊಂದರೆ |
| ಕೌಕ್ಷೇಯಕ | IV ೩೫ | ಕತ್ತಿ |
| ಕೌಳೇಯಕ (ತತಿ) | IV ೩೫ | ನಾಯಿ (ಪಡೆ, ಗುಂಪು) |

## ಖ

| | | |
|---|---|---|
| ಖಗ | IV ೫೨ | ಹಕ್ಕಿ |

## ಗ

| | | |
|---|---|---|
| ಗಜವೆಡಂಗ | II ೩೪ | ಆನೆಯ-ಜಾಣ, ಸೊಬಗ |
| ಗಣೆ (ಕಣೆ) | II ೬ | ಬಾಣ |
| ಗಂಡರ್ | II ೩೪ | ಗಂಡಸರು |
| ಗರಗರಿಕೆ | II ೧೦ | ಮೆರುಗು, ಹೊಳಪು ? ಸೊಗಸು |
| ಗರಗರಿಕೆ | II ೨೩ | ಗರಗರ ಶಬ್ದ, ಗದ್ಗದ ? |
| ಗರಟಿಗೆ | II ೧೨ | (ಪೋಲೀಸಿನವನ) ಸುತ್ತು, ಗಸ್ತು, ಬೀಟು ? |
| ಗಿಡು | III ೬೬ | ಗಿಡ, ಮರ |
| ಗುಜ್ಜ | III ೪೬ | ಗೂನ |
| ಗುರುವಚನ | III ೧೫ | (ತಂದೆ, ತಾಯಿ, ಗುರು ಮೊದಲಾದ) ಹಿರಿಯರ ಮಾತು |
| ಗಡೆ | III ೬೦ | ಗಳಹು, ಹರಟು |
| ಗೆಂಟು | I ೩೬ | ದೂರ |
| | IV ೩೩ | (ಕಾಣುವಷ್ಟು) ದೂರ |

| | | |
|---|---|---|
| ಗೆತ್ತು | III ४० | (ತಪ್ಪಾಗಿ) ತಿಳಿದು, ಭ್ರಮಿಸಿ (ಧಾತು : ಗಿಱು) |
| ಗೇಹ | I ೨४ | ಮನೆ, ಆಶ್ರಯ |
| ಗೋದಾವೆ | III ೮ | (ನವಿಲಿಗೆ ಅಪ್ರಿಯವಾದ ಒಂದು ಪ್ರಾಣಿ) ? ಓತಿಕೇತ ? ಗೋದು ಮೆ ಹಾವು ? |
| ಗೋರಿಗೊಳಿಸು | II ೭ | (ಮೋಸದಿಂದ) ಎಳೆ, ಆಕರ್ಷಿಸು |

# ಘ

| | | |
|---|---|---|
| ಘೃತ | IV ೧೮ | ತುಪ್ಪ |

# ಚ

| | | |
|---|---|---|
| ಚರಣಾಯುಧ | III ೨೨ | ಕೋಳಿ |
| ಚರಣಾಯುಧವಧು | IV ४೯ | ಹೆಣ್ಣು ಕೋಳಿ |
| ಚರಮಾಂಗಪ್ರಮಿತನ್ | IV ೨೦ | ಚರಮ (ಕೊನೆಯ) ಶರೀರದ ಪ್ರಮಾಣದ (ಅಳತೆಯ) ಮುಕ್ತದೇಹವುಳ್ಳವನು |
| ಚರಿಗೆ | I ೨೦ | ಭಿಕ್ಷೆ |
| ಚರು | IV ೬४ | ಒಂದು ಬಗೆಯ ಅನ್ನದ ಹವಿಸ್ಸು |
| ಚಾಗ | I ೬ | ತ್ಯಾಗ, ಕೊಡುಗೈತನ |

# ಜ

| | | |
|---|---|---|
| ಜನಾನಂದನರ್ | IV ೬೫ | ಜನರಿಗೆ ಆನಂದಕೊಡುವವರು |
| ಜವ | I ३೧ | ಯಮ |
| ಜಾತ | IV ೬४ | ಹುಟ್ಟಿದ್ದು ; ಸಮುದಾಯ, ವರ್ಗ |
| ಜಾತಿಸ್ಮರ | III ೫೧ | ಹಿಂದಿನ ಜನ್ಮದ ಸ್ಮರಣೆಯುಳ್ಳ |
| ಜಾಯಿಲ | III ೬೫ | ಕುದುರೆ (ಒಳ್ಳೆಯ ಜಾತಿಯದು ?) |
| ಜಾಲಗಾಱ | III ४೬ | ಮೀನು ಹಿಡಿಯುವವನು, ಬೆಸ್ತ |
| ಜೀವಹತಿ | I ೭ | ಪ್ರಾಣಿವಧೆ |
| ಜೇನೆಯ್ | II ४೦ | ಜೇನುತುಪ್ಪ |

# ಠ

| | | |
|---|---|---|
| ಠಕ್ಕುಗೊಳ್ | I ३೧ | ಬೆರಗಾಗು, ದಿಗ್ಭ್ರಮೆಗೊಳ್ಳು |

# ತ

| | | |
|---|---|---|
| ತಗುಳ್ | I ೪೪ | ತೊಡಗು, ಮೊದಲುಮಾಡು |
| ತಣಿದೆರ್ದು | III ೫೮ | ತೃಪ್ತಿಹೊಂದಿ ಎದ್ದು |
| ತಣಿವು | IV ೫೪ | ತೃಪ್ತಿ |
| ತಂಡುಲ | IV ೬೪ | ಅಕ್ಕಿ |
| ತತ್ತ್ವಪರಿಣತ | IV ೫೦ | ಚೆನ್ನಾಗಿ ತತ್ತ್ವತಿಳಿದವನು |
| ತದೀಯ | IV ೪೪ | ಅವರ |
| ತದೆ | II ೩೨ | ಸದೆ, ಬಡಿ, ಚಚ್ಚು |
| ತಮ | III ೨೦ | ಕತ್ತಲೆ, ಅಜ್ಞಾನ, ಪಾಪ |
| ತಮಿಸ್ರ | I ೪ | ಕತ್ತಲೆ |
| ತರಕ್ಷು | I ೨೦ | ಹುಲಿ |
| ತಱಿಸಲ್ | IV ೫೬ | ತೀರ್ಮಾನಿಸು, ನಿಶ್ಚಯಿಸು |
| ತವರಾಜ | I ೩೫ | ಒಂದು ಬಗೆಯ ಸಕ್ಕರೆ ? |
| ತವೆ | III ೬೩ | ಸವೆಯಲು, ಕ್ಷಯಿಸಲು |
| ತಳ | I ೨೭ | ಕೈ, ಕಾಲು (ಕರತಲ, ಪದತಲ) |
| ತಳರ್ | III ೨೭ | ಹೊರಡು |
| | IV ೩೪ | ಕದಲು |
| ತಳಾಮಳಕ | I ೩೨ | ಅಂಗೈ ನೆಲ್ಲಿಕಾಯಿ (ಸ್ಪಷ್ಟವಾದ್ದಕ್ಕೆ ಉಪಮಾನ) |
| ತಳಾಱ | I ೧೬ | ತಳವಾರ, ಗ್ರಾಮಾಧಿಕಾರಿ |
| ತಳಿ | III ೬ | ಚಿಮುಕಿಸು, ಎರಚು |
| ತಳಿರ್ | IV ೩ | ಚಿಗುರು |
| ತಳ್ತು | III ೬೫ | ಸೇರಿ |
| ತಾಮ್ರಚೂಡ | III ೨೫ | ಕೋಳಿ |
| ತಾಳ್ಗೆ | I ೨೮ | ಅಂಗಳು |
| ತಿಂಗುಱು | III ೬೮ | ತಿನ್ನುವ ಕುರಿ |
| ತಿಣ್ಣಂ | I ೨೩ | ಹೆಚ್ಚಾಗಿ, ಚೆನ್ನಾಗಿ, ಬಲವಾಗಿ |
| ತಿರೋಹಿತೆ | IV ೬೫ | ಕಣ್ಣಿಗೆ ಮರೆಯಾದವಳು |
| ತಿರ್ಯಕ್ + ಗತಿ | IV ೨೪ | ಪ್ರಾಣಿ, ಪಶು–ಜನ್ಮ (ಅಡ್ಡನಡಗೆ) ? |
| ತೀವಿರು | IV ೯ | ತುಂಬಿರು |
| ತುಪ್ಪೇಱಿದ | I ೩೯ | ಜಿಡ್ಡಾದ |
| ತೆಂಕವಂಕ | I ೭ | ದಕ್ಷಿಣದ ಪಾರ್ಶ್ವ, ಕಡೆ, ಪಕ್ಕ |
| ತೆತ್ತಿಸು | I ೩೦ | ಹೊಗಿಸು, ಸೇರಿಸು, ನೆಡು |
| ತೆನೆತೀವು | III ೫೩ | ಬಸಿರು ತುಂಬು, ಬೆಳೆ |
| ತೆಂಬೆಲರ್ | IV ೨ | ತೆಂಕಣಗಾಳಿ |
| ತೆಱ | I ೬೦ | ತರ, ಬಗೆ, ರೀತಿ |
| ತೆಱಪು | II ೨೬ | ಬಿಡುಹೊತ್ತು, ಅವಕಾಶ |
| ತೊಡಂಕು | IV ೧೧ | ತೊಡಕು, ಸಿಕ್ಕು, ಬಂಧನ |
| ತೊಱೆ | III ೨೭ | ಸಂಸಾರಬಿಟ್ಟು ಸಂನ್ಯಾಸಿಯಾಗು |

| | | |
|---|---|---|
| ತೊವಲು | IV ೧೧ | ತೊಗಲು, ಚರ್ಮ |
| ತೋರ | II ೩೨ | ದಪ್ಪ, ದಟ್ಟ |

# ದ

| | | |
|---|---|---|
| ದತ್ತಾವಧಾನ | I ೪೩ | ಗಮನಕೊಟ್ಟವನು |
| ದಂತಪ್ರಭೆ | I ೪೦ | ಹಲ್ಲಿನ ಹೊಳಪು, ಕಾಂತಿ |
| ದಂತಿಪ | II ೧೪ | ಆನೆಯ ಮಾವುತ |
| ದಂದುಗ | I ೨೫ | ತೊಂದರೆ, ಕಾಟ, ಗೋಜು |
| ದರ್ಪಣ | I ೩೯ | ಕನ್ನಡಿ |
| ದವಳಾರ | III ೬೧ | ಧವಳಾಗಾರ, (ಸುಣ್ಣದ) ಬಿಳಿಯ ಮನೆ |
| ದಾವಣಿಗುಂಬು | III ೧೭ | ಹಗ್ಗ ಕಟ್ಟಿದ ಕಂಬ (ಸಾಲು) |
| ದಿವ | IV ೬೮ | ಸ್ವರ್ಗ |
| ದಿವಾಕರ | I ೧೯ | ಹಗಲುಮಾಡುವವನು, ಸೂರ್ಯ |
| ದಿವಿಜಶರಾಸನ | III ೩೬ | ಕಾಮನಬಿಲ್ಲು |
| ದೀವ | II ೭ | ಬೇಟೆಯನ್ನು ಹಿಡಿಯಲು ಸೆಳೆಯಾಗಿ ಬಳಸುವ ಪ್ರಾಣಿ |
| ದುಗ್ಧ | II ೪೦ | ಹಾಲು |
| ದುಂದುಭಿ | IV ೧೪ | ಒಂದು ಬಗೆಯ ಭೇರಿ |
| ದುರಿತ | I ೪ | ಪಾಪ |
| | III ೧೮ | ಕೇಡು, ಅಮಂಗಳ |
| ದುರ್ನಯ | III ೮ | ಕೇಡು, ಅಪಶಕುನ ? |
| ದೂದವಿ | II ೨೯ | ದೂತಿ |
| ದೇಗುಲ | I ೩೩ | ದೇವಸ್ಥಾನ, ಗುಡಿ |
| ದೇಹಿ | IV ೬೧ | ಪ್ರಾಣಿ, ಜೀವಿ |
| ದೊರೆವಡೆ | II ೩ | ಶ್ಲಾಘ್ಯವಾಗು, ಶೋಭಿಸು ? |
| ದೊರೆವೆತ್ತು | I ೧೨ | ಶ್ಲಾಘ್ಯವಾಗಿ, ಶೋಭಿಸಿ ? |
| ದೋಷಾವಹಂ | III ೧೧ | ದೋಷ, ಕೇಡು—ತರತಕ್ಕದ್ದು |

# ಧ

| | | |
|---|---|---|
| ಧರಿತ್ರೀನಾಥಪದವಿ | IV ೬೭ | ರಾಜಪದವಿ |
| ಧೃತಿ | II ೨೫ | ಧೈರ್ಯ, ತಾಳ್ಮೆ |

# ನ

| | | |
|---|---|---|
| ನಗ | III ೬೩ | ಬೆಟ್ಟ |
| ನಚ್ಚು | IV ೩೦ | ಪ್ರೀತಿ |

| | | |
|---|---|---|
| ನಂಜು | III ೩೦ | ವಿಷ |
| ನಡೆ | IV ೧೧ | ಚೆನ್ನಾಗಿ, (ನೋಡಲು, ಅರಸಲು) ? |
| ನಣ್ಪು | II ೪೫ | ಸ್ನೇಹ, ಸಂಬಂಧ, ಪ್ರೀತಿ |
| ನನೆ | II ೪ | ಹೂ ಮೊಗ್ಗು |
| ನನೆಕೊನೆ | IV ೨ | (ಮೊಗ್ಗು) ಮೂತಿ ಬಲಿ, ತುಂಬು |
| ನನೆಕೊನೆವೋಗು | III ೩ | ಚಿಗುರಿ ಮೊಗ್ಗಾಗು, ಪುಲಕಿತವಾಗು |
| ನನೆಗಣೆ | II ೬ | ಹೂ (ಮೊಗ್ಗಿನ) ಬಾಣ |
| ನಂದನಚರ | III ೪೮ | ಹಿಂದಿನ ಜನ್ಮದಲ್ಲಿ ಮಗನಾಗಿದ್ದವನು |
| ನಮೇರು | III ೨ | ಸ್ವರ್ಗದ ಒಂದು ಮರ |
| ನಯವಿದೆ | I ೨೨ | ಮಾರ್ಗತಿಳಿದವಳು |
| ನಲ್ಲರ್ | II ೨೪ | ಪ್ರೇಮಿಗಳು, ಪ್ರಣಯಿಗಳು |
| ನಲ್ಲಳ್ | III ೧೦ | ಹೆಂಡತಿ, ಹೆಂಗಸು |
| ನಾಕ | III ೫೦ | ಸ್ವರ್ಗ |
| ನಾಗ | III ೪೫ | ಹಾವು |
| ನಾಡಾಡಿ | II ೫ | ಸಾಮಾನ್ಯ |
| ನಾಡೆ | III ೧೪ | ನೋಡಲು, ಯೋಚಿಸಲು |
| ನಾಯಕನರಕ | III ೬೧ | ಮುಖ್ಯನರಕ ? |
| ನಾರಿ | II ೪ | ಬಿಲ್ಲಿನ ಹಗ್ಗ, ಹೆದೆ |
| ನಾಸಾ ಕುಟ್ಮಳ | II ೧ | ಮೂಗು ಎಂಬ ಮೊಗ್ಗು |
| ನಿಗ್ರಹ | III ೪೭ | ಪೀಡೆ, ಹಿಂಸೆ |
| ನಿಟ್ಟಿಸು | III ೩೮ | (ದೃಷ್ಟಿಸಿ) ನೋಡು |
| ನಿತ್ಯನ್ | IV ೨೦ | ಶಾಶ್ವತನು, ಎಂದೆಂದೂ ಇರುವವನು |
| ನಿನದ | III ೨೪ | ಶಬ್ದ |
| ನಿಯತಿ | I ೨೨ | ವಿಧಿ |
| ನಿರಪೇಕ್ಷಕನ್ | I ೧ | ಅಪೇಕ್ಷಿಸದವನು, ಬಯಸದವನು |
| ನಿರವಯವನ್ | IV ೨೦ | ಅವಯವ, ಅಂಗ, ಭಾಗ-ಇಲ್ಲದವನು |
| ನಿರವಿಸು | IV ೪೯ | ನಿರೂಪಿಸು, ಹೇಳು |
| ನಿರ್ದುರಿತನ್ | IV ೨೦ | ಪಾಪವಿಲ್ಲದವನು |
| ನಿಲವಿನ ಸೂಡು | III ೬೭ | ಏರಿಳಿತಗಳಿಲ್ಲದ ಒಂದೇ ಸಮನಾದ ಕಾವು |
| ನಿಶ್ಛಿದ್ರ | IV ೧೬ | ಬಿರುಕು, ರಂಧ್ರ-ಇಲ್ಲದ್ದು |
| ನಿಶ್ಶಂಕತೆ | IV ೬೧ | ನಿಯೋಚನೆ, ನಿರ್ಭಯತೆ |
| ನೀರಜವನ | I ೧೧ | ತಾವರೆಯ ವನ |
| ನೀರಡಸು | III ೬೪ | ನೀರಡಿಕೆ, ಬಾಯಾರಿಕೆ-ಆಗು |
| ನೀರೋಡು | III ೫ | ಬಣ್ಣ ಕೆಡು, ಕಳೆಗುಂದು, ಮ್ಲಾನವಾಗು |
| ನೀಲಾಚಲ | III ೬೪ | ಕರಿಯ ಬೆಟ್ಟ |
| ನೆಗಪು | II ೫೨ | (ಮೇಲಕ್ಕೆ) ಎತ್ತು |
| ನೆಗಲ್ | IV ೪೪ | ಮಾಡು, ನಡೆ, ಆಚರಿಸು |
| ನೆಗಳ್ತೆ | I ೩೪ | ನಡತೆ, ಚರಿತ್ರೆ |
| ನೆತ್ತ | III ೪೦ | ಪಗಡೆ |
| ನೆರಂಬಡೆ | II ೪೨ | ಸಹಾಯ ಹೊಂದು |

| | | |
|---|---|---|
| ನೆರೆ | I ೮ | ಕೂಡು, ಸೇರು |
| ನೆಱೆ | IV ೬೩ | ಪೂರ್ತಿ, ಚೆನ್ನಾಗಿ |
| ನೆಱೆದ | III ೫೭ | ತುಂಬಿ ಬೆಳೆದ |
| ನೆರೆ+ಅಂದೆಯು | IV ೭ | ಕದಲದೆ ನೆರೆಯಾಗಿರುವ ಅಂದೆಯು (ಗೂಟೆ) |
| ನೊಸರ್ | I ೪೧ | ಹಣೆ |
| ನೋಂತು | IV ೪೬ | ವ್ರತಮಾಡಿ (ಧಾತು : ನೋನ್) |

## ಪ

| | | |
|---|---|---|
| ಪಜ್ವಳಿಸು | I ೩೯ | ಪ್ರಜ್ವಲಿಸು, ಹೊಳೆ |
| ಪಂಚಶತ | I ೧೭ | ಐನೂರು |
| ಪಟ್ಟು | II ೩೯ | ಮಲಗಿ (ಧಾತು : ಪಡು) |
| ಪಣ್ತು | III ೨ | ಹಣ್ಣು ಬಿಟ್ಟು (ಧಾತು : ಪಣ್) |
| ಪಥ್ಯ | I ೩೮ | ನಡೆಯತಕ್ಕದ್ದು, ಇಷ್ಟವಾದ್ದು |
| ಪದ (ನ್) | II ೨೮ | ಹದ, ಸ್ಥಿತಿ |
| ಪದಾಬ್ಜ | IV ೭೨ | ಅಡಿದಾವರೆ |
| ಪದುಳಿಸು | IV ೨೬ | ನೆಮ್ಮದಿಯಾಗು, ಸಮಾಧಾನಗೊಳ್ಳು |
| ಪಂದರ್ | IV ೭೨ | ಹಂದರ, ಚಪ್ಪರ |
| ಪಂದೆ | III ೨೪ | ಹಂದೆ, ಹೇಡಿ |
| ಪರಕೆ | I ೧೨ | ಹರಕೆ, ಆಶೀರ್ವಾದ |
| ಪರತ್ರೆ | IV ೨೨ | ಪರಲೋಕ, ಮೋಕ್ಷ |
| ಪರದ | III ೬೩ | ವ್ಯಾಪಾರಿ |
| ಪರಪು | III ೫೬ | ಹರವು, ಆರಹಾಕು |
| ಪರಮಶ್ರೀ (ವಧು, ಕಾಂತೆ) | I ೧, ೪೩ | ಮೋಕ್ಷಲಕ್ಷ್ಮಿ |
| ಪರಸಿ | III ೫೫ | ಹರಸಿಕೊಂಡು, ಹರಕೆಮಾಡಿಕೊಂಡು |
| ಪರಿ | I ೧೪ | ಬಗೆ, ಕ್ರಮ |
| ಪರಿಚ್ಛೇದಿಸು | IV ೪೪ | ತೀರ್ಮಾನಿಸು |
| ಪರಿಸರ | IV ೪ | ಸುತ್ತುಮುತ್ತು |
| ಪರಿಹರಿಸು | III ೧೫ | ತೆಗೆದುಹಾಕು, ಕಳೆ |
| ಪರೀಷಹ | I ೨೨ | (ಸಾಧನ ಮಾರ್ಗದಲ್ಲಿ ಯಾರೂ ಉದ್ದೇಶಿಸದೆ ಬರುವ) ಹೊರಗಿನ ಅಡ್ಡಿ, ಅಡಚಣೆ; ತಪೋವಿಘ್ನಕಾರಿಗಳಾದ ಕ್ಲೇಶಗಳು: ಹಸಿವು, ನೀರಡಿಕೆ ಮೊದಲಾದುವು |
| ಪರೆ | I ೪ | ಚೆದರು, ತೊಲಗು |
| ಪರೆ | IV ೭೪ | ಹಬ್ಬು, ಹರಡು, ಪ್ರಸರಿಸು |
| ಪಱಿಮೆ | II ೨೯ | ದುಂಬಿ |
| ಪಱಿದಲೆ | II ೨೦ | ಹರುಕು ತರೆ |
| ಪವಡಿಸು | II ೩೯ | ಮಲಗು |

| | | |
|---|---|---|
| ಪಸಾಯ ದಾನ | II ೧೩ | ಪ್ರಸಾದ (ಮೆಚ್ಚಿಕೊಟ್ಟ) ದಾನ |
| ಪಸಾಯಿತ | III ೬೫ | ಪ್ರಸಾದಿತ, ಮೆಚ್ಚುಪಡೆದ |
| ಪಣ್ | I ೨೪ | ಹಣ್ಣು |
| ಪೞಯ | II ೨೧ | ಹಳೆಯ |
| ಪಾಣ್ಬೆ | III ೩೯ | ಹಾದರಗಿತ್ತಿ, ಜಾರೆ |
| ಪಾತ್ರಮನಾಡು | II ೪೩ | ಕುಣಿ, ನರ್ತನಮಾಡು |
| ಪಾದರಿ | II ೫೧ | ಹಾದರಗಿತ್ತಿ, ಜಾರೆ |
| ಪಾರ್ವನ್ | III ೫೦ | ಬ್ರಾಹ್ಮಣ (ಪಾರ್ = ನೋಡು) |
| ಪಾಳಿ | I ೨೮ | ಕ್ರಮ, ಸಾಲು |
| ಪಿಟ್ಟು | III ೧೮ | ಹಿಟ್ಟು |
| ಪಿಂಡು | I ೨೯ | ಹಿಂಡು, ಗುಂಪು |
| ಪಿತ್ತಳೆ | III ೬೩ | ಹಿತ್ತಾಳೆ |
| ಪಿಸುಳ್ | III ೪೧ | ಹಿಸಿದುಹೋಗು |
| ಪಿಳುಕು | III ೩೪ | ಮರಿ |
| ಪೀತಚ್ಛತ್ರ | IV ೧ | ಹೊಂಗೊಡೆ, ಚಿನ್ನದ ಚತ್ರಿ |
| ಪುಂಜ | III ೬೫ | ಹುಂಜ, ಗಂಡುಕೋಳಿ |
| ಪುರುದೇವ | I ೧ | ಮೊದಲನೆಯ ತೀರ್ಥಂಕರ |
| ಪುರುಳ್ | IV ೬೦ | ಹುರುಳು, ಅರ್ಥ |
| ಪುರ್ಬು | IV ೫ | ಹುಬ್ಬು |
| ಪುಲಿಗೋಣ | III ೪೩ | ಹುಲಿಯನ್ನು ಹಿಡಿಯಲು ಸೆಳೆಯಾಗಿ ಕಟ್ಟುವ ಕೋಣ |
| ಪುಳಿ | II ೪೦ | ಹುಳಿ |
| ಪುಳಿನ | II ೧೧ | ಮರಳು ದಿಬ್ಬ |
| ಪುಳಿಂದ | II ೭ | ಬೇಡ, ಬೇಟೆಗಾರ |
| ಪುೞುಕರು | II ೩೬ | ಹುಳುಕರು, ಕ್ಷುದ್ರರು |
| ಪುೞುಪತ್ತು | III ೫೬ | ಹುಳುಹಿಡಿ, ಹುಳುತು ಹೋಗು |
| ಪೆತ್ತಿರೆ | III ೬೩ | ಹೊಂದಿರಲು, ಪಡೆದಿರಲು (ಧಾತು : ಪೆಱು) |
| ಪೆಱಗೆ | II ೩೯ | ಹಿಂಗಡೆ |
| ಪೆಱತು | IV ೧೫ | ಬೇರೆ (ಮದು) |
| ಪೆಱೆ | I ೩೫ | ತಿಂಗಳು, ಚಂದ್ರ |
| ಪೆಸರ್ಗೊಳ್ | I ೧೮ | ಹೆಸರು ಹೇಳು, ಉಚ್ಚರಿಸು |
| ಪೆಳಱು | I ೨೯ | ಹೆದರು |
| ಪೇರ್ + ಅಡಗು | I ೩೦ | ಹೆಚ್ಚು ಮಾಂಸ |
| ಪೇರ್ + ಉರ | III ೧ | ಅಗಲ, ದೊಡ್ಡ–ಎದೆ |
| ಪೊಡವಡು | IV ೩೭ | ನಮಸ್ಕಾರಮಾಡು |
| ಪೊಣ್ಮು | IV ೧೬ | ಹೊಮ್ಮು, ಹೊರತೋರು, ಉಂಟಾಗು |
| ಪೊನ್ | IV ೧೮ | ಹೊನ್ನು, ಲೋಹ |
| ಪೊಂಪುಳಿ | IV ೨೮ | ಉಕ್ಕು, ಅಧಿಕ್ಯ |
| ಪೊಯ್ವಡೆ(+ಪಡೆ) | III ೨೪ | ಏಟುತಿನ್ನು |
| ಪೊಯ್‌ಸಾಸವೆ | III ೬೭ | ಹೊಯ್ಯುವ ಸಾಸವೆ |

| | | |
|---|---|---|
| ಪೊರೆ | II ೫೧ | ಹೊರೆ, ಹತ್ತಿರ |
| ಪೊರೆಯೇಱು | I ೪ | ಕಳೆದುಂಬು, ಕಾಂತಿಗೂಡು |
| ಪೊಱಂಟ | II ೨೦ | ಹೊರಕ್ಕೆ ಹೊರಟುಕೊಂಡ |
| ಪೊಱಮಾಡು | I ೧೬ | ಹೊರ-ಹೊರಡು, ಬರು |
| ಪೊಲಂಬು | I ೩೭ | ಹೊಲಬು, ಜಾಡು, ದಾರಿ |
| ಪೊಲ್ಲದು | IV ೧೦ | ಹೊಂದದು, ಸರಿಯಲ್ಲ(ದ್ದು) |
| ಪೊಲ್ಲಮೆ | II ೨೪ | ಕೇಡು, ಕೆಟ್ಟದ್ದು, ದೋಷ |
| ಪೊಳಂಕು | III ೪೬ | ಹೊಳೆದು ಹಾರಾಡು, ಚಿಮ್ಮು |
| ಪೋಗಂಡ | II ೪೧ | ಅಂಗಹೀನ |
| ಪೋಂತು | III ೫೩ | ಹೋತ |
| ಪೋರಿ | IV ೪೮ | ಹೋರಿ, ಗಂಡು |
| ಪೋರ್ಕುೞಿ | III ೬೬ | ಹೋರಾಟ |
| ಪ್ರಕುಪಿತಚಿತ್ತನ್ | II ೪೯ | ಕೋಪಗೊಂಡ ಮನದವನು |
| ಪ್ರಚಯ | II ೪೭ | ಗುಂಪು, ಪುಂಜ |
| ಪ್ರಚ್ಛನ್ನ | II ೩೦ | ಮರೆ, ಒರೆ |
| ಪ್ರತಿಪಕ್ಷನ್ | IV ೨೫ | ಎದುರಾಳಿ, ಹಗೆ |
| ಪ್ರಧಾನರ್ | III ೨೮ | ಮಂತ್ರಿಗಳು, ಪ್ರಮುಖರು |

## ಬ

| | | |
|---|---|---|
| ಬಗೆಕದಡಿ | II ೫೧ | ಮನಕಲಕಿ |
| ಬಟ್ಟೆ | III ೧೪ | ದಾರಿ, ಮಾರ್ಗ |
| ಬಣಂಬೆ | IV ೪೦ | ಬಣಬೆ, ಮೆದೆ, ರಾಶಿ |
| ಬದಗ | II ೧೨ | ಕೀಳಾಳು, ಕ್ಷುದ್ರಸೇವಕ |
| ಬದಗುಳಿಗ | II ೪೦ | ಬದಗ |
| ಬಂದಿಸು | IV ೬೩ | ವಂದಿಸು, ನಮಸ್ಕರಿಸು |
| ಬಱುಗೊಳ | III ೫ | ಬತ್ತಿದ, ಒಣಗಿದ-ಕೊಳ |
| ಬರ್ದಳೊ | III ೬೨ | ಬದುಕಿದಳೊ (ಧಾತು : ಬದ್) |
| ಬರ್ದಿದ | IV ೪೫ | ಬದುಕಿದ, ಸಂಸಾರ ನಡಸಿದ |
| ಬಲಗೊಳ್ | I ೧೩ | ಪ್ರದಕ್ಷಿಣೆಮಾಡು |
| ಬಸನಿಗತನ | III ೬೯ | ದುರ್ವ್ಯಸನಕ್ಕೆ ಬಿದ್ದಿರುವುದು |
| ಬಸಿಱ್ | II ೨೦ | ಹೊಟ್ಟೆ |
| ಬಸ್ತ್ರಕ | III ೫೨ | ಗಂಡಾಡು |
| ಬಳರಿ | I ೧೬ | ಮಾರಿಯ ಹೆಸರು (ಬಳಾರಿ) |
| ಬಾಡು | III ೭೧ | ಮಾಂಸ |
| ಬಾಣಸು | I ೨೬ | ಅಡಿಗೆಯ ಮನೆ |
| ಬಾರಿಪರ್ | III ೧೭ | ನಿವಾರಿಸುವವರು, ಬಿಡಿಸುವವರು |
| ಬಾರೇಟ್ | II ೩೨ | ಚರ್ಮ ಕಿತ್ತುಬರು |
| ಬಾಷ್ಪ | IV ೨೮ | ಕಣ್ಣೀರು |

| | | |
|---|---|---|
| ಬಾಸಣಿಸು | III ೬೭ | ಮುಚ್ಚು |
| ಬಾಜ್ | I ೬ | ಬಾಳು, ಬದುಕು |
| ಬಿಧಿ | III ೫೦ | ವಿಧಿ |
| ಬಿನದ | II ೧೩ | ವಿನೋದ |
| ಬಿಬ್ಬಿಱುವರ್(+ಪರ್)II ೨೦ | | ಉಬ್ಬು ಹಲ್ಲು |
| ಬಿಲ್ಲುಂಬೆಱಗು | IV ೬೨ | ಬಹಳ ಆಶ್ಚರ್ಯ |
| ಬೀಜಾವಾಪ | III ೩೨ | ಬಿತ್ತನೆ, ಬೀಜನೆಡುವುದು |
| ಬೀಟೆ | II ೩೨ | ಬಿರುಕು |
| ಬೆಮೆಯಾದ | III ೫೨ | ಸಂಭೋಗಕಾಲ ಒದಗಿದ |
| ಬೆಂತರ | III ೨೨ | ಗಾಳಿ, ಪಿಶಾಚಿ |
| ಬೆರಗು | III ೩೧ | ಉಪಾಯ |
| ಬೆರ್ಚು | I ೨೮ | ಹಕ್ಕಿ ಹೆದರಿಸಲು ಕಟ್ಟಿದ ಬೊಂಬೆ ಮೊದಲಾದುವು |
| ಬೆಸಗೊಳ್ | I ೩೬ | ಕೇಳು |
| ಬೆಸನ | I ೩೦ | ವ್ಯಸನ, ಹಂಬಲು |
| ಬೇಡು | I ೨೫ | ಕೋರು, ಆಸೆಪಡು |

## ಭ

| | | |
|---|---|---|
| ಭಂಗಿ | II ೫೨ | ರೀತಿ, ಅವಸ್ಥೆ |
| ಭವನಿಬದ್ಧ | I ೩೮ | ಸಂಸಾರದ ಕಟ್ಟು, ತೊಡರು |
| ಭವರೋಷ | III ೩೮ | (ಹೋದ) ಜನ್ಮದ ಕೋಪ |
| ಭವಾಂತರವ್ಯಾಮೋಹ | III ೪೨ | ಬೇರೆ ಜನ್ಮದಿಂದ ಬಂದ ಮೋಹ |
| ಭವ್ಯ | I ೪೫ | ಜೈನಧರ್ಮ ಸ್ವೀಕಾರಕ್ಕೆ ಯೋಗ್ಯತೆ ಬಂದವನು, ಪಕ್ವಾವಸ್ಥೆಯಲ್ಲಿರುವವನು |
| ಭೂತಚತುಷ್ಟ + ಅವಯವ | IV ೯ | ಪೃಥ್ವಿ, ಅಪ್ಪು, ವಾಯು, ತೇಜಸ್ಸುಗಳಿಂದ ಆದ ದೇಹ |
| ಭೈರವ | I ೩೧ | ಈಶ್ವರನ ಎಂಟು ರೂಪಗಳಲ್ಲಿ ಒಂದು |
| ಭೌಮಾಷ್ಟಮಿ | III ೨೧ | ಮಂಗಳವಾರದ ಅಷ್ಟಮಿ? |

## ಮ

| | | |
|---|---|---|
| ಮಕುಟ ಮಸ್ತಕ | II ೨ | ಕಿರೀಟ ಧರಿಸಿದ ತಲೆ |
| ಮಗುಳ್ | II ೧೫ | ಹಿಂದಿರುಗು |
| ಮಗ್ಗು (ಮಬ್ಬು) | II ೧೨ | ತಗ್ಗು, ಅಡಗು |
| ಮಗ್ಗುಲಿಕು | III ೬೪ | ಮಗ್ಗುಲಾಗಿ ಒರಗು |
| ಮಂಚಿಕೆ | I ೧೦ | ಒಂದು ಬಗೆಯ ಅಟ್ಟಣೆ |

| | | |
|---|---|---|
| ಮಣಕು | IV ೪೦ | (ಎಣ್ಣೆ, ಬೆವರು, ಮೊದಲಾದುವುಗಳ) ಗಬ್ಬು, ನಾತ |
| ಮದಿರ್ | I ೩೦ | (ಪಾಳಿಯ) ಗೋಡೆ |
| ಮನದನ್ನಳ್ | II ೧೫ | ತನ್ನ ಮನಸ್ಸಿನಂಥವಳು, ಪ್ರಾಣಪ್ರಿಯೆ |
| ಮನಸಿಜ | II ೪೨ | ಮನ್ಮಥ, ಕಾಮ |
| ಮನುಜೇಂದ್ರಾಂಗನೆ | II ೧೭ | ರಾಣಿ, ಅರಸಿ |
| ಮಂದಾರ | III ೨ | ಸ್ವರ್ಗದ ಒಂದು ಮರ |
| ಮಯೂರ | III ೪೧ | ನವಿಲು |
| ಮರಲ್ | IV ೭೨ | ಹೂಬಿಡು, ಅರಳು |
| ಮಱುಗು | III ೨೭ | ಕುದಿ, ಸಂಕಟಪಡು |
| ಮಲಯಜ | II ೨೪ | ಶ್ರೀಗಂಧ |
| ಮಲಯಾನಿಲ | I ೧೧ | ಮಲಯಪರ್ವತದ ಗಾಳಿ |
| ಮಸಿಮುಸುಡನ್ | II ೩೭ | ಕರಿಮೂತಿಯವನು |
| ಮಸುಳ್ | IV ೨೩ | ಕಳೆಗುಂದು, ಮಾಸು, ಕೆಡು |
| ಮಸ್ತಕ | II ೨ | ತಲೆ |
| ಮಹಳ | III ೫೫ | ಮಹಾಲಯ |
| ಮಹಿಷ | III ೬೫ | ಎಮ್ಮೆ |
| ಮಾಡ | III ೬೧ | ಮನೆ |
| ಮಾಡಿತು | IV ೧೯ | ಮಾಡಿದ್ದು |
| ಮಾಣ್ | I ೧೪ | ಬಿಡು |
| ಮಾಣಿಸು | IV ೩೬ | ಬಿಡಿಸು, ತಪ್ಪು |
| ಮಾದರ | III ೫೪ | ಹೊಲೆಯ |
| ಮಾನಸವಾೞ್ (+ಬಾೞ್) | III ೧೩ | ಮನುಷ್ಯನ ಬಾಳು |
| ಮಾಱಂಕ | III ೬೦ | ಪಡಿಯಚ್ಚು, ಹೋಲಿಕೆ |
| ಮಾರ್ಗಾವಲಗ್ನನೇತ್ರೆ | II ೧೭ | (ಕೆಳದಿ ಬರುವ) ದಾರಿಯಲ್ಲಿ ನೆಟ್ಟ ಕಣ್ಣುಳ್ಳವಳು, ಹಾರೈಸಿ ಎದುರು ನೋಡುತ್ತಿರುವವಳು |
| ಮಾದ್ಕೆ | III ೨೯ | ಬಗೆ, ತೆರ, ರೀತಿ |
| ಮಿಡುಕು | II ೨೩ | ಮಿಡಿಯುವುದು, ತುಡಿತ, ನೋವು |
| ಮಿಡುಕು | IV ೬ | ಅಲುಗು, ಅಳ್ಳಾಡು |
| ಮಿಥ್ಯಾಕಂದರ | IV ೧೪ | ಹುಸಿ (ಎಂಬ) ಗವಿ |
| ಮಿಳಿ | II ೩೦ | ಚರ್ಮದ ಹಗ್ಗ, ಬಾರು |
| ಮುಗಿ | I ೪೦ | ಮುಚ್ಚು |
| ಮುಗಿಲ್ | IV ೨೮ | ಮೋಡ |
| ಮುಗುಳ್ | I ೧೧ | ಮೊಗ್ಗು (ಆಗು) |
| ಮುಡಿ | II ೩೨ | ಕೂದಲ ಗಂಟು, ಶಿಖೆ, ತಲೆ |
| ಮುಡಿ(ಡು)ಪು | III ೬೧ | ಮುಗಿಸು, ಸಾಯಿ |
| ಮುದಿರ್ | IV ೪೭ | ಮುದುರಿಹೋಗು, ಕುಗ್ಗು |
| ಮುದುದೊವಲ್ | II ೨೨ | ಮುದಿಯಾದ, ಸುಕ್ಕಿದ - ಚರ್ಮ |

| | | |
|---|---|---|
| ಮುನ್ನೀರ್ | III ೬೪ | ಕಡಲು, ಸಮುದ್ರ |
| ಮುರುಟಿದ | II ೨೦ | ಸುರುಟಿಕೊಂಡ |
| ಮುರುಡನ್ | II ೭೨ | ಮುದುರಿ, ಸುರುಟಿ - ಹೋಗಿರುವವನು |
| ಮುರುಡು | II ೨೪ | ವಕ್ರ, ಸೊಟ್ಟು, ಒರಟು |
| ಮೂದಲಿಸು | IV ೬೦ | ಕೆಣಕಿ ಕರೆ (challenge) |
| ಮೂದಲೆ (ಉಲಿ) | I ೯ | ಕೆಣಕುನುಡಿ, ಚುಚ್ಚುಮಾತು, ಜರೆಯುವುದು |
| ಮೂರಿ | I ೩೧ | ಗೂಳಿ, ಕೋಣ |
| ಮೃಗಮದ | II ೧೦ | ಕಸ್ತೂರಿ |
| ಮೃಗಯಾನರ್ಮಮಾನ | III ೫೫ | ಬೇಟೆಯ ವಿನೋದದ ಮನಸ್ಸಿನವನು |
| ಮೃತಿ | III ೩೨ | ಸಾವು, ಮರಣ |
| ಮೆಱುವ | II ೧೧ | ಶೋಭಿಸುವ |
| ಮೇಗು | III ೧೩ | ಮೇಲಾದುದ್ದು, ಒಳ್ಳೆಯದು |
| ಮೇದಿನಿ | II ೧೯ | ಭೂಮಿ |
| ಮೇಳಿಸಿಕೊಂಡು | III ೩೧ | (ಹಾವಭಾವದಿಂದ) ಪ್ರೀತಿತೋರಿ, ಪುಸಲಾಯಿಸಿಕೊಂಡು |
| ಮೊದಲ್ | II ೨೨ | ಮೂಲ, ಬೇರು |
| ಮೊನಸು | IV ೨ | (ಮೊಗುಗ್ಗ) ಮೂತಿಯಿಡು |
| ಮೊರಡಿ | I ೨೪ | ಕಲ್ಲುಗುಡ್ಡ |
| ಮೊಳೆವೋಗು | I ೯ | ಮೊಳೆ, ಆಗತಾನೆ ಹುಟ್ಟು |
| ಮೋಳಿಗೆ | II ೨೨ | (ಸೌದೆಯ) ಕಟ್ಟು, ಕಂತೆ, ಹೊರೆ |

## ಯ

| | | |
|---|---|---|
| ಯುಗ(ಳ) | I ೧೪ | ಎರಡು, ಜೋಡಿ |
| ಯೋಜಿಸು | IV ೫೬ | ಕೂಡಿಸು, ಹೊಂದಿಸು |

## ರ

| | | |
|---|---|---|
| ರಣಧೌತ | II ೩೭ | ಯುದ್ಧದಲ್ಲಿ (ರಕ್ತದಿಂದ) ಮಿಂದುದ್ದು |
| ರವ | IV೧೪ | ಧ್ವನಿ |
| ರಸಿಗೆ | III ೬೯ | ಗಾಯದ ನೀರು |
| ರಾಢೆ | III ೭೫ | ಅನೂರಾಧಾ ನಕ್ಷತ್ರ |

## ಲ

| | | |
|---|---|---|
| ಲಕ್ಕ | I ೧೩ | ಲಕ್ಷ |
| ಲಂಪಣ | II ೪೮ | ಲಂಪಟ, ಕಾಮುಕ |

| | | |
|---|---|---|
| ಲುರಾಯು | III ೬೪ | ಕೋಣ |
| ರೆಂಕರ‍ | I ೧೩ | ಸೇವಕರು |
| ರೋಹಿತಮತ್ಸ್ಯ | III ೪೦ | ಕೆಮ್ಮೀನು |

## ವ

| | | |
|---|---|---|
| ವಕ್ತ್ರ | IV ೭೪ | ಮುಖ, ಬಾಯಿ |
| ವನಜವನ | I ೧೯ | ತಾವರೆಯ ವನ |
| ವನಮೃಗ | IV ೩೪ | ಜಿಂಕೆ, ಎರಲೆ |
| ವಂದಿ | III ೨ | ಹೊಗಳುಭಟ್ಟ |
| ವರ್ತಿ | IV ೬ | ಬತ್ತಿ |
| ವಾರಿ | I ೨೮ | ಕತ್ತಿ ; (ವಾರಿ) ? |
| ವಾರ‍ಬಿಂದು | II ೨೩ | ನೀರಹನಿ |
| ವಿನೇಯ | IV ೩೫ | ನಯವಂತ, ಮಾರ್ಗತಿಳಿದವನು |
| ವಿಪ್ರ | III ೫೯ | ಬ್ರಾಹ್ಮಣ |
| ವಿಭ್ರಮ | II ೧೧ | ಶೃಂಗಾರವಿಲಾಸ |
| ವಿಮೋಹಮೃಗ | IV ೧೪ | ಮಾಯಾಮೃಗ |
| ವಿಷಣ್ಣಆನನೆ | II ೧೭ | ಕಳೆಗೆಟ್ಟ, ಕಂದಿದ - ಮುಖದವಳು |
| ವಿಷಯ | I ೫ | ದೇಶ, ನಾಡು |
| ವಿಸರುಹ | III ೭೫ | ತಾವರೆ |
| ವಿಳಯ | I ೮ | ಪ್ರಳಯ, ನಾಶ |
| ವೆರಸು (ಬೆರಸು) | I ೮ | ಕೂಡಿ, ಸೇರಿ |
| ವೇಟ್ಪುದು(ಬೇಟ್ಪುದು) | I ೧೫ | ಬೇಕು |
| ವ್ರಜ | IV ೬೪ | ಗುಂಪು, ಸಮೂಹ |

## ಶ

| | | |
|---|---|---|
| ಶಯ್ಯಾತಳ | II ೪೦ | ಹಾಸಿಗೆ |
| ಶೀತಕರ | I ೪೦ | ಚಂದ್ರ |
| ಶೀತಾಂಶು | IV ೪೬ | ತಣ್ಗದಿರ, ಚಂದ್ರ |
| ಶೀರ್ಷಾಭರಣ | I ೫ | ತಲೆಯೊಡವೆ, ಉತ್ತಮವಾದ್ದು |
| ಶುಭೇತರ | III ೧೧ | ಅಶುಭ, ಕೇಡು |
| ಶ್ರಾವಕಜನ | I ೩ | ಜೈನಗೃಹಸ್ಥ (ಯತಿಯಲ್ಲದವನು) |

## ಸ

| | | |
|---|---|---|
| ಸಂಸಾರ | III ೭೩ | ಜನ್ಮ |
| ಸಂಕಲ್ಪನ ವಧೆ | IV ೫೩ | ಮನಸ್ಸಿನಲ್ಲಿ ನೆನೆದ ಕೊಲೆ |

| | | |
|---|---|---|
| ಸದ್ಬೋಧ | IV ೩೯ | ಸುಜ್ಞಾನ, ನಲ್ಲರಿವು |
| ಸಮಾಧಿಮರಣ | IV ೩೦ | ಸಮಾಧಿಯಲ್ಲಿ, ಧ್ಯಾನದಲ್ಲಿ—ಇದ್ದಾಗ ಆದ ಸಾವು |
| ಸಮೆ | III ೨೨ | ಮಾಡು |
| ಸಮ್ಯಕ್ತ್ವ | IV ೨೧ | ಉತ್ತಮ ದಾರಿ, ಧರ್ಮ |
| ಸಯ್ಪು | I ೪೩ | ನೇರವಾದ್ದು, ನೇರ್ಪು, ಪುಣ್ಯ |
| ಸರಲ್ | IV ೨೯ | ಸರಳು, ಬಾಣ |
| ಸರವಿ | III ೪೩ | ಹುರಿ, ಹಗ್ಗ |
| ಸರಸಿರುಹ | I ೪೦ | ತಾವರೆ |
| ಸರ್ವಭಾಷಾಸಾಮಾನ್ಯ | I ೪೪ | ಬೇರೆಬೇರೆ ಜನರಿಗೆ ಅವರವರ ಭಾಷೆಯಾಗಿ ಕೇಳಿಸುವ ದೇವಭಾಷೆ |
| ಸರ್ಲೆಂ | III ೬೦ | ಸಲ್ಲುವೆವು, ಸೇರುವೆವು |
| ಸವಣ | II ೪೯ | ಶ್ರಮಣ, ಜೈನಯತಿ |
| ಸವಿದುಣ್ | III ೩೦ | ರುಚಿಹತ್ತಿ ತಿನ್ನು |
| ಸಾಗುದುರೆ | III ೧೩ | ಸಾಯು(ತ್ತಿರು)ವ ಕುದುರೆ |
| ಸಾರಂಗಟ್ಟು | III ೬೪ | ಕಟ್ಟೆಹಾಕು |
| ಸಿಂಟನ್ | IV ೪೧ | (ತೊಳಯದೆ) ಹೊಲಸುನಾರುವವನು |
| ಸಿಸಿರ | I ೧೦ | ಶಿಶಿರ |
| ಸುಖೋದ್ದೀಪನ | I ೭ | ಸುಖಹೆಚ್ಚಿಸುವುದು |
| ಸುಧಾಂಶು | III ೩೯ | ಚಂದ್ರ |
| ಸುಧಾಬಿಂದು | III ೬ | ಬೆಳುದಿಂಗಳ ಹನಿ |
| ಸುಧಾರ್ಣವ | IV ೩೯ | ಹಾಲುಗಡಲು, ಕ್ಷೀರಸಮುದ್ರ |
| ಸುಪಕ್ಷ | III ೭೩ | ಒಳ್ಳೆಯ ಶುಕ್ಲ(ಪಕ್ಷ), ರೆಕ್ಕೆ |
| ಸುಮನೋಬಾಣ | II ೭ | ಕಾಮ, ಮನ್ಮಥ |
| ಸುಯ್ | III ೬ | ಉಸಿರು |
| ಸುವ್ರತ | I ೧ | ೨೦ನೆಯ ತೀರ್ಥಂಕರ |
| ಸೂಡು | III ೬೭ | ಸುಡುವುದು, ಕಾವು |
| ಸೂಡೆಗ್ಗ | II ೧೨ | ಸರದಿಯ ಮೇರೆ |
| ಸೆಜ್ಜರ | II ೧೧ | ಮಲಗುವ ಮನೆ |
| ಸೆಜ್ಜೆಯ ದವಳಾರ | III ೩೦ | ಮಲಗುವ (ಸುಣ್ಣ ತೊಡೆದ) ಮನೆ |
| ಸೈರಿಭ | III ೭೩ | ಕೋಣ |
| ಸೊದೆ | IV ೧೨ | ಸುಧೆ, ಸುಣ್ಣ |
| ಸೋಗೆ | III ೩೩ | ನವಿಲಗರಿ |
| ಸೋಲಿಸು | III ೩೩ | ಮೋಹಗೊಳಿಸು |
| ಸೌರಭ | III ೨೯ | ಕಂಪು, ವಾಸನೆ |
| ಸ್ಮರಚಾಪ | II ೨೪ | (ಕಾಮನ ಬಿಲ್ಲು, ಎಂದರೆ) ಕಬ್ಬು |
| ಸ್ಮೇರ | IV ೪೬ | ಮಂದಹಾಸದ, ಪ್ರಫುಲ್ಲ, ಅರಳಿದ |
| ಸ್ರಜ | IV ೬೪ | ಹೂವಿನ ಸರ |
| ಸ್ವನ | IV ೭೪ | ನಾದ, ಧ್ವನಿ |
| ಸ್ವರವೇಧವಿದ್ಯೆ | IV ೨೯ | ಧ್ವನಿಯಿಂದ ಗುರುತಿಸಿ ಬಾಣಬಿಡುವ ವಿದ್ಯೆ |

# ಹ

| | | |
|---|---|---|
| ಹಪ್ಪಳಿಕೆಯಾಗು | II ೨೦ | ಚಪ್ಪಟೆಯಾಗು |
| ಹರಿ | II ೩೬ | ಸಿಂಹ |
| ಹಾ | III ೩೩ | ದಾಳಿ |
| ಹರಿಣ | I ೨೦ | ಜಿಂಕೆ, ಚಿಗರಿ |
| ಹಸಾದ | I ೧೫ | ಪ್ರಸಾದ, ಸಂತೋಷ |
| ಹೇಂಟೆ | III ೭೫ | ಹೆಣ್ಣುಕೋಳಿ |
| ಹೂಜನು | II ೮ | (ಒಂದು ಬಗೆಯ) ಪಾರಿವಾಳ |

---

## PUBLICATIONS OF THE MYSORE UNIVERSITY

### I. ENGLISH

1. **The Mysore Tribes & Castes.** By H. V. Nanjundayya, M.A., M.L., C.I.E. and Diwan Bahadur L. K. Anantha-krishna Iyer, B.A., M.D. HON. (Bres.).
   Four Volumes: *Volume II, 1928; Volume III, 1930; Volume IV, 1931; Volume I, 1935.* Each volume is profusely illustrated — Volume I Rs 15 0 0
   Other volumes each Rs 12 8 0
   Appendix to the Four volumes of the Mysore Tribes and Castes.
2. **Pramana Samuccaya of Acarya Dinnaga.** Chap. I. By H. R. Rangaswami Iyengar, M.A. Rs. 3 0 0
3. **Labour and Housing in Bangalore City.** By C. Narasimha Moorthy, M.A., and R. K. Srinivasan, M.A.
   Re. 0 8 0
4. **The Munro System of British Statesmanship in India.** By K. N. Venkatasubba Sastry, M.A., PH.D., F.R.HIST.S.
   Rs. 3 0 0
5. **Sources of Karnataka History, Vol. I.** By S. Srikanta Sastry, M.A. Ordinary Rs. 3 0 0 Special Rs. 3 8 0

### II. KANNADA

(*a*) *General*

1. **History of Kannada Language.**
2. **History of Kannada Literature.** By Praktanavimarsa Vichakshana Mahamahopadhyaya Rao Bahadur R. Narasimhachar, M.A., M.R.A.S. Each Re. 1 0 0
3. **Kannada Kaipidi, Vol. I.** Ordinary Rs. 1 4 0
   Special Rs. 1 12 0

(*b*) *Mysore University Kannada Publication Series*

1. **Harischandrakavyasangraha.**
   Abridged and Edited By T. S Venkannaiya, M.A. and A. R. Krishna Sastry, M.A. Re. 0 12 0
2. **Kadambari Sangraha.** Abridged and Edited By T. S. Venkannaiya, M.A. Re. 0 12 0
3. **Prabhulingaleeleya Sangraha.** Abridged and Edited By M. S. Basavalingayya, M.A., B.L. and M. R. Srinivasa Moorthy, B.A. Re. 0 12 0
4. **Sakratisana Koneya Dinagalu.** Translation of Four Socratic Dialogues with an Introduction By A. N. Murthy Rao, M.A. Ordinary Re. 0 12 0
   Calico Re. 1 0 0

5. **Sri Ramakrishna Paramahamsa.**
By K. V. Puttappa, M.A. Ordinary Rs. 0 12 0
Calico Rs. 1 4 0

6. **Rabindranath Tagore.** By M. Venkatesa Iyengar, M.A.
Ordinary Rs. 0 12 0. Calico Rs. 1 4 0

7. **Arogya : Adara Jnana Mattu Sadhana.**
By J. A. Iswaramurthy, B.A., L.M.S., B.SC.
Ordinary Rs. 0 12 0. Calico Rs. 1 4 0

8. **Pamparamayana Sangraha.** By Asthana Maha-Vidwan Tirivallur Srinivasaraghavachar and D. L. Narasimha char, M.A. Ordinary Rs 0 12 0
Calico Re. 1 0 0

9. **Hana Prapancha.** By V. Sitharamiah, M.A.
Ordinary Rs. 0 12 0. Calico Rs. 1 4 0

10. **Sanskrit Drama.** By A. R. Krishna Sastry, M.A.
Ordinary Rs. 0 12 0 Calico Rs 1 4 0

11. **Jiva Vignana.** By B. Venkatanaranappa, M.A.
Ordinary Rs. 0 12 0. Calico Rs. 1 4 0

12. **Hindu Darsanasara.** By Mahamahopadhyaya Panditaratnam L. Srinivasachar. Ordinary Rs. 0 12 0
Calico Rs. 1 4 0

13. **Rajaniti.** By H. Krishna Rao, M.A.
Ordinary Rs. 0 12 0. Calico Rs. 1 4 0

14. **Hadibadeyadharma.** Edited by Sri D. Champabai, M.A.
Ordinary Rs. 0 12 0. Calico Rs. 1 4 0

15. **Purana Nama Chudamani.** By B. Rama Rao, M.A., LL.B., and Panyam Sundara Sastry, Vidvan
Ordinary Rs. 2 12 0
Calico Rs. 3 4 0

16. **Yasodharacharite.** Edited by K. V. Raghavachar, M.A., B.T. Ordinary Rs.
Calico Rs.

17. **Short History of Greek Philosophy.** By K. R. Srinivasa Iyengar M. A. Ordinary Rs. 1 0 0
Calico Rs. 1 4 0

18. **Indian Geology.** By Y. Nagappa, M.SC.
Ordinary Re. 0 12 0
Calico Rs. 1 4 0

19. **Vachana Dharmasara.** By M. R. Srinivasa Murthy, B.A.
Ordinary Re. 0 12 0
Calico Rs. 1 4 0

---

*Note.*—THE PUBLICATIONS ARE AVAILABLE FOR SALE
*at*
**THE ORIENTAL LIBRARY, MYSORE**